# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




ಚಿತ್ರಗಳು : ಕೆದಿಲಾಯ, ಮೋನಪ್ಪ, ರಾಂಚಂದ್ರ ಕೊಪ್ಪಲು, ಶ್ರೀಹರಿ, ಜಿ. ಎಂ. ಬೊಮ್ಮಳ್ಳಿ, ಎಸ್. ಆರ್. ಬೊಮ್ಮಳ್ಳಿ

ಮುಖಪುಟ : ಪ್ರಯಾಗರಾಜ, ಅಲಹಾಬಾದ್ ಅರ್ಧಕುಂಭದ ಮುಸ್ಸಂಜೆ

ವರ್ಣಚಿತ್ರ : ಕೆ. ಎಸ್. ಪಾರ್ಥಸಾರಥಿ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ ಸಮಕಾಲೀನ ವಿಪರ್ಯಾಸಗಳಲ್ಲಿ ಸತ್ಯಾಗ್ರಹದ ಬಗ್ಗೆ ಶ್ಲಾಘನೆಯ ಮಾತುಗಳನ್ನಾಡಿ ಕ್ರಿಯೆಯಲ್ಲಿ ಅದಕ್ಕೆ ಅವಕಾಶವಿಲ್ಲದಂತೆ ಮಾಡುವುದು ಸಹ ಒಂದು. ''ಸತ್ಯಾಗ್ರಹ'' ಎಂಬೊಂದು ಶಕ್ತಿಶಾಲಿ ಕಲ್ಪನೆ ಮತ್ತು ಸಾಧನೆಯು ಪ್ರಾಯೋಗಿಕವಾಗಿ ಅಸ್ತಿತ್ವಕ್ಕೆ ಬಂದು ಒಂದುನೂರು ವರ್ಷಗಳಾದುವು. ಅದರ ಶತಮಾನೋತ್ಸವ ಅಲ್ಲಲ್ಲಿ ಜರುಗಿದೆ. ಆದರೆ ಎಲ್ಲೆಲ್ಲೂ ಅದಕ್ಕೆ ಪ್ರತಿಬಂಧಕಗಳನ್ನು ಒಡ್ಡಲಾಗುತ್ತಿದೆ. ಕೆಲವರು ಪಶ್ಚಿಮ ಬಂಗಾಳದ ಸಿಂಗೂರ್ ಮತ್ತು ನಂದಿಗ್ರಾಮಗಳ ಹಿನ್ನೆಲೆಯಲ್ಲಿ ಮಾತ್ರವೇ ಇದನ್ನು ವ್ಯಾಖ್ಯಾನಿಸುವುದು ಅವರ ರಾಜಕೀಯ ದೃಷ್ಟಿದೋಷದಿಂದ. ನಮ್ಮ ರಾಜ್ಯದಲ್ಲಿ ಶಾಸನಸಭೆ ನಡೆಯುತ್ತ ದೆಂದರೆ ಬೆಂಗಳೂರಿನ ವಿಧಾನಸೌಧದ ಒಂದು ಮೈಲಿ ಸುತ್ತಳತೆಯಲ್ಲಿ ಯಾವ ಪ್ರತಿಭಟನೆ-ಮೆರವಣಿಗೆಗಳೂ ನಡೆಯದಂತೆ ನಿಯಂತ್ರಿಸಲಾಗುತ್ತದೆ. ಇದು ಹತ್ತು-ಹದಿನೈದು ವರ್ಷಗಳಿಂದ ಜಾರಿಯಲ್ಲಿದೆಯಾದರೂ ಶಾಸನಸಭೆಯಲ್ಲಿ ಸತ್ಯಾಗ್ರಹದ ಬಗ್ಗೆ ಪ್ರಶಂಸೆಯ ಮಾತುಗಳನ್ನಾಡುತ್ತಾರೆ. ದೆಹಲಿಯಲ್ಲಿ ಪ್ರತಿಭಟನೆ ನಡೆಸಬೇಕೆಂದರೆ ಲೋಕಸಭೆಯ ಕಟ್ಟಡದಿಂದ ಎರಡು ಕಿಲೋಮೀಟರ್ ದೂರದ ಜಂತರ್‌ಮಂತರ್ ಬಳಿ ಸೇರಬೇಕು; ಬೋಟ್‌ಕ್ಲಬ್‌ನ ಆವರಣಕ್ಕೆ ಬಿಡುವುದಿಲ್ಲ. ಆ ಜಂತರ್‌ಮಂತರ್ ಬಳಿ ಯಾವ ಸರ್ಕಾರಿ ಅಧಿಕಾರಿ ಅಥವಾ ರಾಜಕೀಯ ನಾಯಕನೂ ಸುಳಿಯುವುದಿಲ್ಲ. ಅಂತೆಯೇ ಬೆಂಗಳೂರಿನಲ್ಲಿ ಕಬ್ಬನ್ ಪಾರ್ಕಿಗೆ ಹೋಗುವಂತಿಲ್ಲ; ಬೇಕಾದರೆ ಬನಪ್ಪ ಪಾರ್ಕಿಗೆ ಬರಬಹುದು, ಅಷ್ಟೆ. ವಿಶೇಷ ಆರ್ಥಿಕ ವಲಯಗಳ ನಿರ್ಮಾಣದ ನ್ಯೂನತೆಗಳ ಬಗ್ಗೆ ಸತ್ಯಾಗ್ರಹ ನಡೆಸಲು ಚಿದಂಬರಂ ಬಿಡುವುದಿಲ್ಲ. ಏಕೆಂದರೆ ಅವರಿಗೆ ಅಮೆರಿಕಾದ ಬಹುರಾಷ್ಟ್ರೀಯ ಕಂಪನಿಗಳೆಂದರೆ ಎಲ್ಲಿಲ್ಲದ ವ್ಯಾಮೋಹ. ಪಂಜಾಬಿನ ಮಾನವಾಲಾ ಎಂಬ ಹಳ್ಳಿಯಲ್ಲಿ ರೈತರು ಪ್ರತಿಭಟನೆಗೆ ಇಳಿದಾಗ ಅವರ ಮೇಲೆ ಪೊಲೀಸರು ಅಶ್ರುವಾಯು ಧಾಳಿ ನಡೆಸಿದರು. ಆ ಹಳ್ಳಿಯಲ್ಲಿ ಈ ಅನುಭವ ಮೊಟ್ಟಮೊದಲನೆಯದು. ಅಲ್ಲಿ ಬೇಕಾದಷ್ಟು ಭೂಮಿಯನ್ನು ಸರ್ಕಾರವು ವಶಪಡಿಸಿಕೊಂಡು ಟ್ರೈಡೆಂಟ್ ಗುಂಪಿನ ಕಂಪನಿಗಳಿಗೆ ಕೊಡುವ ಹುನ್ನಾರ ನಡೆಸಿದೆ. ಆದರೆ ಅದರ ವಿರುದ್ಧದ ಸತ್ಯಾಗ್ರಹಕ್ಕೆ ಅವಕಾಶವಿಲ್ಲ. ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡದ ಹಿನ್ನೆಲೆಯಿರುವ ಪಂಜಾಬಿನಲ್ಲಿ ಇಂತಹ ಪರಿಸ್ಥಿತಿ ಇದೆಯೆಂದರೆ ಮನಮೋಹನ ಸಿಂಗರಿಗಾಗಲಿ ಅದ್ವಾನಿಗಾಗಲಿ ಪರಿತಾಪವೇನೂ ಇಲ್ಲ. ಆದರೆ ಇಬ್ಬರೂ ಸತ್ಯಾಗ್ರಹದ ಶತಮಾನೋತ್ಸವದಲ್ಲಿ ಭಾಷಣಗಳನ್ನು ಬಿಗಿದಿದ್ದಾರೆ. ಮಾನವಾಲಾದಲ್ಲಿ ಪೊಲೀಸ್ ಅಧಿಕಾರಿ ಹೇಳಿದನಂತೆ, ತನ್ನ ಜವಾಬ್ದಾರಿ ಇರುವುದು ಕಾನೂನು ಮತ್ತು ವ್ಯವಸ್ಥೆ ಕಾಪಾಡುವುದರಲ್ಲಿ ಮಾತ್ರ, ಎಂದು. ರೈತರ ಹಕ್ಕೊತ್ತಾಯಗಳೇನಿದ್ದರೂ ಸರ್ಕಾರದ ಜವಾಬ್ದಾರಿಯೆಂದೂ ಆತ ಹೇಳಿದ್ದಾನೆ. ಅಂದರೆ, ಪೊಲೀಸ್ ಪಡೆಯು ಖಾಸಗಿ ಕಂಪನಿಗಳನ್ನು ಪ್ರತಿನಿಧಿಸುತ್ತದೆಯೇ ಹೊರತು ಸರ್ಕಾರವನ್ನಲ್ಲ ಎಂದಾಯಿತು. ಹಾಗಾದರೆ ಪೊಲೀಸರನ್ನು ನೇಮಕಗೊಳಿಸಿದ್ದು ಯಾರು ಮತ್ತು ಅವರ ವೇತನ ಪಾವತಿ ಮಾಡುವುದು ಯಾರು ? ಅವರಿರುವುದು ಸತ್ಯಾಗ್ರಹವನ್ನು ಮುರಿದುಹಾಕಲೆಂದು ಮಾತ್ರವೇ ? ಹಾಗಿದ್ದರೆ ಸತ್ಯಾಗ್ರಹದ ಉತ್ಸವ ಏಕೆ ಬೇಕು ? ಗಾಂಧೀಜಿ ಪರಿತಪಿಸಲು ಇನ್ನೊಂದು ಹೊಸ ಕಾರಣ ಸಿಕ್ಕಂತಾಯಿತು.

* * *

''ಪಾಪ್ಯುಲರ್ ಫ್ರಂಟ್'' ಎಂಬ ವೇದಿಕೆಯು ನಮ್ಮ ರಾಜ್ಯದಲ್ಲಿ ಅಸ್ತಿತ್ವಕ್ಕೆ ಬಂದಿದೆಯೆಂಬುದು ಅದರ ಕಾರ್ಯಕ್ರಮದಿಂದಷ್ಟೇ ತಿಳಿದುಬಂದಿದ್ದು. ಅದಕ್ಕೆ ಮುನ್ನ ಸಿದ್ಧತಾ ಸಮಿತಿಯೊಂದು ರಚನೆಯಾಗಿತ್ತೆ, ಅದರ ಸಂಚಾಲಕರು ಯಾರು, ಸಿದ್ಧತಾ ಸಭೆಗೆ ಬಂದಿದ್ದವರು ಯಾರು, ಈ ವೇದಿಕೆಯ ಉದ್ದೇಶಗಳೇನು, ಅವುಗಳನ್ನು ಈಡೇರಿಸಿಕೊಳ್ಳಲು ಅನುಸರಿಸುವ ಕ್ರಮಗಳೇನು, ಮುಂತಾದ ಯಾವುದರ ಬಗೆಗೂ ಪೂರ್ವ ಮಾಹಿತಿಯನ್ನು ನೀಡದೆ ಕೆಲವರು ಈ ವೇದಿಕೆಯನ್ನು ನಿರ್ಮಿಸಿಕೊಂಡಿದ್ದಾರೆ. ಈವರೆಗೆ ನಡೆದಿರುವ ಎರಡು ಬೃಹತ್ಸಭೆಗಳನ್ನು ವೇದಿಕೆಯು ಅರಮನೆಯ ಆವರಣದಲ್ಲಿ ನಡೆಸಿದೆ. ಅಂದರೆ, ಜನಗಳನ್ನು ಕೂಡಿಸುವುದು ಹಾಗೂ ಹಣ ಸಂಗ್ರಹಿಸುವುದು, ಎರಡರಲ್ಲೂ ವೇದಿಕೆಗೆ ಸಾಮರ್ಥ್ಯವಿದೆ. ಪಾಪ್ಯುಲರ್ ಫ್ರಂಟ್ ತನ್ನ ಮೊದಲ ದೊಡ್ಡ ಸಭೆ ನಡೆಸುವ ವೇಳೆಗೆ ಎಂ. ಎಸ್. ಗೋಲ್ವಾಲ್ಕರರ ಜನ್ಮಶತಾಬ್ದಿ ಉತ್ಸವವು ಬೆಂಗಳೂರಿನಲ್ಲಿ ನಡೆಯುವುದಿತ್ತು. ಸಂಘ ಪರಿವಾರದವರು ವ್ಯಂಗ್ಯವನ್ನು ಸ್ವಲ್ಪವಾದರೂ ತಿಳಿದಿದ್ದರೆಂಬುದಕ್ಕೆ ಅವರು ಈ ಉತ್ಸವಕ್ಕೆ ಹಿಂದು ಸಮಾಜೋತ್ಸವ ಎಂದು ಕರೆದಿದ್ದು ಸಾಕ್ಷಿಯಾಗಿದೆ. ಸಮಾಜವನ್ನು ವಿಭಜಿಸುವ ಕ್ರಿಯೆಗೆ ಸಮಾಜೋತ್ಸವವೆಂಬ ಹೆಸರು ವ್ಯಂಗ್ಯವಲ್ಲದೆ ಮತ್ತೇನು ?

೧೧ನೇ ಪುಟಕ್ಕೆ



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೮ ಸಂಚಿಕೆ-೮ ಮಾರ್ಚ್ ೨೦೦೭

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
e-mail : navakarnataka@vsnl.com
website : www.navakarnatakabooks.com

**ಸಂಪಾದಕೀಯ**

# ಇದು ನ್ಯಾಯ ಮಂಡಲಿಯೇ ?

ಹಲವು ವರ್ಷಗಳ ಕಾಲ ನ್ಯಾಯಾಲಯದ ಮೆಟ್ಟಿಲುಗಳನ್ನು ತುಳಿದ ನಂತರ ಗೆದ್ದವನು ಸೋತ ಮತ್ತು ಸೋತವನು ಸತ್ತ ಎಂಬ ಜಾಣ ಮಾತೊಂದಿದೆ. ಕಾವೇರಿ ನ್ಯಾಯ (?) ಮಂಡಲಿಯು ಕರ್ನಾಟಕವನ್ನು ಸುಮಾರು ಹದಿನೈದು ವರ್ಷಗಳ ಅವಧಿಯ ನಂತರ ಸೋಲಿಸಿದೆ; ಆದರೆ ರಾಜ್ಯದ ಜನತೆ ಸತ್ತಿಲ್ಲ ಮತ್ತು ಸಾಯುವುದಿಲ್ಲ ಎಂದು ಆಶಿಸಬೇಕಾಗಿದೆ. ಇಂದಿನ ಸರ್ಕಾರದಲ್ಲಿರುವ ಪಕ್ಷಗಳು ಇನ್ನೂ ಸ್ಪಷ್ಟವಾಗಿ ಬಾಯಿ ಬಿಡದಿರುವುದು ಎಷ್ಟು ಅತಾರ್ಕಿಕವೋ ಕಾಂಗ್ರೆಸ್ ಪಕ್ಷವು ಸುಮ್ಮನಿರುವುದು ಸಹ ಅಷ್ಟೇ ಅರ್ಥರಹಿತ. ವೆಂಕಯ್ಯ ನಾಯ್ಡು ಮತ್ತು ಕುದುರೆ ರಾಮಸ್ವಾಮಿಯನ್ನು ರಾಜ್ಯದಿಂದ ರಾಜ್ಯಸಭೆಗೆ ಚುನಾಯಿಸಿರುವ ಪಕ್ಷಗಳು ಕಾವೇರಿ ನೀರಿನ ಹಂಚಿಕೆ ಬಗ್ಗೆ ತಲೆ ಕೆಡಿಸಿಕೊಳ್ಳುವ ಸಾಧ್ಯತೆ ಬಹಳ ಕಡಿಮೆಯೆಂದೇ ಹೇಳಬೇಕು. ಒಬ್ಬರಿಗೆ ಮತಧರ್ಮದ ಜಡ್ಡುತನ, ಇನ್ನೊಬ್ಬರಿಗೆ ಆತ್ಮಶ್ಲಾಘನೆಯ ರೋಗ. ಹೀಗಿರುವಾಗ ನೀರು ಅವರನ್ನು ಜಾಗ್ರತೆಯಾಗಿ ಬಾಧಿಸುವುದಿಲ್ಲವೇನೋ !

ಭಾರತ ಹಲವು ರಾಜ್ಯಗಳ ಒಕ್ಕೂಟವೋ ಅಥವಾ ಕೇಂದ್ರಾಡಳಿತವೊಂದೇ ಇರುವ ಹೆಬ್ಬಂಡೆಯೋ ಎಂಬುದು ಪದೇ ಪದೇ ಆತಂಕಕ್ಕೀಡುಮಾಡುವ ಪ್ರಶ್ನೆಯಾಗುತ್ತಿದೆ. ಭಾಷೆ, ಸಂಸ್ಕೃತಿ, ಆರ್ಥಿಕತೆ ಮುಂತಾದವಲ್ಲದೆ ಈಗ ನೀರಿನ ವಿಷಯದಲ್ಲೂ ಅಂಥದೇ ಪ್ರಕ್ರಿಯೆ ತೋರಿಬಂದಿದೆ. ಅದು ಹೊಸದೇನೂ ಅಲ್ಲ; ಹಲವು ದಶಕಗಳಿಂದ ಕಾವೇರಿಯನ್ನು ಹೀಗೆಯೇ ನಡೆಸಿಕೊಂಡು ಬರಲಾಗಿದೆ. ಕಾವೇರಿ ನ್ಯಾಯ ಮಂಡಲಿಯ ವಸ್ತುನಿಷ್ಠತೆಯ ಅಭಾವವು ಇದರ ಒಂದು ಮುಂದುವರಿದ ಭಾಗ. ಇದು 'ನ್ಯಾಯ' ಮಂಡಲಿ ಎನಿಸಿಕೊಳ್ಳಲು ಯೋಗ್ಯವಲ್ಲವೆಂಬುದು ಅದರ ಈಚಿನ ತೀರ್ಪಿನಿಂದ ಮತ್ತಷ್ಟು ಸ್ಪಷ್ಟವಾಗಿದೆ. ಸಂವಿಧಾನದ ಮೂಲಸ್ವರೂಪದ ಬಗ್ಗೆ ಉದ್ದುದ್ದದ ಪ್ರವಚನ ನೀಡುವ ಸರ್ವೋಚ್ಚ ನ್ಯಾಯಾಲಯವು ಮೊದಲು ಮಾಡಬೇಕಾದ ಕೆಲಸವೆಂದರೆ ನ್ಯಾಯ ಮಂಡಲಿಗಳು ನ್ಯಾಯದ ಮೂಲಸ್ವರೂಪವನ್ನು ನಿಚ್ಚಳವಾಗಿ ಅರ್ಥಮಾಡಿಕೊಂಡು ಆಮೇಲೆ ತೀರ್ಪು ಕೊಡುವಂತೆ ಮಾಡುವುದು. ಸ್ವತಃ ಸರ್ವೋಚ್ಚ ನ್ಯಾಯಾಲಯದಿಂದಲೂ ಇದನ್ನು ನಿರೀಕ್ಷಿಸಲು ಸಾಧ್ಯವಿಲ್ಲದಂತಹ ಸನ್ನಿವೇಶ ಸೃಷ್ಟಿಯಾಗಿರುವುದು ನಮ್ಮ ದೇಶದ ಭವಿಷ್ಯಕ್ಕೆ ಆರೋಗ್ಯಕರವೆನಿಸುವುದಿಲ್ಲ.

''ಸಾರ್ವಜನಿಕ ಹಿತಕ್ಕಾಗಿ'' ಭೂಮಿ ವಶಪಡಿಸಿಕೊಳ್ಳಲು ನಾವು ನಾಚಿಕೆಯಿಲ್ಲದೆ ಬಳಸುವುದು ೧೮೯೪ರ ಒಬಿರಾಯನ ಕಾಲದ ಕಾನೂನು. ಅಂತೆಯೇ ಕಾವೇರಿ ನೀರಿನ ಹಂಚಿಕೆಗೆ ನಾವು ಅನುಸರಿಸುವ ಮೂಲ ಸೂತ್ರಗಳು ೧೮೯೨ ಮತ್ತು ೧೯೨೪ರಲ್ಲಿ ಪ್ರತಿಪಾದಿತವಾಗಿದ್ದವು. ಕಾಲ ಸ್ಥಿರವಾಗಿ ನಿಂತುಬಿಟ್ಟಿದೆಯೆಂಬ ಮೂರ್ಖ ಪ್ರಜ್ಞೆ ಇಲ್ಲಿದೆ. ದಿನಗಳು ಕಳೆದಂತೆ ಹೊಸ ಸನ್ನಿವೇಶಗಳಿಗೆ ವ್ಯಾವಹಾರಿಕವಾಗಿ ಯೋಗ್ಯವಾದ ಹೊಸ ಸೂತ್ರಗಳನ್ನು ರಚಿಸಿಕೊಳ್ಳುವ ಅಗತ್ಯವನ್ನು ಕಂಡುಕೊಳ್ಳದ ನ್ಯಾಯ ಮಂಡಲಿಗಳು ಸಮಾಜಕ್ಕೆ ಹೆಣಭಾರ ಎನ್ನಬೇಕಾಗಿದೆ. ಬ್ರಿಟಿಷರ ವಸಾಹತುಶಾಹಿ ಮತ್ತು ಮೈಸೂರು ಸಂಸ್ಥಾನದ ಅರಸ, ಎರಡೂ ಇಲ್ಲವಾಗಿದ್ದರೂ ಅವೆರಡೂ ತಮ್ಮ ಗೋರಿಗಳಿಂದ ಈಗಲೂ ನಮ್ಮನ್ನು ನಿಯಂತ್ರಿಸುತ್ತಿವೆಯೆಂದರೆ ಅದು ಯಾವ ನ್ಯಾಯ ? ಈಗ ಮಂಡಲಿ ನೀಡಿರುವ ತೀರ್ಪು ಮೂಲತಃ ಪ್ರಾಯೋಗಿಕವಾಗಿ ಅನುಷ್ಠಾನಕ್ಕೆ ತರಬಹುದಾದಂತಹ ತೀರ್ಪೇ ಅಲ್ಲ. ಆ ನ್ಯಾಯ ಮಂಡಲಿಯ ಸರ್ವಜ್ಞರೇ ಕನ್ನಂಬಾಡಿ ಕಟ್ಟೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡರೂ ಅದು ಸೂಚಿಸಿರುವ ಪ್ರಮಾಣದ ನೀರನ್ನು ಶೇಖರಿಸಿ ನೀಡಲು ಅಸಮರ್ಥರಾಗುತ್ತಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಈ ಮಂಡಲಿಯ ಪ್ರಕಾರ ಕರ್ನಾಟಕವು ತಮಿಳುನಾಡಿನ ದೊಡ್ಡ ತೊಟ್ಟಿ; ಅದರ ಕೆಲಸ ನೀರನ್ನು ಹಿಡಿದಿಟ್ಟು ತಮಿಳುನಾಡಿನ ಮಹಾರಾಜರು ಕೇಳಿದಾಗೆಲ್ಲ ಅದನ್ನು ಹೊತ್ತುಕೊಂಡು ಹೋಗಿ ಕೊಡುವುದು, ಅಷ್ಟೇ. ಸ್ವತಃ ತಾನು ಅದನ್ನು ಉಪಯೋಗಿಸುವ ಹಕ್ಕನ್ನು ಹೊಂದಿಲ್ಲ. ಈ ಧೋರಣೆಯು ಭಾರತವನ್ನು ಛಿದ್ರವಾಗದಂತೆ ಉಳಿಸುವಂಥದಲ್ಲ. ಪೊಲೀಸ್ ಮತ್ತು ಮಿಲಿಟರಿ ನೆರವಿನಿಂದ ಕಾವೇರಿಯ ನೀರನ್ನು ನಿಯಂತ್ರಿಸುವಂತಹ ಸಂದರ್ಭವು ಸೃಷ್ಟಿಯಾದರೆ ಕಾವೇರಿಯಲ್ಲಿ ನೀರು ಹರಿಯುವ ಬದಲು ರಕ್ತವು ಹರಿದೀತೆಂಬ ಎಚ್ಚರ ನ್ಯಾಯ ಮಂಡಲಿಗಿಲ್ಲ. ಆದರೆ ಕೇಂದ್ರ ಸರ್ಕಾರಕ್ಕಾದರೂ ಆ ಎಚ್ಚರವಿರಬೇಕು. ಆದ್ದರಿಂದ ಪ್ರಕೃತದ ತೀರ್ಪನ್ನು ಜಾರಿಗೊಳಿಸುವ ದುರಂತದತ್ತ ಮನಮೋಹನ ಸಿಂಗ್ ಸರ್ಕಾರವು ಹೆಜ್ಜೆ ಹಾಕಕೂಡದು. ಅದು ಕರ್ನಾಟಕದ ಒಮ್ಮತದ ಅಭಿಪ್ರಾಯವೆಂದು ಪರಿಗಣನೆಗೆ ಬರಬೇಕು. ಕರ್ನಾಟಕ-ತಮಿಳುನಾಡು ರಾಜ್ಯಗಳ ರೈತ ಮುಖಂಡರು ಕಳೆದೆರಡು ವರ್ಷಗಳಿಂದ ಜಂಟಿ ಸಭೆಗಳನ್ನು ನಡೆಸಿ ಕೆಲವು ಸಲಹೆಗಳನ್ನು ನೀಡಿದ್ದರು. ಮಂಡಲಿಯ ಅರ್ಥರಹಿತ ತೀರ್ಪು ಬಂದನಂತರ ತಮಿಳುನಾಡು ಸರ್ಕಾರವು ಅದೆಲ್ಲಾ ತನಗೆ ಗೊತ್ತಿಲ್ಲದಂತೆ ನಟಿಸುತ್ತಿರುವುದು ಖಂಡನಾರ್ಹವಾಗಿದೆ. ಎರಡೂ ರಾಜ್ಯಗಳ ರೈತ ಮುಖಂಡರು ಚೆನ್ನೈನ ಅಭಿವೃದ್ಧಿ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಮತ್ತೆ ಚರ್ಚೆಗಳನ್ನು ಮುಂದುವರೆಸಬೇಕೇ ವಿನಾ ನ್ಯಾಯ ಮಂಡಲಿ ಮತ್ತು ಕರುಣಾನಿಧಿ ಅಂತಿಮ ನಿರ್ಧಾರಕರೆಂಬ ತಪ್ಪು ಗ್ರಹಿಕೆಯನ್ನು ಮಾನ್ಯ ಮಾಡಕೂಡದು.

ನ್ಯಾಯ ಮಂಡಲಿಯ ಅನೇಕ ಆದೇಶಗಳು ಸರ್ವಥಾ ಅಸಮರ್ಥನೀಯ. ಕೆಲವನ್ನು ಮಾತ್ರ ಇಲ್ಲಿ ಪರಿಶೀಲಿಸಬಹುದು : (ಅ) ಮಾಪನ ಕೇಂದ್ರವು ಮೆಟ್ಟೂರಿನಲ್ಲಿ ಇರುವುದರ ಬದಲು ಬಿಳಿಗುಂಡ್ಲುಗೆ ವರ್ಗಾಯಿಸಲ್ಪಟ್ಟಿದೆ. ಇವೆರಡು ಸ್ಥಳಗಳ ನಡುವೆ ಯಾವಾಗಲೂ ಮಳೆ ಬೀಳುವುದೇ ಇಲ್ಲವೆಂದು ಮಂಡಲಿಯ ಸರ್ವಜ್ಞರು ಭಾವಿಸಿದಂತಿದೆ. ಹಿಂದೆ ೨೦೫ ಟಿ.ಎಂ.ಸಿ. ಎಂದಿದ್ದನ್ನು ಈಗ ೧೯೨ ಎಂದು ಸೂಚಿಸಿದ್ದರೂ ಬಿಳಿಗುಂಡ್ಲು ಮಾಪನ ಕೇಂದ್ರವಾದರೆ ೧೯೨ ಎಂಬುದು ನಿಜವಾಗಿ ಸುಮಾರು ೨೧೦ ಆಗುತ್ತದೆ. ಆದ್ದರಿಂದಲೇ ಜೋಭದ್ರ ಕರುಣಾನಿಧಿ ಈಗ ಒಮ್ಮೊಮ್ಮೆ ಹಸನ್ಮುಖಿಯಾಗಿ ಕಾಣಿಸುತ್ತಿರುವುದು. (ಆ) ಕೇರಳವು ಸದ್ಯಕ್ಕೆ ಹೇಗೂ ತನ್ನ ಪಾಲಿನ ೩೦ ಟಿ.ಎಂ.ಸಿ. ಪಡೆಯಲಾರದೆಂಬ ಕಾರಣದಿಂದ ನ್ಯಾಯಮಂಡಲಿಯ ಆದೇಶದಂತೆ ಅದೂ ತಮಿಳುನಾಡಿನದ್ದಾಗುತ್ತದೆ. ಅಂದರೆ, ೧೯೨ ಎಂಬುದು ೨೪೦ ಎಂದಾಯಿತು. (ಇ) ತಮಿಳುನಾಡು ಕಾವೇರಿ ಜಲಾನಯನ ಪ್ರದೇಶದಲ್ಲಿ ಅಂತರ್ಜಲ ಬಳಸಿದರೆ ೧೯೨ ಎಂಬುದು ಬಹುಶಃ ಮುನ್ನೂರನ್ನು ದಾಟುತ್ತದೆ. ಆದರೆ ಅದು ಲೆಕ್ಕಕ್ಕೆ ಬರುವುದಿಲ್ಲ. ಅದೇ ಮದ್ದೂರಿನ ಒಬ್ಬ ರೈತ ಅಂತರ್ಜಲವನ್ನು ಬಳಸಿದರೆ ಅದು ಕರ್ನಾಟಕದ ಪಾಲಿಗೆ ನ್ಯಾಯಮಂಡಲಿ ''ಉದಾರವಾಗಿ'' ನೀಡಿರುವ ೨೭೦ ಟಿ.ಎಂ.ಸಿ.ಯಲ್ಲಿ ಸೇರಿಬಿಡುತ್ತದೆ. ರೈತರು ಅಂತರ್ಜಲ ಬಳಸದಿದ್ದರೂ ಇಂತಿಷ್ಟು ಕೊಳವೆಬಾವಿಗಳಿವೆ, ಒಂದೊಂದೂ ಇಷ್ಟಿಷ್ಟು ನೀರು ಒದಗಿಸಬಲ್ಲದು ಎಂಬ ಲೆಕ್ಕಾಚಾರದ ಪ್ರಕಾರ ೨೭೦ ಎಂಬುದನ್ನು ಸುಲಭವಾಗಿ ೨೩೦ಕ್ಕೆ ಇಳಿಸಿ

ಬಿಡಬಹುದಾಗಿದೆ. ಇದು ಕೋತಿ ನ್ಯಾಯಕ್ಕಿಂತಲೂ ಹೊಲಸಾದ ನ್ಯಾಯ. (ಈ) ಮಂಡಲಿಯ ಆದೇಶವು ಕಾವೇರಿ ನೀರನ್ನು ಮರಳು, ಮಣ್ಣು, ಇಟ್ಟಿಗೆ ಎಂಬಂತೆ ಪರಿಭಾವಿಸಿದೆ. ಕೃಷ್ಣರಾಜಸಾಗರವಾಗಲಿ ಬೇರೆ ಕಟ್ಟೆಗಳಾಗಲಿ ಗರಿಷ್ಠ ಎಷ್ಟು ನೀರನ್ನು ಹಿಡಿದಿಡಬಹುದೆಂಬುದರ ಅರಿವು ಮಂಡಲಿಯ ಪರಿಣಿತರ ಪ್ರಜ್ಞಾಕಕ್ಷೆಯಲ್ಲಿಲ್ಲ. ಯಾವುದೋ ತಿಂಗಳಲ್ಲಿ ತನಗೆ ನೀರು ಬೇಡವೆಂದು ತಮಿಳುನಾಡು ಹೇಳಿದರೆ ಆ ತಿಂಗಳ ನೀರಿನ ಪಾಲನ್ನು ಶೇಖರಿಸಿಟ್ಟು ತಮಿಳುನಾಡಿನ ಮಹಾರಾಜನು ಕೇಳಿದಾಗ ಅದನ್ನು ಅವನಿಗೆ ತಲುಪಿಸಬೇಕೆಂದು ಮಂಡಲಿ ಕರ್ನಾಟಕಕ್ಕೆ ಅಪ್ಪಣೆ ನೀಡಿದೆ. ಈ ಸೂಚನೆಯ ಪ್ರಕಾರ ಕರ್ನಾಟಕವು ತಮಿಳುನಾಡಿನ ತೊಟ್ಟಿ. ನೀರನ್ನು ಶೇಖರಿಸಿಕೊಳ್ಳಲು ತಮಿಳುನಾಡು ಒಂದು ಚಿಕ್ಕಾಸೂ ಖರ್ಚು ಮಾಡಬೇಕಾಗಿಲ್ಲ. ಶೇಖರಣೆಯ ಜವಾಬ್ದಾರಿಯನ್ನು ನಿರ್ವಹಿಸಲು ಬೇಕಾದರೆ ಕರ್ನಾಟಕವು ಇನ್ನಷ್ಟು ಹಣ ಸುರಿದು ಇನ್ನಷ್ಟು ಕಟ್ಟೆಗಳನ್ನು ಕಟ್ಟಿಕೊಳ್ಳಲಿ ಎಂಬುದು ಮಂಡಲಿಯ ಅಮೋಘ ಕಾಣ್ಕೆಯಾಗಿದೆ. ಉದಾಹರಣೆಗೆ, ಆಗಸ್ಟ್ ಮತ್ತು ಸೆಪ್ಟೆಂಬರ್‌ಗಳಲ್ಲಿ ತಲಾ ೫೦ ಮತ್ತು ೪೦ ಟಿ.ಎಂ.ಸಿ. ನೀರನ್ನು ಕರ್ನಾಟಕವು ತಮಿಳುನಾಡಿಗೆ ಬಿಡಬೇಕೆಂದು ಮಂಡಲಿ ಹೇಳಿದೆ; ಆ ತಿಂಗಳುಗಳ ಬದಲು ಅಷ್ಟೇ ಪ್ರಮಾಣದ ನೀರನ್ನು ಬರುವ ಫೆಬ್ರವರಿಯಲ್ಲಿ ಕೊಡಬೇಕೆಂದು ತಮಿಳುನಾಡು ಕೇಳಿದರೆ ಜಹ್ನು-ಅಗಸ್ತ್ಯರಂತಹ ಋಷಿಗಳು ವಿಧಾನಸೌಧದಲ್ಲಿ ಕುಳಿತರೂ ಅದನ್ನು ಪೂರೈಸಲು ಅಸಮರ್ಥರಾಗುತ್ತಾರೆ. ಏಕೆಂದರೆ, ಕಟ್ಟೆಗಳ ಗರಿಷ್ಠ ಶೇಖರಣೆಯ ಪ್ರಮಾಣವನ್ನು ಹಿಗ್ಗಿಸಲಾಗುವುದಿಲ್ಲ. ಒಳಹರಿವು ಚೆನ್ನಾಗಿರುವಾಗ ಹೊರಹರಿವು ಸಾಧ್ಯವೇ ವಿನಾ ಮಳೆಗಾಲದ ನಂತರ ಅದು ಸಾಧ್ಯವಾಗುವುದಿಲ್ಲ. ಇಂತಹ ಕನಿಷ್ಠ ತಿಳಿವನ್ನೂ ಹೊಂದದ ಮಂಡಲಿ ನಮಗೆ ನ್ಯಾಯದ ವಿತರಣೆ ಮಾಡುತ್ತದೆಯೆಂದರೆ ಹೇಸಿಗೆಯೆನಿಸುತ್ತದೆ. ಕನ್ನಂಬಾಡಿಯ ಪ್ರಾಥಮಿಕ ಶಾಲೆಯ ಮಗುವಿನ ಅರಿವು ಮಂಡಲಿಯ ತ್ರಿಮೂರ್ತಿಗಳ ಅರಿವಿಗಿಂತಲೂ ಹೆಚ್ಚು ವಿಸ್ತಾರವಾಗಿರುತ್ತದೆ. ಸಿಮೆಂಟೋ ಕಬ್ಬಿಣವೋ ಆದರೆ ಈ ತಿಂಗಳ ಬದಲು ಅದನ್ನು ಮುಂದಿನ ತಿಂಗಳು ಪಡೆಯಬಹುದು. ಕಾವೇರಿಯ ಶುದ್ಧ ನೀರನ್ನು ಹಾಗೆ ಮಾಡಬರುವುದಿಲ್ಲ. ಅದನ್ನು ಮಾಡಬೇಕಾದರೆ ಮಳೆಗಾಲದಲ್ಲಿ ಅನಿವಾರ್ಯವಾಗಿ ಹೊರಹೋಗುವ ನೀರನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ, ಪೂರ್ಣ ಪ್ರಮಾಣದಲ್ಲಿ (ಅಂದರೆ, ಕೃಷ್ಣರಾಜಸಾಗರದ ೧೨೪ ಅಡಿ) ಹಿಡಿದಿಟ್ಟು ಅಷ್ಟನ್ನೂ ತಮಿಳುನಾಡು ಕೇಳಿದಾಗ ಕೊಡುವುದಷ್ಟೇ ಕರ್ನಾಟಕದ ಕೆಲಸವಾಗುತ್ತದೆ. ಅದಕ್ಕೇ ಏನು ವಿಶ್ವೇಶ್ವರಯ್ಯನವರು ಕಟ್ಟೆ ಕಟ್ಟಿದ್ದು ? ಕರ್ನಾಟಕದಲ್ಲಿ ಕಾವೇರಿಯಿಂದ ನೀರಾವರಿಯು ಇದರಿಂದ ಸೊನ್ನೆ ಪ್ರಮಾಣಕ್ಕೆ ಇಳಿದರೆ ಆಶ್ಚರ್ಯವಿಲ್ಲ. (ಉ) ಫೆಬ್ರವರಿಯಿಂದ ಮೇವರೆಗೆ ನಾಲ್ಕು ತಿಂಗಳು ತಲಾ ೨.೫ ಟಿ.ಎಂ.ಸಿ. ನೀರು ಕೊಡಬೇಕೆಂದು ಮಂಡಲಿ ಆದೇಶಿಸಿದೆ. ಆ ತಿಂಗಳುಗಳಲ್ಲಿ ಒಳಹರಿವಿಲ್ಲದಿರುವುದರಿಂದ ಅಷ್ಟು ಪ್ರಮಾಣದ ನೀರನ್ನು ಗಂಗೋತ್ರಿಯಿಂದ ತಂದು ಕೊಡಬೇಕು, ಅಷ್ಟೇ. ಇದು ಮಂಡಲಿಯ ಪ್ರಜ್ಞೆಗೆ ಕಿರೀಟದಂತಿರುವ ಸಲಹೆ! (ಊ) ತನ್ನ ವ್ಯರ್ಥ ಆದೇಶಗಳನ್ನು ಕರ್ನಾಟಕವು ಪಾಲಿಸಲಾರದೆಂಬ ಗುಮಾನಿಯಿಂದ ಮಂಡಲಿಯು ಇನ್ನೊಂದು ''ಅಮೂಲ್ಯ'' ಸಲಹೆ ನೀಡಿದೆ: ಅದೇನೆಂದರೆ, ತನ್ನ ಆದೇಶಗಳನ್ನು ಪಾಲಿಸಲು ಕಾವೇರಿ ಮೇಲ್ವಿಚಾರಣೆ ಪ್ರಾಧಿಕಾರವನ್ನು ರಚಿಸಬೇಕೆಂಬುದು. ಅಂದರೆ, ಕೃಷ್ಣರಾಜಸಾಗರ ಮುಂತಾದ ಕಟ್ಟೆಗಳನ್ನು ಈ ಮಹಾನ್ ಅಧಿಕಾರಿಗಳ ವಶಕ್ಕೆ ಕೊಟ್ಟು ಕರ್ನಾಟಕವು ಗಂಟು-ಮೂಟೆ ಕಟ್ಟಿಕೊಂಡು ನೀರಿಲ್ಲದ ಒಣ ಗದ್ದೆಗಳಿಗೆ ಹೋಗಲಿ ಎಂದರ್ಥ. ಹೀಗೊಂದು ಮೇಲ್ವಿಚಾರಕ ಪ್ರಾಧಿಕಾರದ ರಚನೆಯ ಸನ್ನಾಹವು ನಾಚಿಕೆಗೇಡಿನ ವರ್ತನೆಯ ಪರಮಾವಧಿ. ತಮಿಳುನಾಡು ಭಾರತಕ್ಕೆ ಸೇರಿದ್ದರೆ, ಕರ್ನಾಟಕವು ಭಾರತದಲ್ಲಿ ಒಂದು ವಸಾಹತುವಿನ ಮಾದರಿಯ ರಾಜ್ಯ ಎಂದು ಇದರ ಅರ್ಥವೇನು ? ಮಾತು ಕಟುವಾಗಿ ತೋರುತ್ತದೆ, ಆದರೆ ಮಂಡಲಿಯ ಸಲಹೆಯು ಇನ್ನೂ ಹೆಚ್ಚು ಕಟುವಾದ್ದು, ಕಂಟಕಪ್ರಾಯವಾದ್ದು. (ಋ) ಇಷ್ಟೊಂದು ನೀರನ್ನು ಪಡೆದು ತಮಿಳುನಾಡು ಕೇವಲ ನಾಲ್ಕು ಟಿ.ಎಂ.ಸಿ. ನೀರನ್ನು ಸಮುದ್ರಕ್ಕೆ ಬಿಡುತ್ತದೆಂಬ ಮಂಡಲಿಯ ಲೆಕ್ಕಾಚಾರವು ತನ್ನ ಅಲ್ಪಮತಿಯ ನಿದರ್ಶನವಾಗಿದೆ. ಕಳೆದ ಹತ್ತಾರು ವರ್ಷಗಳಲ್ಲಿ ಹೀಗೆ ಸಮುದ್ರಕ್ಕೆ ಹೋಗಿರುವ ನೀರಿನ ಪ್ರಮಾಣವೆಷ್ಟು? ಆಗಿಗಿಂತಲೂ ಹೆಚ್ಚು ನೀರನ್ನು ಪಡೆದಾಗ ತಮಿಳನಾಡಿನಲ್ಲಿ ಪೋಲಾಗುವ ನೀರು ಇನ್ನೂ ಹೆಚ್ಚಾಗಿರುವುದು ಖಚಿತ. ಬೆಂಗಳೂರಿನಲ್ಲಿ ಕಾರುಗಳನ್ನು ತೊಳೆಯಲು ಪೋಲಾಗುವ ನೀರಿಗಿಂತ ಒಂದು ಲಕ್ಷ ಪಟ್ಟು ಹೆಚ್ಚಾಗಿ ತಮಿಳುನಾಡಿನಲ್ಲಿ ನೀರನ್ನು ಪೋಲು ಮಾಡಲಾಗುತ್ತದೆ.

ಒಟ್ಟಿನಲ್ಲಿ ಒಕ್ಕೂಟದಂತೆ ಬಾಳಬೇಕಾದ ಭಾರತದಲ್ಲಿ ಕಾವೇರಿ ನ್ಯಾಯ ಮಂಡಲಿಯು ಎಸಗಲಿರುವ ಅನ್ಯಾಯವನ್ನು ಒಪ್ಪಕೂಡದು. ಇದು ಕೇಂದ್ರ ಸರ್ಕಾರದ ಜವಾಬ್ದಾರಿ ಸಹ. ಅಂತೆಯೇ ದೇಶದ ಸಂವಿಧಾನಕ್ಕೆ ಬದ್ಧರಾಗಿರುವವರೆಲ್ಲರ ಕರ್ತವ್ಯ. ಸೋಗಲಾಡಿತನವನ್ನು ಬಿಟ್ಟು ಕರ್ನಾಟಕ ಮತ್ತು ತಮಿಳುನಾಡು ಸರ್ಕಾರಗಳು ಇಡೀ ಪ್ರಶ್ನೆಯನ್ನು ಕೂಲಂಕಷವಾಗಿ ಮರುಪರಿಶೀಲಿಸಬೇಕು. ಮಂಡಲಿಯೆಂಬ ಮೂರನೆಯವರನ್ನು ಕರೆತಂದರೆ ಕೋತಿ ನ್ಯಾಯವು ಕಟ್ಟಿಟ್ಟ ಬುತ್ತಿ. ಎರಡೂ ರಾಜ್ಯಗಳ ರೈತರ ನೇರಸಂಧಾನಕ್ಕಿಂತಲೂ ಉತ್ತಮವಾದ ಅನ್ಯಮಾರ್ಗವಿಲ್ಲ. ಕರ್ನಾಟಕ ಸರ್ಕಾರವು ನ್ಯಾಯಾಲಯಗಳ ಬಾಗಿಲುಗಳನ್ನು ತಟ್ಟುತ್ತಲೇ ಇದ್ದರೆ ಈಗಾಗಲೇ ೧೯೨ ಎಂಬುದು ೩೦೦ ಆಗಿರುವಾಗ ಅದು ಮುಂದೆ ಇನ್ನೂ ಹೆಚ್ಚಬಹುದು. ಎರಡೂ ರಾಜ್ಯಗಳಲ್ಲಿ ಎಲ್ಲಿ, ಯಾವಾಗ, ಎಷ್ಟು ಮತ್ತು ಯಾವ ಬೆಳೆಗಳನ್ನಿಡಬೇಕು ಎಂಬುದು ನೀರಿನ ಹಂಚಿಕೆಯೊಡನೆ ಚರ್ಚೆಗೆ ಬರಬೇಕಾದ್ದು ಅವಶ್ಯಕ. ಅದೆಲ್ಲಾ ಮಂಡಳಿಗಳ ''ನ್ಯಾಯದ ವ್ಯಾಪ್ತಿಯಲ್ಲಿ'' ಸೇರುವುದಿಲ್ಲ. ಕಾವೇರಿಯ ನೀರಿಗಾಗಿ 'ಹೋರಾಟ' ಮಾಡುವುದರಲ್ಲಿ ನಾವು ಯಾರೂ ಹಿಂದುಳಿದಿಲ್ಲವೆಂಬುದನ್ನು ದಾಖಲೆಗೊಳಿಸಲು ನಡೆಯುವ ಪ್ರತಿಭಟನೆಗಳು, ಹೊರಬರುವ ಹೇಳಿಕೆಗಳು, ಇವೆಲ್ಲಾ ತೀರಾ ಗೌಣ. ಘೋಷಣೆ ಕೂಗದ ಕರ್ನಾಟಕದ ಜನ ಸಹ ಕಾವೇರಿ ತೀರ್ಪನ್ನು ತಿರಸ್ಕರಿಸಿದ್ದಾರೆ ಎಂಬುದಕ್ಕೆ ಪುರಾವೆ ಬೇಕಿಲ್ಲ. ಉರುಳುಸೇವೆ, ಮರಳುಸೇವೆ ಮುಂತಾದವು ಕಡೆಗೆ ಮರುಳುತನವಾಗಿ ಅಂತ್ಯಗೊಳ್ಳುತ್ತವೆ. ಹಾಗಾಗದಿರಲು ನ್ಯಾಯಮಂಡಲಿಯ ತೀರ್ಪಿನ ಅಂಶಗಳನ್ನು ವ್ಯಾಪಕವಾಗಿ ಎರಡೂ ರಾಜ್ಯಗಳಲ್ಲಿ ತಿಳಿಸಿಕೊಡುವ ಪ್ರಯತ್ನವಾಗಬೇಕು. ಸರ್ಕಾರಗಳ ಮೇಲೆ ಜನಾಭಿಪ್ರಾಯದ ಒತ್ತಡ ಹೆಚ್ಚಬೇಕು. ತಮಿಳುನಾಡು ಸರ್ಕಾರವು ತನ್ನ ಉಚ್ಚ ನ್ಯಾಯಾಲಯದ ಮೂಲಕ ಕರ್ನಾಟಕದ ತಮಿಳು ಜನರನ್ನು ರಕ್ಷಿಸುವ ನಾಟಕ ತೀರಾ ಹೀನಮಟ್ಟದ್ದು. ಅದರಿಂದ ಪರಿಸ್ಥಿತಿಯು ಉಲ್ಬಣಗೊಳ್ಳಬಹುದು, ಅಷ್ಟೆ. ಅಂತೆಯೇ ತಮಿಳು ಚಲನಚಿತ್ರಗಳನ್ನು ಕರ್ನಾಟಕದಲ್ಲಿ ಬಹಿಷ್ಕರಿಸುವುದರಿಂದ ಕಾವೇರಿಯ ಪ್ರಶ್ನೆಗೆ ಉತ್ತರ ಸಿಗುವುದಿಲ್ಲ; ಬದಲಾಗಿ ಕಾವೇರಿಯಿಂದಾಗಿ ರಾಜ್ಯದ ವಾತಾವರಣದಲ್ಲಿ ಕಾವೇರುತ್ತದೆ. ಅದು ಜನರ ಹಿತವನ್ನು

೧೦ನೇ ಪುಟಕ್ಕೆ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಜನವರಿ ಸಂಚಿಕೆ

ಜನವರಿ ತಿಂಗಳ ಸಂಚಿಕೆ ತುಂಬಾ ಸಮೃದ್ಧವಾಗಿದೆ. ಎಲ್ಲ ಬರಹಗಳೂ ಉತ್ತಮಮಟ್ಟದವಾಗಿವೆ. ನನ್ನ ಕೈಗೆ ಬರುವ ಪತ್ರಿಕೆಗಳಲ್ಲಿ ಸಾಮಾನ್ಯವಾಗಿ ಒಂದೋ ಎರಡೋ ಅಷ್ಟೇ ಓದಲೇಬೇಕೆನಿಸುವ ಲೇಖನಗಳು ದೊರೆಯುತ್ತವೆ. ಆದರೆ ನಿಮ್ಮ ವಿಶೇಷ ಸಂಚಿಕೆಯ ಅಷ್ಟೂ ಲೇಖನಗಳನ್ನು ಓದುವ ಬಯಕೆಯಾಗಿದೆ. ಪತ್ರಿಕೆಯನ್ನು ಯೋಜಿಸುವ, ಹೊರತರುವ ಕ್ಲೇಶಗಳ ಅನುಭವ ನನಗೆ ಸಾಕಷ್ಟಿರುವುದರಿಂದ ನಿಮ್ಮ ಅಗಾಧ ಶ್ರಮವನ್ನು ಊಹಿಸಬಲ್ಲೆ. ಶ್ರೇಯ ಕೋರುವೆ.

ಬೆಂಗಳೂರು **ಎಸ್. ಆರ್. ರಾಮಸ್ವಾಮಿ**

'ಹೊಸತು' ವಿಶೇಷಾಂಕ ತಲುಪಿದೆ. ನನ್ನ ಅನುಭವಕ್ಕೆ ಬಂದಿರುವಂತೆ ಇಂದಿನ ತಿಂಗಳ ಪತ್ರಿಕೆಗಳ ಪ್ರಕಾರದಲ್ಲಿ ನಿಮ್ಮೀ ಜನವರಿ ವಿಶೇಷಾಂಕವು ಅತ್ಯಂತ ಶ್ರೇಷ್ಠ ಸಂಚಿಕೆಗಳಲ್ಲಿ ಒಂದಾಗಿದೆ. ಶುಭಾಶಯಗಳು. ಕೆಲವು ಲೇಖನಗಳನ್ನು ಓದಿ ಮುಗಿಸಿದ್ದೇನೆ. ಇನ್ನೂ ಕೆಲವು ಬಾಕಿ ಇವೆ. ನಾನು ತುಂಬಾ ಇಷ್ಟಪಟ್ಟ ಡಾ|| ಜಿ. ರಾಮಕೃಷ್ಣ ಅವರ 'ಸತ್ಯ ಶೋಧನೆ' ಎಂಬ ಲೇಖನದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಲೇಬೇಕು. ಈ ಲೇಖನದಲ್ಲಿ ಬಹಳಷ್ಟು ಮಾಹಿತಿಗಳನ್ನು ನೀಡುವುದರ ಜೊತೆಗೆ ತರ್ಕಬದ್ಧ ವಿಚಾರಗಳನ್ನೂ ಚರ್ಚಿಸಿದ್ದಾರೆ. ನಿಜಕ್ಕೂ ಈ ಲೇಖನ ಇತರ ಬುದ್ಧಿಜೀವಿಗಳಿಗೆ ಮಾದರಿಯಾಗಬೇಕಿದೆ. ಅದಿರಲಿ, ೭೩ನೇ ಸಾಹಿತ್ಯ ಸಮ್ಮೇಳನ ಕುರಿತು ಸಂಪಾದಕೀಯದಲ್ಲಿ ನೀವು ಹೇಳಿರುವ ಮಾತುಗಳ ಕುರಿತಂತೆ ನನ್ನ ಅನಿಸಿಕೆಗಳು ಹೀಗಿವೆ. ಸಮ್ಮೇಳನದಲ್ಲಿ ನಾನೂ ಹಾಜರಿದ್ದು ಪ್ರತಿಭಟನಾಕಾರರು ವೇದಿಕೆಯೆಡೆಗೆ ಧಾವಿಸಿ ಘೋಷಣೆ ಕೂಗುತ್ತಿದ್ದನ್ನು ಕಣ್ಣಾರೆ ಕಂಡಿದ್ದೇನೆ. ಅವರ ಅಸಭ್ಯ ವರ್ತನೆ ಯಾವುದೇ ಕಾರಣಕ್ಕೂ ಸಮರ್ಥನೀಯವಲ್ಲ. ಪೊಲೀಸರು ಪ್ರತಿಭಟನಾಕಾರರ ಮೇಲೆ ಹರಿಹಾಯ್ದು ಗದಾಪ್ರಹಾರ ಮಾಡಿದ್ದು ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಿತು. ನಾವು ಎತ್ತಿಹಿಡಿಯುವ ಅತಿಮುಖ್ಯ ಮೌಲ್ಯಗಳ ಹಿನ್ನೆಲೆಯಲ್ಲಿ ಹೇಳಬೇಕೆಂದರೆ, ಪೊಲೀಸರ ಅಂದಿನ ಅಟ್ಟಹಾಸವನ್ನು ನಾವು ನಿರೀಕ್ಷಿಸಲೂ ಸಾಧ್ಯವಿರಲಿಲ್ಲ. ಶಾಂತಿಯುತ ಪ್ರತಿಭಟನೆಗೆ ಅವಕಾಶವಿಲ್ಲದಿದ್ದ ಕಾರಣ ಪ್ರತಿಭಟನಕಾರರು ವೇದಿಕೆಯನ್ನೇ ಹತ್ತುವ ಸಾಹಸಕ್ಕೆ ಮೊರೆಹೋದರೇನೋ ಎಂದೆನಿಸುತ್ತದೆ. ನಮ್ಮ ತಥಾಕಥಿತ ಪ್ರಜಾಪ್ರಭುತ್ವದಲ್ಲಿ ಇಂತಹ ಪ್ರಮಾದಗಳನ್ನು ಮಾಡುತ್ತಲೇ ಇದ್ದೇವೆ. ಬಹಳಷ್ಟು ಜನರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಇಚ್ಛಿಸಿದರೂ ನಮ್ಮೀ ವ್ಯವಸ್ಥೆ ಅದಕ್ಕೆ ಅವಕಾಶ ನೀಡುವುದಿಲ್ಲವಲ್ಲ! ಜನರನ್ನು ಪ್ರಾಣಿಗಳಂತೆ ಕಂಡರೆ ಸಹಜವಾಗಿಯೇ ಅವರೂ ಪ್ರಾಣಿಗಳಂತೆ ವರ್ತಿಸುತ್ತಾರೆ! ಸಮ್ಮೇಳನದೆಲ್ಲೆಡೆ ಪೊಲೀಸರದೇ ಕಾರುಬಾರು. ನನ್ನಂತೆ ಎಷ್ಟೋ ಪ್ರತಿನಿಧಿಗಳಿಗೆ ಮೂತ್ರವಿಸರ್ಜನೆಗೆ ಹೋಗಲೂ ಸಾಧ್ಯವಿರಲಿಲ್ಲ. ಇಡೀ ಸಮ್ಮೇಳನದ ವಾತಾವರಣ ಬೇಸರ ಮೂಡಿಸುವಂತಿತ್ತು. ನಮ್ಮ ಸಾಹಿತಿ ಮಿತ್ರರು ಈ ಎಲ್ಲ ಗೋಜಲುಗೊಂದಲಗಳ ನಡುವೆಯೂ ತಾಳ್ಮೆಯಿಂದ ಇದ್ದುದನ್ನು ನೋಡಿ ನನಗೆ ಅಚ್ಚರಿಯೇ ಆಗಲಿಲ್ಲ.

ನನ್ನ ಕವನವನ್ನು ಪ್ರಕಟಿಸಿದ್ದೀರಿ. ವಂದನೆಗಳು. ವಿಶೇಷ ಸಂಚಿಕೆಯಲ್ಲಿ ಸಾಕಷ್ಟು ಕವನಗಳೂ ಸಣ್ಣ ಕತೆಗಳೂ ಇವೆ. ಸಾಹಿತ್ಯಕ್ಕೆ ನೀವು ಗಮನ ನೀಡುತ್ತಿರುವುದು ಸಂತೋಷದ ವಿಷಯ. ಸಂಚಿಕೆಯಲ್ಲಿ ನನ್ನ ಕವನವೂ ಪ್ರಕಟವಾಗಿರುವುದರಿಂದ ಇತರ ಕವನಗಳ ಗುಣಮಟ್ಟದ ಬಗ್ಗೆ ನನ್ನ ಅಭಿಪ್ರಾಯಗಳನ್ನು ತಿಳಿಸುವುದಕ್ಕೆ ಇದು ಸೂಕ್ತ ಸಂದರ್ಭವಲ್ಲ. ನೀವು ಪ್ರಕಟಿಸಿರುವ ಮೂರು ಸಂದರ್ಶನಗಳು ಎಲ್ಲ ಓದುಗರ ಗಮನ ಸೆಳೆಯುವಂತಿವೆ.

ಹೈದರಾಬಾದ್ **ಕೆ. ವಿ. ತಿರುಮಲೇಶ್**

ಪ್ರೊ|| ಎಂ. ಆರ್. ಎಸ್. ಮೂರ್ತಿ ಅವರ 'ಪ್ಲೇಟೋ ಮತ್ತು ವೈರಾಣುಗಳು' ಲೇಖನವು ಸಸ್ಯಗಳಿಗೆ ಬರುವ ಕಾಯಿಲೆಗಳ ಬಗೆಗಿನ ಅದ್ಭುತ ಪ್ರಪಂಚವನ್ನು ತೆರೆದು ತೋರಿಸಿದೆ. ಈ ವಿಷಯದಲ್ಲಿ 'ಹೊಸತು' ಮ್ಯಾಗಜೀನ್ ಎಂದೆಂದಿಗೂ ಹೊಸತೇ. ಈ ಮಾಸಿಕಕ್ಕೆ ಹೋಲಿಕೆ




ಕನ್ನಡದಲ್ಲಿ ಇಲ್ಲ. ಲೇಖಕರ ಭಾಷೆ ಕುರಿತು ಎರಡು ಮಾತು: ವೈಜ್ಞಾನಿಕ ಲೇಖನಗಳನ್ನು ಇಷ್ಟು ಸರಳವಾಗಿ ಸುಂದರವಾಗಿ ಬರೆಯಲು ಸಾಧ್ಯ ಎಂಬ ಸಂಗತಿ ನನಗೆ ತುಂಬಾ ಖುಷಿ ಕೊಡುತ್ತಿದೆ. ಇಂಥದೇ ಸಂತೋಷವನ್ನು ಬಿ.ಜಿ.ಎಲ್. ಮತ್ತು ಜಿ.ಟಿ.ಎನ್. ಅವರ ಕೃತಿಗಳಲ್ಲಿ ಅನುಭವಿಸಿದ್ದೇನೆ. ಎಂ.ಆರ್.ಎಸ್. ಅವರು ಗಂಭೀರ ವಿಷಯವನ್ನು ತುಂಬಾ ಸಹಜ ಎನ್ನುವಂತೆ, ಮಾತನಾಡಿದಷ್ಟೇ ಸಹಜವಾಗಿ ಸರಳವಾಗಿ ಹೇಳುತ್ತಾರೆ. ಪದಗಳಿಗೆ ತಿಣುಕುವುದಿಲ್ಲ. ಬೇಕೆನಿಸಿದರೆ ಸೃಷ್ಟಿಸಿಕೊಳ್ಳುತ್ತಾರೆ. ಉದಾಹರಣೆ: ಕ್ರಿಸ್ಟಲೋಗ್ರಫಿಯನ್ನು ಸ್ಫಟಿಕಶಾಸ್ತ್ರ ಎಂದವರು ಮುಂದೆ ''ವೈರಾಣುಗಳಿಗೆ ನಿರ್ದಿಷ್ಟ ರಚನೆ ಇರುವುದರಿಂದ ಅವುಗಳನ್ನೂ 'ಸ್ಫಟಿಕೀಕರಿಸಬಹುದು''' ಎಂದು ಬರೆಯುತ್ತಾರೆ. ಬೇಡವೆನಿಸಿದರೆ ಇಂಗ್ಲಿಷ್ ಪದವನ್ನು ಕನ್ನಡ ಎನಿಸುವಷ್ಟೇ ಸರಳವಾಗಿ ಬಳಸಿಬಿಡುತ್ತಾರೆ. ಉದಾಹರಣೆ: ''ಏಡ್ಸ್ ವೈರಾಣುವಿನ ಪ್ರೋಟೀನ್ ಕವಚವನ್ನು ಇನ್ನೊಂದು 'ಲಿಪಿಡ್' (= ಕೊಬ್ಬು) ಪದರ ಆವರಿಸಿಕೊಂಡಿರುತ್ತದೆ.'' ಮಾತನಾಡಿದಂತೆ ಅಂದವಾಗಿ ಹೇಳುವ ಅವರ ಭಾಷೆ ನೋಡಿ: ''ವೈರಾಣುಗಳು ಮೆದುಳಿನ ಜೀವಕೋಶಗಳ ಮೇಲೆ ಲಗ್ಗೆ ಇಡುತ್ತವೆ'', ''ಮಲ್ಲಿಗೆ ಹೂವಿನ ಐದು ದಳಗಳ ಹಂಚಿಕೆಯಲ್ಲಿ ಸಮತೆ ಇದೆ. ಹೂವಿನ ತೊಟ್ಟನ್ನು ಹಿಡಿದು ಅದರ ಸುತ್ತ ೭೨ ಡಿಗ್ರಿ ತಿರುಗಿಸಿದರೆ ಹೂವು ಮೊದಲಿದ್ದ ಹಾಗೆಯೇ ಕಾಣುತ್ತದೆ'' (ಒಂದು ಬಿಂದುವಿನಲ್ಲಿರುವ ಒಟ್ಟು ೩೬೦ ಡಿಗ್ರಿ ಕೋನವನ್ನು ಐದು ಭಾಗಗಳಾಗಿ ಮಾಡಿದರೆ ೭೨ ಡಿಗ್ರಿ).

ಶಿವಮೊಗ್ಗ **ಪ್ರೊ|| ಎಲ್. ಎಂ. ಎಲ್. ಶಾಸ್ತ್ರಿ**

ಸಂಚಿಕೆಯಲ್ಲಿ ಮುಖಪುಟ ಒಮ್ಮೆಲೇ ಆಕರ್ಷಕವೆನ್ನಿಸಿತು. ಆದರೆ, 'ನೆಮ್ಮದಿಯ ನಾಳೆ ನಮ್ಮದು', 'ಹೊಸ ವರ್ಷದ ಶುಭಾಶಯಗಳು' ಇಂತಹ ಸಾಲುಗಳ ಹಿನ್ನೆಲೆಯಲ್ಲಿ ಹರಕು ಬಟ್ಟೆಯ, ಖಿನ್ನ ಭಾವದ ಬಾಲಕನ ಚಿತ್ರವನ್ನು ನೋಡುತ್ತಾ ಮನಸ್ಸು ಮುದುರಿತು. ಚಿತ್ರ ಸ್ವಲ್ಪ ''ಪರಕೀಯ'' ಅಂತಲೂ ಅನ್ನಿಸಿತು. ಏನೇ ಇರಲಿ, ನನ್ನ ಈ ಅಭಿಪ್ರಾಯಗಳನ್ನು ಹಂಚಿಕೊಳ್ಳುವವರು ತೀರಾ ಕಡಿಮೆ – ಅಲ್ಲವೆ? ಸಾಹಿತ್ಯ, ಸಂಗೀತ, ಕೃಷಿ ಹಾಗೂ ವಿಜ್ಞಾನ ಕ್ಷೇತ್ರಗಳ ಘಟಾನುಘಟಿಗಳನ್ನು ಸಂದರ್ಶಿಸಿ, ಅವರಿಂದ ಅತ್ಯಮೂಲ್ಯ ವಿಷಯಗಳನ್ನು ಹೊರಡಿಸಿದ್ದೀರಿ. ಈವೊತ್ತಿನ ಸಮಗ್ರ ಭಾರತವನ್ನು ಅರಿಯಲು ಸಾಕಾಗುವಷ್ಟು ಅಂಶಗಳು ಈ ಸಂದರ್ಶನಗಳಲ್ಲಿವೆ. ಇವಿಷ್ಟನ್ನೇ ಪ್ರತ್ಯೇಕ ಹೊತ್ತಿಗೆಯಲ್ಲಿ ಹೊರತಂದರೆ ಅದೊಂದು ಸಂಗ್ರಹಯೋಗ್ಯ ಗ್ರಂಥವಾದೀತು. ಕೆ. ವೈ. ನಾರಾಯಣಸ್ವಾಮಿಯವರ ನಾಟಕ 'ಬಾಹುಬಲಿ' ಅತ್ತ ಹಾಸ್ಯವೂ ಆಗದೆ, ಇತ್ತ ಗಂಭೀರವೂ ಅನ್ನಿಸದೆ ಮೊದಲ ಓದಿಗಂತೂ ಖುಷಿಯಾಗಲಿಲ್ಲ. ರಂಗದ ಮೇಲೆ ಹೇಗಾಗುವುದೊ. ಅಮರೇಶ್ ನುಗಡೋಣಿಯವರ ಸಣ್ಣಕತೆ, ಸ್ವಲ್ಪ ದೊಡ್ಡದು ಎನ್ನಿಸಿದರೂ ಪ್ರಾರಂಭದಲ್ಲಿಯ ಭಾಷೆಗಳ ತೊಡಕು ಕ್ರಮೇಣ ಸರಳವಾಗಿ ಓದಿಸಿಕೊಂಡು ಕೊನೆಗೆ ನೆಮ್ಮದಿಯ ನಾಳೆಯ ಹೊಸ ಹೊಳಹು ಕಾಣಿಸಿತು. ಶ್ರೀನಿವಾಸರಾಜು, ತಿರುಮಲೇಶ್, ಚೊಕ್ಕಾಡಿ, ರಾಮಸ್ವಾಮಿ ಹಾಗೂ ರೂಪ ಹಾಸನ ಇವರ ಕವನಗಳು ಹೊಸರೀತಿಯ ಅಭಿವ್ಯಕ್ತಿಯಿಂದಾಗಿ ಇಷ್ಟವಾದವು. ನ. ಸುಬ್ರಹ್ಮಣ್ಯಂ ಅವರನ್ನು ಹುತ್ತದಿಂದ ಹೊರತೆಗೆದಿದ್ದೀರಿ; ಸುಮತಿ ಹಾಗೂ ಸುಧಾಕರ್ ಅವರಿಗೆ ಕೃತಜ್ಞತೆಗಳು. ಇಡೀ ಪುಸ್ತಕದಲ್ಲಿ ಸ್ವಲ್ಪ ಕಿರಿಕಿರಿಯೆನ್ನಿಸಿದ್ದು ಸ್ಫುಟವಾಗಿಲ್ಲದ, ಮಸುಕು ಮಸುಕಾದ ಕಪ್ಪು - ಬಿಳಿ ಫೋಟೋಗಳು. ಅಚ್ಚಬಿಳಿ ಹಾಳೆಗಳನ್ನು ಈ ಬಾರಿ ಬಳಸದೇ ಇದ್ದುದೂ ಒಂದು ಕಾರಣವಿರಬಹುದು. ಕೆದಿಲಾಯ, ಸೃಜನ್, ಶ್ರೀಹರಿ ಮೊದಲಾದವರ ರೇಖಾಚಿತ್ರಗಳು ಸೊಗಸಾಗಿದ್ದು ಕಥೆ-ಕವನಗಳ ಅರ್ಥವನ್ನು ಹಿಗ್ಗಿಸಿವೆ.

ತೀರ್ಥಹಳ್ಳಿ **ಹೆಚ್. ವಿ. ಲಕ್ಷ್ಮೀನಾರಾಯಣ**

ಡಾ|| ರಹಮತ್ ತರೀಕೆರೆಯವರು 'ತೇಜಸ್ವಿಯವರ ಮಾಯಾಲೋಕ' ಕುರಿತ ವಿಮರ್ಶೆಯಲ್ಲಿ ಈ ಕೃತಿಯ ನೆಪ ಮಾಡಿಕೊಂಡು ತೇಜಸ್ವಿಯವರ ಇಡೀ ಸಾಹಿತ್ಯದ ಲಕ್ಷಣವನ್ನೇ ಕುರಿತು ಒಂದು ರೇಖಾ ವಿನ್ಯಾಸದ ಗೆರೆ ಎಳೆದು ವಿಮರ್ಶಿಸಿದ್ದಾರೆ. ಅವರ ಲೇಖನದ ಹಾಸು-ಬೀಸು ಹಾಗಿದೆ.

ಕಡೆಯಲ್ಲಿ ರಹಮತ್ ಎತ್ತಿರುವ ಒಂದೆರಡು ಪ್ರಶ್ನೆಗಳು ಕೂಡ ತೀರ ಪ್ರಸ್ತುತವಾಗಿವೆ: ''ತೇಜಸ್ವಿಯವರ ಬರಹದಲ್ಲಿ

ಯಾಕೆ ಸಮಾಜದ ವರ್ಗ ವೈರುಧ್ಯಗಳು ತೀವ್ರ ಪ್ರಶ್ನೆಗೆ ಒಳಪಡುವುದಿಲ್ಲ? ಒರಟಾಗಿ ಕೇಳುವುದಾದರೆ, ಕಾಫಿ ತೋಟಗಳಲ್ಲಿ ಕೆಲಸ ಮಾಡುವ ಗುಳೆ ಬಂದ ಜನ ಬದುಕುವ ಲೈನುಗಳಲ್ಲಿ ಅವರ ಬದುಕನ್ನು ಹಿಡಿಯಲು ತೇಜಸ್ವಿ ಬರಹ ಯಾಕೆ ಹಿಂಜರಿಯುತ್ತದೆ ?''

ಈ ಪ್ರಶ್ನೆಗಳು ಸದ್ಯ ಮಲೆನಾಡಿನಲ್ಲಿ ಉದ್ಭವ ಗೊಂಡಿರುವ ನಕ್ಸಲ್ ಸಮಸ್ಯೆಯತ್ತ ತೋರುಬೆರಳು ಮಾಡುವ ಪ್ರಯುಕ್ತ ತೇಜಸ್ವಿಯವರು ಆ ಗೊಂದಲವೇ ಬೇಡವೆಂದು ಭಾವಿಸಿ, ಅವು ಮಾಯಾಲೋಕದಲ್ಲಿ ಪ್ರವೇಶ ಮಾಡದಂತೆ ಪ್ರಜ್ಞಾಪೂರ್ವಕ ದಿಗ್ಬಂಧನ ಹಾಕಿಬಿಟ್ಟಿದ್ದಾರೆ ನಿಸುವುದು. ಯಾಕೆಂದರೆ ಮಲೆನಾಡಿನ ಜಮೀನ್ದಾರಿ ವರ್ಗವೂ ಅಲ್ಲಿಯೇ ಬದುಕಬೇಕಲ್ಲ! ನಮ್ಮ ಬದುಕು ಬರಹಕ್ಕಿಂತ ದೊಡ್ಡದು!

ಬೆಂಗಳೂರು **ಪ್ರೊ|| ಶಿವರಾಮಯ್ಯ**

ಪ್ರೊ|| ಎಂ. ಎಂ. ಕಲಬುರ್ಗಿಯವರ 'ವಿಜ್ಞಾನೇಶ್ವರನ ಮರ್ತೂರ ಶಾಸನ' ಲೇಖನದಲ್ಲಿ ವಿಜ್ಞಾನೇಶ್ವರ 'ಮಿತಾಕ್ಷರ'ದಲ್ಲಿ ನೀಡುವ ವಿವರ ಕುರಿತು ಭಾರದ್ವಾಜ ಗೋತ್ರದ ಪದ್ಮನಾಭ (ವಿಜ್ಞಾನೇಶ್ವರನ ತಂದೆ) ವೈಷ್ಣವ ಎಂದಿದ್ದಾರೆ. ಈ ಕೆಳಗಿನ ಚಂದ್ರಜ್ಞಾನಾಗಮದ ಶ್ಲೋಕದಲ್ಲಿ ಭಾರದ್ವಾಜ, ಕೌಶಿಕ ಗೋತ್ರಗಳೆರಡೂ ಆದಿಶೈವರದೆಂದು ಹೇಳಲಾಗಿದೆ :

ಆದಿಶೈವಾಸ್ತು ವಿಜ್ಞೇಯಾಃ ಕೌಶಿಕಾ ಮಹರ್ಷಯಃ ||೬||
ಕೌಶಿಕಃ ಕಾಶ್ಯಪಶ್ಚೈವ ಭಾರದ್ವಾಜಾತ್ರಿಗೌತಮಃ
ಆದಾವೇತೇ ಮಹೇಶಸ್ಯ ಪಂಚ ವಕ್ತ್ರೇಷು ದೀಕ್ಷಿತಾಃ ||೭||

'ಪದ್ಮನಾಭ' ಹೆಸರಿನಿಂದ ವೈಷ್ಣವರೆಂದು ಕಲ್ಪಿಸಿರಬಹುದೆಂದು ಕಾಣುತ್ತದೆ. ಅವೆರಡೂ ಗೋತ್ರಗಳು ಆಗಮಗಳಲ್ಲೇ ಕಾಣುವದು ವಿಚಾರಾರ್ಹ; ವೈದಿಕ ಬ್ರಾಹ್ಮಣ, ಆಗಮಿಕ ಬ್ರಾಹ್ಮಣ ಇತ್ಯಾದಿಗಳ ವರ್ಗೀಕರಣ ಪ್ರಶ್ನಾರ್ಹ. ಆಗಮಿಕ ಬ್ರಾಹ್ಮಣರೆಂದು ಕರೆಯಲ್ಪಟ್ಟ ಬ್ರಾಹ್ಮಣರು ವೇದಗಳನ್ನು ಒಪ್ಪಿಕೊಂಡವರೇ ಎಂಬುದನ್ನೂ ಗಮನಿಸಬೇಕು. ವೈಷ್ಣವ ಆಗಮಗಳು ಇರುವುದನ್ನೂ ಗಮನಿಸಬೇಕು.

ಬಾಗಲಕೋಟ **ವಿಜಯಮಠ**

### ಭೂಮಿ ವಶಪಡಿಸಿಕೊಳ್ಳುವ ಬಗ್ಗೆ

ಕೆಲವು ಬ್ಯಾಂಕುಗಳಲ್ಲಿ ಚಿನ್ನವನ್ನು ಠೇವಣಿಯಾಗಿ ಸ್ವೀಕರಿಸಿ ಆ ಠೇವಣಿಯ ಬಡ್ಡಿಯನ್ನು ಚಿನ್ನದ ರೂಪದಲ್ಲೇ ಪಾವತಿಸುವ ವ್ಯವಸ್ಥೆ ಜಾರಿಯಲ್ಲಿದೆ.

ರೈತರಿಂದ ವಶಪಡಿಸಿಕೊಳ್ಳುವ ಜಮೀನಿಗೆ ಪರಿಹಾರ ನೀಡುವಾಗ ಮೇಲ್ಕಂಡ ವ್ಯವಸ್ಥೆಯನ್ನು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಅಳವಡಿಸಿಕೊಳ್ಳಬಹುದು. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರೈತರಿಂದ ವಶಪಡಿಸಿಕೊಂಡ ಜಮೀನನ್ನು ಹಿಂದಿರುಗಿಸಲಾಗದ ನಿರ್ದಿಷ್ಟಾವಧಿ (ಹತ್ತು ವರ್ಷಗಳು) ಠೇವಣಿಯೆಂದು ಪರಿಗಣಿಸಿ ಅದರ ಬಡ್ಡಿ ಜಮೀನು ರೂಪದಲ್ಲೇ ಬೆಳೆದು ಕೂಡಿಕೊಳ್ಳುವ ಹಾಗೆ ನೋಡಿಕೊಳ್ಳಬೇಕು. ಅಂದರೆ ಹಿಂದಿರುಗಿಸಲಾಗದ ಠೇವಣಿಯಾಗಿ ಪಡೆದ ಜಮೀನಿನ ವಾರ್ಷಿಕ ಬಡ್ಡಿಯನ್ನು ಜಮೀನಿನ ರೂಪದಲ್ಲೇ ಲೆಕ್ಕಹಾಕಬೇಕು. ವಶಪಡಿಸಿಕೊಳ್ಳುವಾಗ ಕೊಡುವ ಪರಿಹಾರವನ್ನು ಮುಂಗಡ ಬಡ್ಡಿ ಎಂದು ಪರಿಗಣಿಸಬೇಕೆ ಹೊರತು ಜಮೀನಿನ ಬೆಲೆ ಎಂದು ಪರಿಗಣಿಸಬಾರದು. ಉದಾಹರಣೆಗೆ, ಒಬ್ಬ ರೈತನಿಂದ ಒಂದು ಎಕರೆ ಜಮೀನನ್ನು ವಶಪಡಿಸಿಕೊಂಡಾಗ ಅದಕ್ಕೆ ವಾರ್ಷಿಕ ೧೦% ಜಮೀನುರೂಪದ ಬಡ್ಡಿ ನಿಗದಿಮಾಡಿ ಅದನ್ನು ಠೇವಣಿಯ ಲೆಕ್ಕಕ್ಕೆ ಕೂಡಿಸುತ್ತಾ ಹೋದರೆ ಹತ್ತು ವರ್ಷಕ್ಕೆ ಜಮೀನು ರೂಪದ ಆ ಬಡ್ಡಿ ಒಂದು ಎಕರೆಯಷ್ಟು ಬೆಳೆದಿರುತ್ತದೆ. ಹಾಗೆ ಬೆಳೆದುಕೂಡಿಕೊಂಡಿರುವ ಬಡ್ಡಿ ರೂಪದ ಜಮೀನಿನ ಅಂದಿನ (ಹತ್ತು ವರ್ಷಗಳ ಅನಂತರದ) ಮಾರುಕಟ್ಟೆ ಮೌಲ್ಯವನ್ನು ಲೆಕ್ಕಹಾಕಿ ಠೇವಣಿದಾರರಿಗೆ ಅಥವಾ ಅವರ ವಾರಸುದಾರರಿಗೆ ಪಾವತಿಸಬೇಕು. ವಶಪಡಿಸಿಕೊಳ್ಳುವಾಗ ಕೊಟ್ಟ ಪರಿಹಾರವನ್ನು ಅಂತಿಮ ಪಾವತಿಯಲ್ಲಿ ಮುರಿದುಕೊಳ್ಳಬೇಕು.

ಇಂಥ ವ್ಯವಸ್ಥೆಯನ್ನು ಜಾರಿಗೆ ತರಬೇಕಾದರೆ ಮಂಡಳಿ ಕೈಗಾರಿಕೋದ್ಯಮಿಗಳಿಗೆ ಜಮೀನನ್ನು ಮಂಜೂರು ಮಾಡುವಾಗ ಮಾರಾಟ ಮಾಡಬಾರದು. ೩೦ ವರ್ಷಗಳ ಅವಧಿಗೆ ಲೀಸ್ ಮೇಲೆ ಹಸ್ತಾಂತರಿಸಿ ೩೦ ವರ್ಷಗಳ ಅನಂತರ ಅದರ ಸರ್ವಸ್ವಾಮ್ಯ ಫಲಾನುಭವಿಗಳಿಗೇ (ಕೈಗಾರಿಕೋದ್ಯಮಿಗಳಿಗೇ) ದಕ್ಕುವಂತೆ ವ್ಯವಸ್ಥೆ ಮಾಡಬೇಕು. ಅಲ್ಲಿಯವರೆಗೆ ಪ್ರತಿವರ್ಷವೂ ಜಮೀನಿನ ಅಂದಂದಿನ ಮಾರುಕಟ್ಟೆ ಮೌಲ್ಯದ ೧೦%ರಷ್ಟನ್ನು ನೆಲ ಬಾಡಿಗೆಯನ್ನಾಗಿ ಮಂಡಳಿ ವಸೂಲು ಮಾಡಬೇಕು. ಹತ್ತು ವರ್ಷಗಳ ಕೊನೆಯಲ್ಲಿ ಸಂಗ್ರಹವಾದ ನೆಲಬಾಡಿಗೆ ಬಡ್ಡಿ ರೂಪದ ಜಮೀನಿನ ಅಂದಿನ ಮಾರುಕಟ್ಟೆ ಮೌಲ್ಯಕ್ಕಿಂತ ಕಡಿಮೆಯಾಗಿದ್ದರೆ ಆ ಕೊರತೆಯನ್ನು ಮಂಡಳಿಯೇ ಭರಿಸಿ ಮೂಲಠೇವಣಿದಾರರಿಗೆ (ಮೂಲ ಮಾಲೀಕರಿಗೆ) ಪಾವತಿಸಬೇಕು. ಮುಂದಿನ ೨೦ ವರ್ಷಗಳ ನೆಲಬಾಡಿಗೆಯಿಂದ ಆ ಕೊರತೆಯನ್ನು ಮಂಡಳಿ ತುಂಬಿಕೊಳ್ಳಬೇಕು.

ಮೈಸೂರು **ಹೆಚ್. ಸಿದ್ದಲಿಂಗಯ್ಯ**

### ಭೂಮಿಗಾಗಿ

ಭೂಮಿ ಹಾಗೂ ಇದ್ದ ಮನೆ ಬಿಟ್ಟು ಕರ್ನಾಟಕದ ಕೆಲವು ಭಾಗದ ಜನ ದುಡಿಯುವುದಕ್ಕೆ ಗುಳೆ ಹೋಗುತ್ತಿದ್ದಾರೆ. ಬೆಂಗಳೂರಿನ ಹತ್ತಿರವಿರುವ ಒಂದು ಎಕರೆ ಭೂಮಿ ಕೋಟ್ಯಂತರ ರೂಪಾಯಿ ಬೆಲೆಬಾಳುತ್ತಿದೆ. ಶ್ರೀರಂಗಪಟ್ಟಣದ ಆಸುಪಾಸಿನ ಭೂಮಿಯನ್ನು ತೆಗೆದುಕೊಳ್ಳಲು ಜನ ಮುಗಿಬೀಳುತ್ತಿದ್ದಾರೆ. ಅಂಥ ಬೆಂಗಾಡು ಗುಲ್ಬರ್ಗದ ಶಹಾಪುರದಲ್ಲೂ ಈಗ ರೆಸಾರ್ಟ್‌ಗಳು ಎದ್ದಿವೆ. (ಎಷ್ಟೇ ಬಿಸಿಲಿರಲಿ ಸಂಜೆಯಾದರೆ ಅಲ್ಲಿಯೂ ತಂಗಾಳಿ ಬೀಸುತ್ತದೆ.) ಬೆಂಗಳೂರಿನ ಅರಮನೆ ಮೈದಾನದಲ್ಲಿ ನಡೆಯುವ ರ್‍ಯಾಲಿಗೆ ಟ್ರಕ್ ಹತ್ತಿ ಬರುವ ರೈತ ಹೋಗುವಾಗ ವಿಧಾನಸೌಧ, ಕಬ್ಬನ್ ಪಾರ್ಕ್, ಲಾಲ್‌ಬಾಗ್ ನೋಡಿಕೊಂಡು ಹೋಗುತ್ತಾನೆ. ಈಗಲೂ ನಮಗೆ ಹಸಿರು ಟವಲ್ಲುಗಳ ಕಡೆಗೆ ಅಸೆಗಣ್ಣಿನಿಂದ ನೋಡುವ ರೈತರು ತುರುವೇಕೆರೆ ಬಸ್ ಸ್ಟ್ಯಾಂಡ್‌ನಲ್ಲೋ ಚಾಮರಾಜನಗರ ಹೋಟೆಲಿನಲ್ಲೋ ಖಂಡಿತ ಕಾಣಸಿಗುತ್ತಾರೆ. ಬೆಂಗಳೂರಿನ ಹೋಟೆಲುಗಳಲ್ಲಿ ಕನಿಷ್ಠ ಸಾವಿರ ರೂಪಾಯಿಗೆ ದುಡಿಯುವ ಮಂಡ್ಯ ಜಿಲ್ಲೆಯ ರೈತರ ಮಕ್ಕಳ ಸಂಖ್ಯೆ ಹೆಚ್ಚುತ್ತಿದೆ. ಇಪ್ಪತ್ತು ವರ್ಷಗಳ ಕಾಲ ರೈತರು ಭೂಮಿಯನ್ನು ತಮ್ಮದೆಂದು ತಿಳಿದು ಸಾಗುವಳಿ ಮಾಡಿದ್ದಾರೆ. ಆದರೆ ಜಮೀನಿನ ದಾಖಲೆಯಲ್ಲಿ ಮಾತ್ರ ಅವರ ಹೆಸರೇ ಇಲ್ಲ!

ಉತ್ತರ ಕರ್ನಾಟಕದ ಜನ ಕೆ. ಆರ್. ಸಾಗರದ ಸುತ್ತಲಿನ ಭೂಮಿಯನ್ನು ನೋಡಿ, ''ಇದ್ದರೆ ಇಂಥ ಭೂಮಿ ಇರಬೇಕು'' ಎನ್ನುತ್ತಾರೆ. ನೀರಾವರಿಯ ಈ ರೈತರನ್ನು ಮಾತನಾಡಿಸಿ ನೋಡಿದರೆ ''ಈ ಜಮೀನು ಮಾಡೋದರಲ್ಲಿ ಏನೂ ಇಲ್ಲ ಸ್ವಾಮಿ, ಸುಮ್ಮನೆ ಮಾಡೋದು'' ಎಂಬ ನಿರಾಶೆಯ ನುಡಿ ಎದುರಾಗುತ್ತದೆ. ಬೆಳೆ, ಬೇಡಿಕೆ, ಅವರಿಗೆ ಅವರದೇ ಆದ ಸಮಸ್ಯೆಗಳು! ರೈತನೊಬ್ಬನ ಈ ದೈನೇಸಿ ಸ್ಥಿತಿಗೆ ಕಾರಣವಾದದ್ದು ಮಾತ್ರ ಜಾಗತೀಕರಣ! ಕೃಷಿ ಲಾಭದಾಯಕ ಹುದ್ದೆ ಅಲ್ಲ ಎನ್ನುವ ವಾತಾವರಣವನ್ನು ಉದ್ದೇಶಪೂರ್ವಕವಾಗಿ ಸೃಷ್ಟಿ ಮಾಡಲಾಯಿತು. ಒಟ್ಟು ೧,೩೪,೩೨೧ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಸತ್ತವರೆಲ್ಲ ಕನಿಷ್ಠ ಒಂದು ಎಕರೆ ಭೂಮಿ ಹೊಂದಿದವರು. ಯಾರ ಬಾಯಿಂದ ಕೇಳಿದರೂ ಜಮೀನಿನಲ್ಲಿ ಏನು ಲಾಭ ಇದೆ, ಎನ್ನುವ ಮಾತೇ ದಿನನಿತ್ಯ ಕೇಳಿ ಬರುತ್ತದೆ.

ಇತ್ತೀಚೆಗೆ ಭಾರತದಲ್ಲಿ ಕೃಷಿ ಮೇಲಿನ ಸ್ವಾವಲಂಬನೆ ಹೆಚ್ಚಾಗುತ್ತಿರುವುದನ್ನು ಗುರುತಿಸಲಾಗಿದೆ. ಈ ಸ್ವಾವಲಂಬನೆಯನ್ನು ಹೇಗಾದರೂ ಮಾಡಿ ತಪ್ಪಿಸಬೇಕು. ಸ್ವಾವಲಂಬನೆ ಸಾಧ್ಯವಾಗುವುದಾದರೆ ಜಾಗತೀಕರಣದ ಮಾರುಕಟ್ಟೆ ವಿಸ್ತರಣೆಯಾಗುವುದಿಲ್ಲ. ಈ ಸ್ವಾವಲಂಬನೆಯ ಸೂತ್ರಧಾರಿ ರೈತ. ಮಾರುಕಟ್ಟೆಯ ವಿಸ್ತರಣೆಗೆ ಅಡ್ಡಲಾಗುವ ಇವನನ್ನು ಸಾಯಿಸುವುದೊಂದೇ ಜಾಗತೀಕರಣಕ್ಕೆ ಇರುವ ಪ್ರಮುಖ ಗುರಿ. ಕರ್ನಾಟಕದಲ್ಲಿ ಒಟ್ಟು ೧೯೦.೫೦ ಲಕ್ಷ ಹೆಕ್ಟೇರ್ ಭೂಮಿ ಇದೆ. ಇದರಲ್ಲಿ ೧೨೩.೭ ಲಕ್ಷ ಹೆಕ್ಟೇರ್ ಭೂಮಿ ಕೃಷಿಯೋಗ್ಯ ಭೂಮಿ. ಇದರಲ್ಲಿ ೧೦೭ ಲಕ್ಷ ಹೆಕ್ಟೇರ್ ಭೂಮಿಯಲ್ಲಿ ಮಾತ್ರ ಸಾಗುವಳಿ ನಡೀತಾ ಇದೆ. ಕಳೆದ ೬೦ ವರ್ಷಗಳಲ್ಲಿ ಮೂರು ಪಟ್ಟು ಜನಸಂಖ್ಯೆ ಜಾಸ್ತಿಯಾಗಿದೆ. ಇದೇ ಅವಧಿಯಲ್ಲಿ ಕೃಷಿಯೋಗ್ಯ ಭೂಮಿಯ ಪ್ರಮಾಣ ಶೇ. ೧೫ರಷ್ಟು ಕಡಿಮೆಯಾಗಿದೆ.

ಕೃಷಿಯೋಗ್ಯ ಭೂಮಿಯಲ್ಲಿ ಶೇ. ೩೪ರಷ್ಟು ಭೂಮಿ ಶೇ. ೭೩ ಜನರ ಕೈಯಲ್ಲಿ ಇದೆ. ಶೇ. ೬೬ರಷ್ಟು ಭೂಮಿ

ಮಂಗಳೂರಿನ ಸಂದೇಶ ಶಿಕ್ಷಣ ಮತ್ತು ಸಂಸ್ಕೃತಿ ಪ್ರತಿಷ್ಠಾನವು ೨೦೦೭ರ 'ಸಂದೇಶ ಪತ್ರಿಕೋದ್ಯಮ ಪ್ರಶಸ್ತಿ'ಯನ್ನು 'ಹೊಸತು' ಸಂಪಾದಕ ಡಾ|| ಜಿ. ರಾಮಕೃಷ್ಣ ಅವರಿಗೆ ನೀಡಿದೆ. ಅದನ್ನವರು ಸ್ವೀಕರಿಸಿದ್ದಾರೆ. ಸಂದೇಶ ಸಂಸ್ಥೆಗೆ ಜಿ. ಆರ್. ತಿಳಿಸಿರುವಂತೆ ಅವರು ನಿಜಾರ್ಥದಲ್ಲಿ ವೃತ್ತಿನಿರತ ಪತ್ರಕರ್ತರಾಗಲಿ ಪತ್ರಿಕೋದ್ಯಮಿಯಾಗಲಿ ಅಲ್ಲ. ಅನೇಕ ವರ್ಷಗಳ ಕಾಲ ಪತ್ರಿಕೆಗಳಲ್ಲಿ ಉದ್ಯೋಗಿಗಳಾಗಿ ದುಡಿದವರ ಮತ್ತು ದುಡಿಯುತ್ತಿರುವವರ ಸಾಲಿಗೆ ಸೇರಲು ಅವರಿಗೆ ಸಾಧ್ಯವಾಗಿಲ್ಲ. ಪ್ರಶಸ್ತಿಯನ್ನು ವೈಯಕ್ತಿಕವಾಗಿ ಜಿ. ರಾಮಕೃಷ್ಣ ಅವರಿಗೆ ನೀಡಲಾಗಿದೆಯಾದರೂ ವಾಸ್ತವಿಕವಾಗಿ ಅದು ಎಂಟು ವರ್ಷ ವಯಸ್ಸಿನ 'ಹೊಸತು' ಪತ್ರಿಕೆಗೆ ಮತ್ತು ಅದರ ಸ್ಪಷ್ಟ ಧೋರಣೆಗಳಿಗೆ ನೀಡಲಾಗಿರುವ ಪ್ರಶಸ್ತಿ. ವಿಶಾಲಾರ್ಥದಲ್ಲಿ ಪ್ರಶಸ್ತಿಯು 'ಹೊಸತು' ವಿಚಾರಗಳಿಗೆ, ಓದುಗರಿಗೆ, ಲೇಖಕರಿಗೆ ಮತ್ತು ಪ್ರಕಾಶಕರಿಗೆ ಸಂದ ಪ್ರಶಸ್ತಿ. ಆ ನೆಲೆಯಲ್ಲಿ ಜಿ. ಆರ್. ಪ್ರಶಸ್ತಿ ಪಡೆದಿದ್ದಾರೆ ಮತ್ತು ಈ ಸಂದರ್ಭದಲ್ಲಿ ಪತ್ರಿಕೆಯ ಓದುಗರಿಗೆ ಮತ್ತು ಲೇಖಕರಿಗೆ ಅವರು ಕೃತಜ್ಞತೆ ಸಲ್ಲಿಸುತ್ತಾರೆ. ಸಂದೇಶ ಸಂಸ್ಕೃತಿ ಮತ್ತು ಶಿಕ್ಷಣ ಪ್ರತಿಷ್ಠಾನವು ಗುರುತಿಸಿರುವಂತೆ 'ಹೊಸತು' ಮಾಸಪತ್ರಿಕೆಯು ''ಮಾನವ ಜೀವನಕ್ಕೆ ಸಂಬಂಧಪಟ್ಟ ವಿಷಯಗಳ, ಸಮಸ್ಯೆಗಳ ಕುರಿತು ವಿಚಾರಾತ್ಮಕ, ಮಾರ್ಗದರ್ಶಿ ಬರಹಗಳನ್ನು ಪ್ರಕಟಿಸಿ ಜನಸಾಮಾನ್ಯರ ಅರಿವನ್ನು ವಿಸ್ತರಿಸುತ್ತಾ ಬಂದಿದೆ.'' ಇದನ್ನು ನಾವೆಲ್ಲಾ ಒಟ್ಟಾಗಿ ಮುಂದುವರಿಸೋಣ.

ಶೇ. ೨೭ರಷ್ಟು ಜನರ ಕೈಯಲ್ಲಿದೆ. ಶೇ. ೧೮ರಷ್ಟು ಜನರಿಗೆ ಭೂಮಿಯೇ ಇಲ್ಲ (ಇವರೆಲ್ಲ ಕೃಷಿ ಕಾರ್ಮಿಕರು). ಒಂದು ಕಡೆ ಜಾಗತೀಕರಣದ ವಿಷ ಕುಡಿದು ತಾನೇ ಉತ್ತ ಭೂಮಿಯಲ್ಲಿ ರೈತ ಹೆಣವಾಗಿ ಬೀಳುತ್ತಾನೆ. ಇನ್ನೊಂದು ಕಡೆ ಭೂಮಿಯ ಅಸಮಾನ ಹಂಚಿಕೆಯೂ ಅವನ ಬದುಕನ್ನು ತಿಂದುಹಾಕಿದೆ. ನಂಬಲಿಕ್ಕೂ ಸಾಧ್ಯವಾಗದ ಸಂಗತಿ ಎಂದರೆ ಆಂಧ್ರಪ್ರದೇಶದಲ್ಲಿ ಒಬ್ಬ ವ್ಯಕ್ತಿ ೨೧/೨ ಲಕ್ಷ ಎಕರೆ ಜಮೀನು ಹೊಂದಿದ್ದರೆ ಇನ್ನೊಬ್ಬ ಒಂದು ಲಕ್ಷ ಎಪ್ಪತ್ತು ಸಾವಿರ ಎಕರೆ ಜಮೀನು ಹೊಂದಿದ ಉದಾಹರಣೆ ಇದೆ. ದೇಶದ ಬಹುತೇಕ ರಾಜ್ಯಗಳಲ್ಲಿ ಇಂಥ ಅಸಮಾನತೆಯ ಕೇಂದ್ರಬಿಂದುಗಳಿವೆ.

ಆರ್ಥಿಕ ವಲಯ ಎಂದ ತಕ್ಷಣವೇ ನಮಗೆ ಗಾಂಧಿ ನೆನಪಾಗುತ್ತಾರೆ. ಹಳ್ಳಿ ಹಾಗೂ ರೈತಾಪಿ ವರ್ಗವನ್ನು ಗಮನದಲ್ಲಿಟ್ಟುಕೊಂಡು ನಮ್ಮ ಅರ್ಥವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕೆಂದಿದ್ದರು ಗಾಂಧಿ. ಹಳ್ಳಿಗಳು ಆರ್ಥಿಕ ಮೂಲ ಕೇಂದ್ರಗಳಾಗಬೇಕು. ಒಂದು ಚಿಕ್ಕ ಹಳ್ಳಿ ನಮ್ಮ ಸದೃಢ ವ್ಯವಸ್ಥೆಯ ಚಿಕ್ಕ ಘಟಕವಾಗಬೇಕು; ಅಂದಾಗ ಸ್ವಾವಲಂಬಿ ಹಾಗೂ ಸದೃಢ ಸಮಾಜವನ್ನು ಕಟ್ಟಬಹುದು. ಆದರೆ ಇವತ್ತು ಐ.ಟಿ. ಬಿ.ಟಿ ಮಾತ್ರ ಆರ್ಥಿಕ ಉತ್ಪಾದನಾ ಕೇಂದ್ರಗಳಾಗಿವೆ. ನಗರಗಳು ಮಾತ್ರ ಅಭಿವೃದ್ಧಿಯ ಸಂಕೇತಗಳಾಗಿವೆ. ಜನ ನಗರಗಳಿಗೆ ಮುಗಿಬೀಳುತ್ತಲೇ ಇದ್ದಾರೆ. ಈ ವಾತಾವರಣದಲ್ಲಿ ಬೆಳೆದಂತೆಲ್ಲ ಅಮೆರಿಕಾದಂತಹ ರಾಷ್ಟ್ರಗಳ ಮಾರುಕಟ್ಟೆ ವಿಸ್ತರಣೆಯಾಗುತ್ತಲೇ ಇರುತ್ತದೆ. ನಮ್ಮ ನೆಲದ ಸಮಸ್ಯೆಗಳು ಬಿಗಡಾಯಿಸುತ್ತಲೇ ಹೋಗುತ್ತವೆ. ಅದಕ್ಕಾಗಿಯೇ ಹೇಳುವದು, ಎಲ್ಲೋ ಚಾಚಿದ ಕೈಗಳು ಇನ್ನೆಲ್ಲೋ ಕಾಣಿಸಿಕೊಳ್ಳುತ್ತವೆ ಎಂದು.

ಮನುಷ್ಯ ಭೂಮಿಯ ಜೊತೆ ಹೊಂದಿರುವ ಸಂಬಂಧಗಳನ್ನು ಇಲ್ಲವಾಗಿಸುವದು ಎಂದರೇನು ? ಅದು ಎಷ್ಟು ಭಯಾನಕ ? ಈ ಕುರಿತು ರಾಜಕೀಯದ ಹೊರತಾಗಿ ನಾವು ಆಲೋಚಿಸಬೇಕು. ವಿಭಿನ್ನ ಚಳುವಳಿಗಳನ್ನು ಈ ನೆಲೆಯಲ್ಲಿಯೇ ಒಟ್ಟುಗೂಡಿಸಬೇಕು. ಒಟ್ಟಾರೆ ಹೇಳುವುದಾದರೆ, ಟೌನ್‌ಶಿಪ್‌ನಲ್ಲಿ ಮುಳುಗಿಹೋದ ನಮ್ಮ ನೂರೆಂಟು ಹಳ್ಳಿಗಳ ರೈತರ ಕೂರಿಗೆಯ ಬೀಜಗಳು ಮತ್ತೆಲ್ಲೋ ಒಂದು ಕಡೆ ಮರುಹುಟ್ಟು ಪಡೆಯಬೇಕು. ಗುಳೆಹೋಗುವ ಹೆಣ್ಣುಮಕ್ಕಳೆಲ್ಲ ''ಯಾರ ಹಂಗೂ ಬ್ಯಾಡ ಯಾರ ಕಾಟವೂ ಬ್ಯಾಡ, ಬೇಲೂರಿನ್ಯಾಗ ಬದನಿ ತೋಟದಾಗ ಎಲ್ಲರ ಹಂಗ ಕಳೆದೇವ'' ಎಂದು ಹಾಡಬೇಕು. ಬೆಂಗಳೂರಿನಲ್ಲಿ ಕೇವಲ ತಿಂಗಳಿಗೆ ಸಾವಿರ ರೂಪಾಯಿಗೆ ದುಡಿಯುವ ಮಕ್ಕಳನ್ನು ಬಿಡಿಸಿ ಮಂಡ್ಯದ ರೈತಾಪಿ ಜನ ಹರಿವ ಕಾಲುವೆಯ ಬದುಕನ್ನು ಅವರ ಮಕ್ಕಳಿಗೆ ತೋರಿಸಬೇಕು. ಕನಿಷ್ಠ ತಲೆತಲಾಂತರದಿಂದ ನಾನು ಸಾಗುವಳಿ ಮಾಡಿದ ಜಮೀನಿನ ದಾಖಲೆಯಲ್ಲಿ ನನ್ನ ಹೆಸರಿರಬೇಕು.

ಮಂಡ್ಯ **ಬಸವರಾಜ ಹೂಗಾರ**

ಬೆಳೆ ಬೆಳೆಯುತ್ತಿರುವ ಜಮೀನನ್ನು ಯಾವುದೇ ಉದ್ದೇಶಕ್ಕಾಗಲೀ ಸರ್ಕಾರವು ಸ್ವಾಧೀನಪಡಿಸಿಕೊಂಡರೆ, ರೈತನ ಆದಾಯದ ಸೆಲೆಯೇ ಬತ್ತಿದಂತಾಗುತ್ತದೆ. ರೈತನ ಜಮೀನನ್ನು ಸ್ವಾಧೀನಪಡಿಸಿಕೊಂಡಾಗ ಅದಕ್ಕೆ ಸರ್ಕಾರವು ಈಗ ನೀಡುತ್ತಿರುವ ಪರಿಹಾರವು ಬಹಳ ಕನಿಷ್ಠ ದರವಾಗಿದ್ದು, ಜಮೀನು ಕಳೆದುಕೊಂಡ ರೈತರು, ನಂತರ ಉದರಂಭರಣಕ್ಕೆ ಏನಾದರೂ ಮಾಡಬೇಕಾದ ಅನಿವಾರ್ಯ ಪರಿಸ್ಥಿತಿಯನ್ನು ಎದುರಿಸಬೇಕಾಗಿರುತ್ತದೆ. ಹಾಗಾಗಿ ರೈತರು ಪರ್ಯಾಯ ಉದ್ಯೋಗ ಮಾಡಲು ಅನುಕೂಲವಾಗುವಷ್ಟು ಪರಿಹಾರವನ್ನು ಜಮೀನು ಸ್ವಾಧೀನಪಡಿಸಿಕೊಳ್ಳುವ ದಿನದಂದೇ ನೀಡುವ ಬಗ್ಗೆ ಸರ್ಕಾರ ಯೋಚಿಸಬೇಕು.

ಮೈಸೂರು **ಕೋ. ಸು. ನರಸಿಂಹಮೂರ್ತಿ**

ಒಂದಾನೊಂದು ಕಾಲದಲ್ಲಿ ರೈತ ದೇಶದ ಬೆನ್ನೆಲುಬು-ಅನ್ನದಾತ ಎಂದೆಲ್ಲಾ ಹೇಳುತ್ತಿದ್ದ ಜನ ಈಗ ಆತನನ್ನೇ ಹೊರೆ, ನಿಷ್ಪ್ರಯೋಜಕ ಎಂದೆಲ್ಲಾ ವರ್ಣಿಸುವುದು ನಿಜಕ್ಕೂ ವಿಪರ್ಯಾಸ. ಕೃಷಿಭೂಮಿಯನ್ನು ಇತರೇ ಕೆಲಸಗಳಿಗೆ ಬಳಸಿಕೊಂಡಾಗ ರೈತನಿಗೆ ಶಾಶ್ವತವಾದ ಪರಿಹಾರ ದೊರಕಬೇಕು. ಕಾರಣ ಅವನ ಜೀವನಕ್ಕೆ ಆಧಾರವಾದ ಭೂಮಿಯಿಂದ ಆತ ವಂಚಿತ. ಇಂದು ಕೊಡುವ ಇಡಿಗಂಟೊಂದು ತಾತ್ಕಾಲಿಕ ಪರಿಹಾರ. ಇದರಿಂದ ಅವನ ಬಾಳಿನುದ್ದಕ್ಕೂ ಜೀವನೋಪಾಯ ದೊರಕಲಾರದು. ಅವನ ಜೀವನ ಸಾಗುವಿಕೆಗೆ ಒಂದು ಉದ್ಯೋಗವನ್ನು ಅಥವಾ ಮಾಸಿಕ ವರಮಾನದ ರೂಪದಲ್ಲಿ ಪರಿಹಾರ ನೀಡುವುದು ಉಚಿತ. ಇದರಿಂದ ಪರಿಹಾರದ ರೂಪದಲ್ಲಿ ಒಟ್ಟಿಗೆ ನೀಡಬೇಕಾದ ಮೊಬಲಗು ಸರಿಯಾಗಿ ಸಾರ್ವಜನಿಕ ಹಿತಾಸಕ್ತಿಯ ಬಳಕೆಯಲ್ಲಿಯೂ ಉಪಯೋಗಿಸಿ ಅದರಿಂದ ದೊರಕುವ ಫಲದ ಕೆಲವು ಅಂಶವನ್ನೂ ರೈತನಿಗೆ ಕೊಟ್ಟರೆ ಇನ್ನೂ ಫಲಕಾರಿಯಾದೀತೇನೋ.

ಬೆಂಗಳೂರು **ನೆ. ಲ. ರಾಮಮೂರ್ತಿ**

**ಬಹುರಾಷ್ಟ್ರೀಯ ಕಂಪನಿಗಳ ಕೃಪೆಗೆ ಕರ್ನಾಟಕದ ಕೃಷಿ**

ಕರ್ನಾಟಕ ಸರ್ಕಾರ ಇತ್ತೀಚೆಗೆ ಬಹು ನಿರೀಕ್ಷಿತ ೧೦೦ ಪುಟಗಳ ಕೃಷಿ ನೀತಿಯನ್ನು ಬಿಡುಗಡೆ ಮಾಡಿದೆ. ಈ ನೀತಿಯ ಜಾರಿಯಿಂದಾಗಿ ಇನ್ನು ಮುಂದೆ ರೈತರ ಆತ್ಮಹತ್ಯೆಗಳಿರುವುದಿಲ್ಲವೆಂಬ ಭರವಸೆಯನ್ನು ಈ ನೀತಿ ನೀಡುತ್ತದೆ.

ಕರ್ನಾಟಕಕ್ಕೆ ಕೃಷಿ ನೀತಿ ಹೊಸದೇನೂ ಅಲ್ಲ. ೧೯೯೫ರಲ್ಲಿ ಕೃಷಿ ನೀತಿಯೊಂದು ಘೋಷಿತವಾಗಿತ್ತು. ಅದರ ಜಾರಿಯ ಮೌಲ್ಯಮಾಪನ ಈ ರೀತಿ ನಿರೂಪಣೆಗೆ ಆಧಾರವಾಗಬೇಕಿತ್ತು. ಆದರೆ ಅದು ಆದಂತೆ ಕಾಣುವುದಿಲ್ಲ. ಸದ್ಯದ ಕೃಷಿ ನೀತಿಯ ಆದ್ಯತೆ ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವುದರ ಕಡೆಗೆ ಕೇಂದ್ರೀಕೃತವಾಗಿದೆ. ಹತ್ತು ವರ್ಷಗಳಲ್ಲಿ ಕೃಷಿ ಉತ್ಪಾದನೆಯನ್ನು ದ್ವಿಗುಣಗೊಳಿಸಿ ವಾರ್ಷಿಕವಾಗಿ ಶೇ. ೪.೫ ಬೆಳವಣಿಗೆ ದರದ ಗುರಿ ಸಾಧನೆ ಮಾಡುವುದಾಗಿ ಹೇಳಿಕೊಳ್ಳಲಾಗಿದೆ. ಅದಕ್ಕಾಗಿ ರಾಷ್ಟ್ರೀಯ ಕೃಷಿ ಆಯೋಗದ ಅಧ್ಯಕ್ಷರಾದ ಎಂ. ಎಸ್. ಸ್ವಾಮಿನಾಥನ್ ಅವರ ಪಂಚಸೂತ್ರಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಮಣ್ಣಿನ ಆರೋಗ್ಯ ರಕ್ಷಣೆ, ನೈಸರ್ಗಿಕ ಸಂಪನ್ಮೂಲಗಳ ರಕ್ಷಣೆ, ಸಕಾಲದಲ್ಲಿ ಕೃಷಿ ಸಾಲ ಒದಗಿಸುವುದು, ಕೊಯ್ಲಿನೋತ್ತರ ಸಮಗ್ರ ನಿರ್ವಹಣೆ ಮತ್ತು ಪ್ರಯೋಗಾಲಯದಿಂದ ರೈತರ ಜಮೀನಿಗೆ ವೇಗದಲ್ಲಿ ತಾಂತ್ರಿಕತೆಯ ವರ್ಗಾವಣೆ ಎಂಬ ಪಂಚಸೂತ್ರಗಳನ್ನಿಟ್ಟುಕೊಂಡು ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವ ಗುರಿಯನ್ನಿರಿಸಿಕೊಳ್ಳಲಾಗಿದೆ. ಕಳೆದ ಒಂದು ದಶಕದಿಂದ ಕೃಷಿ ಕ್ಷೇತ್ರದಲ್ಲಿ ಉತ್ಪಾದಕತೆಯಲ್ಲಿ ಸ್ಥಗಿತತೆ ಹಾಗೂ ಇಳಿಕೆ ಕಂಡುಬಂದಿದೆ. ಹಾಗಾಗಿ ಅದನ್ನು ಹೆಚ್ಚಿಸಲು ಈ ಪಂಚಸೂತ್ರಗಳು ಸಹಕಾರಿಯಾಗಬಲ್ಲವಾದರೂ ಅವುಗಳಿಂದಲೇ ಉತ್ಪಾದನೆಯನ್ನು ದ್ವಿಗುಣಗೊಳಿಸಲು ಸಾಧ್ಯವಾಗುವುದಿಲ್ಲ. ಉತ್ಪಾದಕತೆ ಹೆಚ್ಚಾದರೂ ಅದಕ್ಕೆ ಶ್ರಮಿಸುವ ರೈತರ ಸ್ಥಿತಿಗತಿಯಲ್ಲಿ ಯಾವುದೇ ಹೆಚ್ಚಿನ ಮೂಲಭೂತ ಬದಲಾವಣೆಗಳು ಸಾಧ್ಯವಾಗುವ ಭರವಸೆ ಇಲ್ಲ. ಇಂದಿನ ಕೃಷಿ ಬಿಕ್ಕಟ್ಟು ಕೇವಲ ಆ ವಲಯಕ್ಕೆ ಸೀಮಿತವಾದ ಬಿಕ್ಕಟ್ಟಾಗಿಲ್ಲ. ಅದೊಂದು ಸಂಕೀರ್ಣವಾದ ಬಿಕ್ಕಟ್ಟಾಗಿದೆ. ಕೃಷಿ ಕ್ಷೇತ್ರದ ಸಮಸ್ಯೆಯನ್ನು ಜಾಗತೀಕರಣ, ಉದಾರೀಕರಣದ ಆರ್ಥಿಕ-ಸಾಮಾಜಿಕ-ರಾಜಕೀಯ-ಸಾಂಪ್ರದಾಯಿಕ-ಸಾಂಸ್ಕೃತಿಕ ಇವೇ ಮುಂತಾದ ವಿಭಿನ್ನ ನೆಲೆಗಳಿಂದ ಪರಿಭಾವಿಸಿ, ಪರಿಹರಿಸಬೇಕಾಗುತ್ತದೆ. ಆದರೆ ಕರ್ನಾಟಕದ ಕೃಷಿ ನೀತಿ ಪ್ರಧಾನವಾಗಿ ಅಧಿಕಾರಶಾಹಿ ತಂತ್ರಜ್ಞರು ರೂಪಿಸಿರುವ ಕೃಷಿ ನೀತಿಯಾಗಿದೆ.

ಕೃಷಿ ಉತ್ಪಾದನೆ ಹೆಚ್ಚಾಗಲು ಭೂ ಹಂಚಿಕೆ ರೈತರಲ್ಲಿ ವ್ಯಾಪಕವಾಗಿ ಆಗಿರಬೇಕು. ನಿಜವಾದ ರೈತ, ಕೃಷಿ ಕಾರ್ಮಿಕ, ಗೇಣಿದಾರ ಭೂಮಾಲಿಕನಾಗಬೇಕು. ಸ್ವಾತಂತ್ರ್ಯಾನಂತರ ಜಾರಿಗೆ ಬಂದ ಅರೆಬರೆ ಭೂಸುಧಾರಣಾ ಕಾಯಿದೆಗಳು ಪರಿಣಾಮಕಾರಿಯಾಗಿ ಜಮೀನಿನ ಒಡೆತನವನ್ನು ರೈತರಿಗೆ ದೊರಕಿಸಿಕೊಡುವಲ್ಲಿ ವಿಫಲವಾಗಿವೆ. ಇಂದಿಗೂ ಕೇವಲ ಶೇ. ೨೭ರಷ್ಟು ಜನ ಶೇ. ೬೫ರಷ್ಟು ಕೃಷಿ ಭೂಮಿಯ ಮಾಲೀಕತ್ವವನ್ನು ಹೊಂದಿದ್ದಾರೆ, ಅಷ್ಟೆ. ಉಳಿದ ಶೇ. ೭೩ರಷ್ಟು ಜನ ಕೇವಲ ಶೇ. ೩೫ರಷ್ಟು ಭೂ ಒಡೆತನವನ್ನು ಹೊಂದಿದ್ದಾರೆ. ಈ ಭೂ ಒಡೆತನದ ಅಸಮಾನತೆಯನ್ನು, ಅನ್ಯಾಯಗಳನ್ನು ಹೋಗಲಾಡಿಸಲು ಯಾವ ಕಾರ್ಯಕ್ರಮಗಳೂ ಈ ನೀತಿಯಲ್ಲಿ ಪ್ರಸ್ತಾಪವಾಗಿಲ್ಲ. ಇದಲ್ಲದೆ ಭೂಸುಧಾರಣಾ ಕಾಯಿದೆಗಳಿಗೆ ತಿದ್ದುಪಡಿಗಳನ್ನು ತಂದು ಇಂದು ಭೂ ಒಡೆತನ ಕೇಂದ್ರೀಕರಣಗೊಳ್ಳುವ ಬೆಳವಣಿಗೆಗಳಿಗೆ ಮುಕ್ತ ಅವಕಾಶ ಕಲ್ಪಿಸಲಾಗಿದೆ. ಹಾಗಾಗಿ ಇಂದು 'ವಿಶೇಷ ಆರ್ಥಿಕ ವಲಯ'ಗಳ ಹೆಸರಿನಲ್ಲಿ, 'ಗುತ್ತಿಗೆ ಕೃಷಿ'ಯ ಹೆಸರಿನಲ್ಲಿ 'ಕಾರ್ಪೊರೇಟ್ ಕೃಷಿ ವ್ಯವಸ್ಥೆ'ಗಳ ಹೆಸರಿನಲ್ಲಿ ದೇಶೀಯ ಬೃಹತ್ ಕಂಪನಿಗಳು ಹಾಗೂ ಬಹುರಾಷ್ಟ್ರೀಯ ಕಂಪನಿಗಳು ದೊಡ್ಡ ಪ್ರಮಾಣದಲ್ಲಿ ಕೃಷಿಕ್ಷೇತ್ರವನ್ನು ಆಕ್ರಮಿಸಿಕೊಂಡು ರೈತರನ್ನೇ ಕೃಷಿಭೂಮಿಯಿಂದ, ಗ್ರಾಮೀಣ ಪ್ರದೇಶಗಳಿಂದ ಸ್ಥಳಾಂತರಗೊಳಿಸಿ ನಿರ್ಗತಿಕ ವಲಸೆಗಾರರನ್ನಾಗಿಸಿ ನಗರ ಪ್ರದೇಶದ ಕೊಳಗೇರಿಗಳಿಗೆ ತುಂಬಿಸಲಾಗುತ್ತಿದೆ. ಭಾರತದಂತಹ ದೇಶದಲ್ಲಿ ಕೃಷಿ ಪ್ರಧಾನವಾಗಿ ಶೇ. ೬೦ಕ್ಕೂ ಹೆಚ್ಚು ಜನರಿಗೆ ಜೀವನೋಪಾಯದ ದಾರಿ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೃಷಿ ಕೈಗಾರಿಕೀಕರಣಗೊಂಡಿದೆ. ಭಾರತದಲ್ಲಿ ಹಸಿರುಕ್ರಾಂತಿಯಿಂದ ಆರಂಭವಾದ ಕೃಷಿ ಕ್ಷೇತ್ರದ ಕೈಗಾರಿಕೀಕರಣ ಇಂದು ದಾಪುಗಾಲನ್ನಿಡುತ್ತಾ ಮುಂದುವರಿಯುತ್ತಿದೆ. ಅದು ಇಂದು ಮಧ್ಯಮ, ಸಣ್ಣ ಮತ್ತು ಅಂಚಿನ ರೈತರನ್ನು ಅಭಿವೃದ್ಧಿ ಪಥದ ಅಂಚಿಗೆ ಸರಿಸಿ ಮುನ್ನುಗ್ಗುತ್ತಿದೆ. ನಮ್ಮ ದೇಶದ ಕೃಷಿ ಪಂಡಿತರು, ತಂತ್ರಜ್ಞರು ಭೂಸುಧಾರಣೆಗಳನ್ನು ಸಂಪೂರ್ಣವಾಗಿ ಕಡೆಗಣಿಸಿ ಕೃಷಿ ಬಿಕ್ಕಟ್ಟಿಗೆ ಕೇವಲ ತಾಂತ್ರಿಕ ಪರಿಹಾರಗಳನ್ನು ಮಾತ್ರ ರೂಪಿಸುತ್ತಿದ್ದಾರೆ. ಹಾಗಾಗಿ ಅವು ವಿಫಲಗೊಂಡು ಪರಿಸ್ಥಿತಿ ಮತ್ತಷ್ಟು ಬಿಗಡಾಯಿಸಿದೆ. ತಾಂತ್ರಿಕ ಪರಿಹಾರಗಳು

**ವಿಜ್ಞಾನೇಶ್ವರ**

ಜನವರಿ ಸಂಚಿಕೆಯಲ್ಲಿ ಪ್ರಕಟವಾದ ನನ್ನ ಲೇಖನದ ಕೊನೆಯ ಪ್ಯಾರಾದ ಮೊದಲ ವಾಕ್ಯದಲ್ಲಿ ಕೈತಪ್ಪಿಸಿದ ಒಂದು ದೋಷ ಘಟಿಸಿದೆ. ಅದು ''ಈ ಎಲ್ಲ ಅಂಶಗಳ ಆಧಾರದಿಂದ 'ಮಿತಾಕ್ಷರ'ದ ವಿಜ್ಞಾನೇಶ್ವರನು ಆಗಮಿಕ ಶೈವ ಬ್ರಾಹ್ಮಣನೇ ಹೊರತು ವೈದಿಕ ಶೈವ ಬ್ರಾಹ್ಮಣನಲ್ಲ.'' ಇದನ್ನು ''ಈ ಎಲ್ಲ ಅಂಶಗಳ ಆಧಾರದಿಂದ ಶಾಸ್ತ್ರೋಕ್ತ ವಿಜ್ಞಾನೇಶ್ವರನು ವೈದಿಕ ಶೈವ ಬ್ರಾಹ್ಮಣನಲ್ಲ, ಆಗಮಿಕ ಶೈವ ಬ್ರಾಹ್ಮಣ'' ಎಂದು ಓದಿಕೊಳ್ಳಬೇಕು.

ಧಾರವಾಡ **ಎಂ. ಎಂ. ಕಲಬುರ್ಗಿ**

ಒಂದು ವಿಶಿಷ್ಟ ಆರ್ಥಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಯಲ್ಲಿ ಕ್ಷೇತ್ರದಲ್ಲಿ ಜಾರಿಗೆ ಬರುವುದರಿಂದ ಅವುಗಳನ್ನು ಕೇವಲ ಉತ್ಪಾದನೆಯ ತಾಂತ್ರಿಕ ಸಮಸ್ಯೆಗಳಾಗಿ ನೋಡಬಾರದು. ಕೃಷಿಕ್ಷೇತ್ರದ 'ಹಸಿರು ಕ್ರಾಂತಿ' ಹೈನುಗಾರಿಕೆ ಕ್ಷೇತ್ರದ 'ಶ್ವೇತಕ್ರಾಂತಿ', ಮತ್ಸ್ಯೋದ್ಯಮದ 'ನೀಲಿಕ್ರಾಂತಿ', ಎಲ್ಲವೂ ಒಂದು ಅಂಶವನ್ನು ಅತ್ಯಂತ ಸ್ಪಷ್ಟವಾಗಿ ಸಾಬೀತುಪಡಿಸಿವೆ. ಈ ಎಲ್ಲಾ ಸಂದರ್ಭಗಳಲ್ಲಿ ಉತ್ಪಾದನೆ ಹಲವಾರು ಪಟ್ಟು ಅಧಿಕಗೊಂಡರೂ ಆ ಉತ್ಪಾದನೆಯನ್ನೊದಗಿಸಿದ ಕೃಷಿಕರ ಸ್ಥಿತಿಗತಿಯಲ್ಲಿ ಯಾವುದೇ ಪ್ರಗತಿಯಾಗಲಿಲ್ಲ. ಅವರು ತಾವು ಹೆಚ್ಚಿಸಿದ ಉತ್ಪಾದನೆಯ ಮಹಾಪೂರದ ನಡುವೆಯೂ ನಿರ್ಗತಿಕರಾಗೇ ಉಳಿಯಬೇಕಾಗಿಬಂದದ್ದು ಐತಿಹಾಸಿಕ ಕಟುವಾಸ್ತವ. ಉತ್ಪಾದನೆಯ ಹೆಚ್ಚಳಕ್ಕೆ ಅಪಾರವಾದ ಕೊಡುಗೆಗಳನ್ನಿತ್ತ 'ಜೈ ಕಿಸಾನರು' ಜೀವಂತ ಶವಗಳಾಗುತ್ತ ಆತ್ಮಹತ್ಯೆ ಹಾದಿ ಹಿಡಿದಿದ್ದಾರೆ. ರಾಸಾಯನಿಕ ಗೊಬ್ಬರ ಕಾರ್ಖಾನೆಯ ಮಾಲೀಕರು, ಕೀಟನಾಶಕ - ಕಳೆನಾಶಕಗಳ ಉತ್ಪಾದಕರು, ಬೀಜ ಕಂಪನಿಗಳು, ಕೃಷಿ ಯಂತ್ರೋಪಕರಣಗಳ ಮಾಲೀಕರು, ಮಂಡಿವರ್ತಕರು, ದಲ್ಲಾಳಿಗಳು, ಕೃಷಿ ಉತ್ಪಾದನೆಯ ಹೆಚ್ಚಳದ ಲಾಭಗಳನ್ನು ಕಬಳಿಸಿ ಕೊಬ್ಬಿ ಕುಳಿತಿದ್ದಾರೆ. ಆದ್ದರಿಂದ ಕರ್ನಾಟಕದ ಕೃಷಿ ನೀತಿ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಯಶಸ್ವಿಯಾದರೂ ರೈತರ ಆತ್ಮಹತ್ಯೆಯನ್ನು ತಡೆಯಲು ವಿಫಲವಾಗುವುದರಲ್ಲಿ ಯಾವುದೇ ಸಂಶಯವಿಲ್ಲ. ಆಯವ್ಯಯದ ಶೇ. ೧೦ರಷ್ಟನ್ನು ಕೃಷಿ ಕ್ಷೇತ್ರಕ್ಕೆ ತೆಗೆದಿರಿಸುವುದು ಅರಕಾಸುರನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ ಮಾತ್ರವಾಗಿ ಇಂದಿನ ಭೀಕರ ಬಿಕ್ಕಟ್ಟಿಗೆ ಪರಿಹಾರವನ್ನೇನೂ ಒದಗಿಸುವುದಿಲ್ಲ.

'ಭೂಮಿ ತಾಯಿಯ ಆರೋಗ್ಯ' ಕಾರ್ಯಕ್ರಮದ ಮೂಲಕ ಪ್ರತಿವರ್ಷ ೩೫೦೦೦ ಹೆಕ್ಟೇರ್ ಪ್ರದೇಶದ ಮಣ್ಣಿನ ಆರೋಗ್ಯವನ್ನು ಉತ್ತಮಪಡಿಸುವ ಗುರಿಯನ್ನು ನೀತಿಯಲ್ಲಿ ಪ್ರಸ್ತಾಪಿಸಲಾಗಿದೆ. ವಿವಿಧ ಜಲಾನಯನ ಅಭಿವೃದ್ಧಿ ಯೋಜನೆಗೊಳಪಡಿಸಿರುವ ೨೯.೧೦ ಲಕ್ಷ ಹೆಕ್ಟೇರ್ ಭೂಮಿಯನ್ನು ಹೊರತುಪಡಿಸಿದರೂ ಇನ್ನುಳಿದ ೧೨.೫ ಲಕ್ಷ ಹೆಕ್ಟೇರ್ ಭೂಮಿಯನ್ನು ಈ ವೇಗದಲ್ಲಿ ಅಭಿವೃದ್ಧಿಪಡಿಸಲು ೩೭ಕ್ಕೂ ಹೆಚ್ಚು ವರ್ಷಗಳು ಬೇಕಾಗುತ್ತದೆ. ರಾಷ್ಟ್ರೀಯ ನೀರಾವರಿ ಆಯೋಗ ರಾಜ್ಯದ ೧೨ ಜಿಲ್ಲೆಗಳ ೮೮ ತಾಲ್ಲೂಕುಗಳನ್ನು ತೀವ್ರ ಬರಗಾಲದ ಪೀಡಿತ ಪ್ರದೇಶವೆಂದು ಗುರುತಿಸಿದೆ. ಕರ್ನಾಟಕವು ಒಟ್ಟು ಬೆಳೆ ಬೆಳೆಯುತ್ತಿರುವ ೧೦.೮ ಮಿಲಿಯನ್ ಹೆಕ್ಟೇರ್‌ನಲ್ಲಿ ಶೇ. ೭೮.೫ರಷ್ಟು ಭೂ ಪ್ರದೇಶ ಮಳೆಯಾಧಾರಿತ ಕೃಷಿ ಪ್ರದೇಶವಾಗಿದೆ. ಹಾಗಾಗಿ ಈ ಪ್ರದೇಶದ ಕೃಷಿ, ಉತ್ಪಾದನೆ ಮಳೆ ಚೆನ್ನಾಗಿ ಆದಾಗ ಮಾತ್ರ ಈಗ ರೂಪಿಸಿರುವ ಉತ್ಪಾದನಾ ಗುರಿಯನ್ನು ತಲುಪಬಲ್ಲದು. ಅಂತರ್ಜಲದ ಬಳಕೆ ಕೋಲಾರ, ತುಮಕೂರು, ಬೆಂಗಳೂರು ಮುಂತಾದ ಜಿಲ್ಲೆಗಳ ಸುಮಾರು ೭೨ ತಾಲ್ಲೂಕುಗಳಲ್ಲಿ ಅತ್ಯಂತ ಅಪಾಯಕಾರಿ ಹಂತ ತಲುಪಿದೆಯೆಂದು ತೀರ್ಮಾನಿಸಿ ಸರ್ಕಾರವೇ ಅವುಗಳನ್ನು ಕಪ್ಪು ಮತ್ತು ಕಂದು ಪ್ರದೇಶವೆಂದು ತೀರ್ಮಾನಿಸಿದೆ. ಈ ತಾಲ್ಲೂಕುಗಳಲ್ಲಿ ಸುಮಾರು ೭.೫ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿ ಸೌಲಭ್ಯ ಒದಗಿಸುತ್ತಿದ್ದ ೪ ಲಕ್ಷ ಕೊಳವೆ ಬಾವಿಗಳ ಪೈಕಿ ೩ ಲಕ್ಷ ಕೊಳವೆ ಬಾವಿಗಳು ಒಣಗಿನಿಂತಿವೆ. ರಾಜ್ಯದ ಬಹುಪಾಲು ಪ್ರದೇಶಗಳಲ್ಲಿ ಅಂತರ್ಜಲದ ಮಟ್ಟದ ತೀವ್ರ ಕುಸಿತದಿಂದಾಗಿ ಕೃಷಿಗೇ ಅಲ್ಲದೆ ಕುಡಿಯುವ ನೀರಿಗೂ ಹಾಹಾಕಾರ ಉಂಟಾಗಿದೆ. ನಮ್ಮಲ್ಲಿ ಕೃಷಿ ನೀರಿನ ಬಳಕೆ ಸಾಮರ್ಥ್ಯ ಕೇವಲ ಶೇ. ೪೦ರಷ್ಟಿದೆ. ನೀರಾವರಿ ಕಾಲುವೆಗಳಲ್ಲಿ ಸೋರುವಿಕೆ, ಜಿನುಗುವಿಕೆ, ಆವಿಯಾಗುವಿಕೆಯಿಂದ ಅಣೆಕಟ್ಟುಗಳ ನೀರಾವರಿ ಪ್ರದೇಶದಲ್ಲಿ ಅಪಾರ ಪ್ರಮಾಣದಲ್ಲಿ ನೀರು ಪೋಲಾಗುತ್ತಿದೆ. ಮಾರುಕಟ್ಟೆ ಪ್ರೇರಿತ ಬೆಳೆ ಮಾದರಿ ವಿಕೃತಿಗಳಿಂದ ನೀರಾವರಿ ಪ್ರದೇಶದಲ್ಲಿ ಅತಿಯಾಗಿ ನೀರು ಬೇಡುವ ಬೆಳೆಗಳಾದ ಬತ್ತ, ಕಬ್ಬು, ಬಾಳೆ, ಅಡಿಕೆ ಮುಂತಾದ ಬೆಳೆಗಳು ಅಪಾರ ಪ್ರಮಾಣದ ನೀರನ್ನು ಸೀಮಿತವಾದ ನೀರಾವರಿಯಲ್ಲೇ ಕಬಳಿಸಿ ಕುಳಿತುಬಿಟ್ಟಿವೆ. ತೀವ್ರ ನೀರಾವರಿ ಕೃಷಿ, ಅತಿಯಾಗಿ ಮೇಯಿಸುವುದು, ಅರಣ್ಯ ವಿನಾಶ ಮುಂತಾದ ಕಾರಣಗಳಿಂದ ಒಂದು ಅಂದಾಜಿನಂತೆ ಸುಮಾರು ೭.೭ ಮಿಲಿಯನ್ ಹೆಕ್ಟೇರ್‌ನಷ್ಟು ಭೂಮಿ ಸೌಳು ಹಿಡಿದು ತೀವ್ರವಾಗಿ ಹಾಳಾಗಿದೆ. ಕೃಷಿ ಉತ್ಪಾದನೆ ಆಯೋಜಿತ ಕೃತಕ ಗೊಬ್ಬರದ ಬಳಕೆ ಮತ್ತು ಸೂಕ್ತ ಬಸಿಯುವ ಕಾಲುವೆಗಳಿಲ್ಲದ್ದರಿಂದ ಸಾವಿರಾರು ಎಕರೆ ಪ್ರದೇಶ ಕೃಷಿಭೂಮಿ ಕ್ಷಾರ ಮತ್ತು ಲವಣಯುಕ್ತವಾಗಿ ಬರಡು ಭೂಮಿಯಾಗಿ ಪರಿವರ್ತಿತವಾಗುತ್ತಿದೆ. ಅಣೆಕಟ್ಟುಗಳಲ್ಲಿ ಕೆರೆಗಳಲ್ಲಿ ಹೂಳು ತುಂಬಿ ಅಪಾರ ಪ್ರಮಾಣ ನೀರು ಹಿಡಿದಿಡುವ ಸಾಮರ್ಥ್ಯ ನಷ್ಟವಾಗುತ್ತಿದೆ. ರೈತ ಕಾಯಕ ಕೆರೆ, ಜಲಸಂವರ್ಧನಾ ಯೋಜನೆಯಂತಹ ಯೋಜನೆಗಳ ಜಾರಿಯಿಂದಲೂ ನಿರೀಕ್ಷಿತ ಯಶಸ್ಸು ಕಾಣುತ್ತಿಲ್ಲ. ರಾಜ್ಯದಲ್ಲಿ ಗರಿಷ್ಠ ನೀರಾವರಿ ಸಾಮರ್ಥ್ಯದ ಗುರಿಯಾದ ೧೦೩೫.೭೬ ಟಿ.ಎಂ.ಸಿ.ಯಲ್ಲಿ ೨೦೦೩ ಏಪ್ರಿಲ್‌ವರೆಗೆ ನಾವು ೭೧೬.೨೯ ಟಿ.ಎಂ.ಸಿ.ಯಷ್ಟನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗಿದೆ. ಉಳಿದ ೩೧೯.೪೭ ಟಿ.ಎಂ.ಸಿ. ಸಾಮರ್ಥ್ಯವನ್ನು ದೊಡ್ಡ ಮತ್ತು ಮಧ್ಯಮ ನೀರಾವರಿ ಯೋಜನೆಗಳ ಮೂಲಕ ಅಭಿವೃದ್ಧಿಪಡಿಸಿ ಉಳಿದ ೧೦.೨೬ ಲಕ್ಷ ಹೆಕ್ಟೇರ್ ಭೂಮಿಗೆ ನೀರಾವರಿ ಒದಗಿಸಲು ೨೦೦೩ರ ದರದಲ್ಲಿ ಸುಮಾರು ೭೩೭೨ ಕೋಟಿ ರೂ.ಗಳ ಬಂಡವಾಳದ ಅಗತ್ಯವಿದೆ. ಈ ಮೇಲಿನ ಎಲ್ಲಾ ಕಾರ್ಯಯೋಜನೆಗಳನ್ನು ಯಶಸ್ವಿಯಾಗಿ ಕಾಲಬದ್ಧವಾಗಿ ಪೂರ್ಣಗೊಳಿಸಲು ಸರ್ಕಾರ ಅಪಾರ ಹಣವನ್ನು ಜಲಸಂಪನ್ಮೂಲಗಳ ಅಭಿವೃದ್ಧಿಗೆ ಮೀಸಲಿರಿಸಿ ತನ್ನ ರಾಜಕೀಯ ಬದ್ಧತೆಯನ್ನು ಮೆರೆಯಬೇಕಾಗಿದೆ. ಆದರೆ ಕೃಷಿ ನೀತಿಯಲ್ಲಿ ಅಂತಹ ಯಾವುದೇ ಸ್ಪಷ್ಟವಾದ ನಿರ್ದಿಷ್ಟವಾದ ಆರ್ಥಿಕ ಬದ್ಧತೆಯ ಗುರಿಗಳನ್ನು ನಿಗದಿಪಡಿಸಲಾಗಿಲ್ಲ.

ಎಲ್ಲಾ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ನಿಗದಿಪಡಿಸುವುದಾಗಿ ಹೇಳಿಕೊಂಡಿದ್ದರೂ ಅವುಗಳನ್ನು ಮಾರುಕಟ್ಟೆಯಲ್ಲಿ ರೈತರಿಂದ ಕೊಳ್ಳುವ ಸಂಗ್ರಹಣಾ ನೀತಿ ಮತ್ತು ಮಾರುಕಟ್ಟೆಯ ನೀತಿಯ ಬಗ್ಗೆ ಸರ್ಕಾರ ಮೌನತಾಳಿದೆ. ಆದ್ದರಿಂದ ಈ ಬೆಂಬಲ ಬೆಲೆ ನಿಗದಿಯಿಂದ ರೈತರಿಗೆ ಯಾವುದೇ ಲಾಭವಿಲ್ಲ. ಎ.ಪಿ.ಎಂ.ಸಿ. ಕಾಯ್ದೆಗೆ ತಿದ್ದುಪಡಿ ತರುವ ಮೂಲಕ, ಚಿಲ್ಲರೆ ವ್ಯಾಪಾರ ಕ್ಷೇತ್ರದಲ್ಲಿ ಬಹುರಾಷ್ಟ್ರೀಯ ಕಂಪನಿಗಳಿಗೆ ಹಿಂಬಾಗಿಲ ಪ್ರವೇಶ ನೀಡುವ ಮೂಲಕ ಕೃಷಿ ಉತ್ಪನ್ನಗಳನ್ನು ಬೃಹತ್ ವ್ಯಾಪಾರಿಗಳು ಕೊಳ್ಳಲು ಅವಕಾಶ ಈಗಾಗಲೇ ಕಲ್ಪಿಸಿರುವುದರಿಂದ ನಾವು ಈಗ ಕಾಣುತ್ತಿರುವ ಬೆಲೆ ಏರಿಕೆ ಮತ್ತು ಕುಸಿತಗಳಿಗಿಂತಲೂ ದೊಡ್ಡ ಪ್ರಮಾಣದ ಬೆಲೆ ಏರುಪೇರುಗಳ ಮೂಲಕ ರೈತರನ್ನು ಮತ್ತು ಗ್ರಾಹಕರನ್ನು ಮುಕ್ತ ಮಾರುಕಟ್ಟೆಯ ಹೆಸರಿನಲ್ಲಿ ಕೊಳ್ಳೆಹೊಡೆಯಲು ಅಪಾರ ಅವಕಾಶ ಕಲ್ಪಿಸಲಾಗಿದೆ. ರೈತರನ್ನು ಸಂಕಷ್ಟ ಮಾರಾಟ ಹಾಗೂ ಬೆಲೆ ಕುಸಿತದಿಂದ ರಕ್ಷಿಸುವ ಸರ್ಕಾರದ ಮಧ್ಯ ಪ್ರವೇಶವನ್ನು ಈ ನೀತಿ ಎಲ್ಲಿಯೂ ಪ್ರಸ್ತಾಪಿಸುವುದಿಲ್ಲ. ಕೃಷಿ ಕ್ಷೇತ್ರದಲ್ಲಿ ಬಂಡವಾಳಗಾರರು ದೊಡ್ಡ ಪ್ರಮಾಣದಲ್ಲಿ ಪ್ರವೇಶಿಸಲು ಅವಕಾಶ ಮಾಡಿಕೊಟ್ಟು ಅತಿ ಸಣ್ಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ರೈತರಿಗೆ ತಮ್ಮ ಉತ್ಪನ್ನಗಳನ್ನು ಮಾರುವ ಹಂತದಲ್ಲಾಗಲಿ ಅಥವಾ ಕೃಷಿ ಒಳಸುರಿಗಳಾದ ಬಿತ್ತನೆ ಬೀಜ, ಗೊಬ್ಬರ, ಕೀಟ ಮತ್ತು ಕಳೆನಾಶಕಗಳು, ಕೃಷಿ ಯಂತ್ರೋಪಕರಣಗಳು ಮುಂತಾದವುಗಳ ಖರೀದಿಯಲ್ಲಿ ರೈತರ ಪರವಾಗಿ ಸರ್ಕಾರದ ಮಧ್ಯಪ್ರವೇಶದ ಯಾವ ಭರವಸೆಯೂ ಈ ನೀತಿಯಲ್ಲಿ ಕಂಡುಬರುವುದಿಲ್ಲ. ಹಾಗಾಗಿ ಕೃಷಿಕ್ಷೇತ್ರದಲ್ಲಿ ಬಂಡವಾಳಗಾರರು ರೈತರ ಕೈ ತಿರುಚಿ ಕಳಪೆ ಒಳಸುರಿಗಳನ್ನು ಮಾರಿ ಮಾರುಕಟ್ಟೆಯಲ್ಲಿ ಕೃಷಿ ಉತ್ಪನ್ನಗಳ ಬೆಲೆಯನ್ನು ತಮ್ಮ ಮನಸ್ಸಿಗೆ ಬಂದಂತೆ ಏರುಪೇರು ಮಾಡಿ ಅಪಾರ ಲಾಭ ಮಾಡಿಕೊಳ್ಳಲು ಮುಕ್ತ ಅವಕಾಶ ಕಲ್ಪಿಸಿದೆ.

ಸರ್ಕಾರ ಕೃಷಿ ಇಲಾಖೆಯ, ಕೃಷಿ ವಿಶ್ವವಿದ್ಯಾನಿಲಯಗಳ ಮೂಲಕ ನಡೆಸುತ್ತಿದ್ದ ವಿಸ್ತರಣಾ ಕಾರ್ಯಕ್ರಮಗಳನ್ನು ಕೈಬಿಟ್ಟು ಆಧುನಿಕ ಕೃಷಿಯನ್ನು ಹಾಳುಗೆಡವಿದೆ. ಇಲ್ಲಿರುವ ಬೇಡಿಕೆಯನ್ನು ಪೂರೈಸಲು ಪ್ರತಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಸಾರ್ವಜನಿಕ ಹಾಗೂ ಖಾಸಗಿ ಪಾಲುದಾರಿಕೆಯ ಆಧಾರದಲ್ಲಿ 'ಕೃಷಿ ತಾಂತ್ರಿಕ ಮಾಹಿತಿ ಕೇಂದ್ರ'ಗಳನ್ನು ಸ್ಥಾಪಿಸುವುದಾಗಿ ಈ ನೀತಿಯಲ್ಲಿ ಪ್ರಸ್ತಾಪಿಸಿದೆ. ಇವುಗಳ ಮೂಲಕ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಆರ್ಥಿಕ ಜಾಲಗಳನ್ನು ಗ್ರಾಮೀಣ ಪ್ರದೇಶಗಳಿಗೆ ಹಬ್ಬಿಸಿಕೊಳ್ಳಲು, ತನ್ಮೂಲಕ ತನಗೆ ಬೇಕೆನಿಸಿದ ಕೃಷಿ ಬೆಳೆಗಳು, ಬೀಜಗಳು, ಗೊಬ್ಬರಗಳು, ಕೀಟ ಮತ್ತು ಕಳೆನಾಶಕಗಳು ಹಾಗೂ ತಂತ್ರಜ್ಞಾನಗಳಿಗೆ ಮಾರುಕಟ್ಟೆ ಮಾಡಿಕೊಳ್ಳಲು ಮುಕ್ತ ಅವಕಾಶ ಕಲ್ಪಿಸಿದೆ. ಈ ಎಲ್ಲಾ ಚಟುವಟಿಕೆಗಳ ಮೂಲಕ ರಾಜ್ಯದ ಗ್ರಾಮೀಣ ಭಾಗದಲ್ಲಿ ವಿದೇಶೀ ನೇರ ಬಂಡವಾಳ ಹೂಡಿಕೆಗೆ ಪ್ರೋತ್ಸಾಹ ನೀಡಿದೆ. ಪ್ರಗತಿಪರ ರೈತ ಒಕ್ಕೂಟಗಳ ಸ್ಥಾಪನೆಯ ಹೆಸರಿನಲ್ಲಿ, ಜಂಟಿ ಕೃಷಿ ಚಟುವಟಿಕೆಗಳ ಹೆಸರಿನಲ್ಲಿ, ಗುತ್ತಿಗೆ ಕೃಷಿ ಪದ್ಧತಿಗೆ ಬೃಹತ್ ಚಾಲನೆ ನೀಡುವ ಹುನ್ನಾರವಿದೆ. ರಫ್ತು ಆಧಾರಿತ ಕೃಷಿಗೆ ಆದ್ಯತೆ ದೊರೆತು ಹೂವು, ಹಣ್ಣು, ತರಕಾರಿ, ಎಣ್ಣೆಕಾಳುಗಳು ಮುಂತಾದವುಗಳಿಗೆ ಪ್ರಾಮುಖ್ಯತೆ ಪ್ರಾಪ್ತವಾಗಿ ಆಹಾರದ ಬೆಳೆಗಳ ಪ್ರಮಾಣ ಕಡಿಮೆಯಾಗಿ ಆಹಾರ ಸುರಕ್ಷತೆ ಅಪಾಯಕ್ಕೀಡಾಗುವ ಸಂಭವವಿದೆ. ರೈತರನ್ನು ಸಾಲದ ಬಾಧೆಯಿಂದ ಪಾರುಮಾಡುವ, ಸಾಂಸ್ಥಿಕ ಮೂಲ ಸೌಕರ್ಯಗಳನ್ನು ಸರಿಪಡಿಸುವ, ಬಲಪಡಿಸುವ, ಯಾವುದೇ ಬದ್ಧತೆ ಈ ನೀತಿಯಲ್ಲಿ ಕಂಡುಬರುವುದಿಲ್ಲ. ಇಲಾಖೆಯ ಹೆಸರನ್ನು ಕೃಷಿ ಮತ್ತು ರೈತ ಕ್ಷೇಮಾಭಿವೃದ್ಧಿ ಇಲಾಖೆ ಎಂದು ಬದಲಾಯಿಸಿದ ಮಾತ್ರಕ್ಕೆ ರೈತರ ಕಲ್ಯಾಣವನ್ನುಂಟು ಮಾಡಲಾಗುವುದಿಲ್ಲ. ಒಂದು ಅಧ್ಯಯನದ ಅಧಿಕೃತ ವರದಿಯಂತೆ ಶೇ. ೪೦ರಷ್ಟು ಕೃಷಿಕರು ಪರ್ಯಾಯ ಅವಕಾಶಗಳು ದೊರೆತರೆ ಕೃಷಿಯನ್ನು ಕೈಬಿಡುವ ಇಚ್ಛೆಯನ್ನು ವ್ಯಕ್ತಪಡಿಸಿರುವ ಆಘಾತಕಾರಿ ಅಂಶ ಬೆಳಕಿಗೆ ಬಂದಿದೆ. ಇಂತಹ ಸಂದರ್ಭದಲ್ಲಿ ಕೃಷಿಯನ್ನು ರೈತರಿಗೆ ಲಾಭದಾಯಕ ವೃತ್ತಿಯನ್ನಾಗಿಸಲು ಸರ್ಕಾರ ತನ್ನ ಅಪಾರ ಹಣ ಹೂಡಿಕೆಯ ಮೂಲಕ ಕೃಷಿ ಮಾರುಕಟ್ಟೆಯಲ್ಲಿ ರೈತರ ಹಿತಾಸಕ್ತಿಯನ್ನು ಕಾಪಾಡಲು ಮಧ್ಯಪ್ರವೇಶಿಸದೆ ಹೋದರೆ ಕೃಷಿ ಕ್ಷೇತ್ರ ದಿವಾಳಿಯ ಅಂಚನ್ನು ತಲುಪುವುದರಲ್ಲಿ ಯಾವುದೇ ಸಂಶಯವಿಲ್ಲ.

ತುಮಕೂರು — ಸಿ. ಯತಿರಾಜು

೫ನೇ ಪುಟದಿಂದ (ಸಂಪಾದಕೀಯ)

ಕಾಪಾಡುವುದಿಲ್ಲ. ನ್ಯಾಯಮಂಡಲಿಯ ತ್ರಿಮೂರ್ತಿಗಳಿಗಿಂತಲೂ ಹೆಚ್ಚು ಪ್ರಜ್ಞಾವಂತರಾದ ಕರ್ನಾಟಕ-ತಮಿಳುನಾಡುಗಳ ರೈತರು ಹಾಗೂ ಅವರೊಡನಿರುವ ಪರಿಣತರು ದಿಟ್ಟತನದ ನಿಲುವನ್ನು ತಾಳಿ ಪರಸ್ಪರ ಹೊಂದಾಣಿಕೆಗಳಿಂದ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕು, ಅನುಸರಿಸಿ ಬಾಳುವುದನ್ನು ಇತರರಿಗೆ ಮಾದರಿಯನ್ನಾಗಿಸಬೇಕು. ಇದಕ್ಕೆ ಇಂಬು ನೀಡದ ಸರ್ಕಾರಗಳು ಹಾಗೂ ಆಡಳಿತದಲ್ಲಿರುವ ರಾಜಕೀಯ ಪಕ್ಷಗಳು ದೇಶಕ್ಕೆ ಹೊರೆ. ರೈತ ಸಮುದಾಯವು ಆ ಹೊರೆಯನ್ನು ಗುಣಾತ್ಮಕವಾಗಿ ಬದಲಾಯಿಸುತ್ತಾರೆಂಬ ನಿರೀಕ್ಷೆ ಹುಸಿಯಾಗದಿರಲಿ.

## ಸ್ವರ್ಗಮುಖಿಗಳ ವ್ಯವಹಾರ ಚಾತುರ್ಯ

ಅಲಹಾಬಾದಿನಲ್ಲಿಲ್ಲದ ತ್ರಿವೇಣಿ ಸಂಗಮದಲ್ಲಿ ಮಹಾಕುಂಭವೋ ಅರ್ಧ ಕುಂಭವೋ ನಡೆದರೆ ಕರ್ನಾಟಕದ ತಿರುಮಕೂಡಲು ನರಸೀಪುರ ಹಿಂದುಳಿಯುವುದು ಶಕ್ಯವೇ ? ಸರಿ, ಇಲ್ಲೂ ಒಂದು ಕುಂಭ, ಒಂದು ಕ್ಷೋಭಾಯಾತ್ರೆ, ಜನಸಂದಣಿ, ಯಾತ್ರಿಗಳ ಅಥವಾ ಭಕ್ತರ ಕೃತಕ ಭಾವೋತ್ಕರ್ಷ, ಎಲ್ಲಾ ಪ್ರದರ್ಶಿಸಲ್ಪಡುತ್ತವೆ. ಒಟ್ಟಿನಲ್ಲಿ ನೀರನ್ನು ಕಲುಷಿತ ಗೊಳಿಸಿ ನದಿಯೊಳಕ್ಕೆ ಅಸಹ್ಯವಾದ ಪದಾರ್ಥಗಳನ್ನು ತುಂಬುವುದು ಅನಿವಾರ್ಯವಾಗಿ ನಡೆಯುತ್ತದೆ. ಅಲಹಾಬಾದಿನಲ್ಲಿ ಒಂದು ಕೋಟಿ ಜನ ಸೇರಿದ್ದರೆಂಬ ಶುದ್ಧಸುಳ್ಳನ್ನು ಮಾಧ್ಯಮಗಳು ಪ್ರಚಾರ ಮಾಡಿದರೆ, ತಿರುಮಕೂಡಲಿನಲ್ಲಿ ಮೂರು ಲಕ್ಷ ಜನ ಸೇರಿದ್ದರೆಂಬ ಹಸಿಸುಳ್ಳನ್ನು ಬಿತ್ತರಿಸಲಾಗುತ್ತದೆ. ಧರ್ಮಾಂಧತೆಗೆ ಪೂರಕವಾಗಿ ಬರುವ ಇಂತಹ ಮೌಢ್ಯ ಕ್ರಮೇಣ ಏಕೆ ಹೆಚ್ಚುತ್ತಿದೆಯೆಂಬುದು ಸರಳವಾದ ವಿಚಾರವಲ್ಲ. ಆದರೆ ಋಷೀಕೇಶದಂತಹ ''ಪವಿತ್ರ'' ಸ್ಥಳಕ್ಕೆ ಹೋಗಿ, ಅಲ್ಲಿರುವ ಗಂಗೆಯನ್ನು ನೋಡಿ, ಜೊತೆಯಲ್ಲೇ ಅದರ ಇಕ್ಕೆಲಗಳಲ್ಲಿರುವ ಅಧ್ಯಾತ್ಮ ಮಂದಿರಗಳನ್ನು ಒಳಹೊಕ್ಕು ವೀಕ್ಷಿಸಿದರೆ, ಭಾಗಶಃ ಉತ್ತರವು ದೊರೆಯುತ್ತದೆ. ಎರಡು ಅಂಶಗಳು ಮುಖ್ಯವಾಗಿ ಮನಸ್ಸನ್ನು ಕದಡುತ್ತವೆ : (ಅ) ಸ್ವರ್ಗ ಸೋಪಾನವಾದ ಆಶ್ರಮಗಳು ಋಷೀಕೇಶದಲ್ಲಂತೂ ಗಂಗೆಯ ಪರಿಶುದ್ಧತೆಯನ್ನು ಹಾಳು ಮಾಡದಿರಲು ಸ್ವತಂತ್ರ ಚರಂಡಿ ವ್ಯವಸ್ಥೆಯನ್ನು ಮಾಡಿಕೊಂಡಿಲ್ಲ. ಪಾವನಗಂಗೆಯನ್ನು ಇನ್ನೂ ಅಧಿಕವಾಗಿ ''ಪಾವನ''ಗೊಳಿಸುವ ಖದೀಮರು ಇಲ್ಲಿದ್ದಾರೆ. (ಆ) ಋಷೀಕೇಶದಲ್ಲಿ ಒಂದು ಕಟು ಹಾಸ್ಯದ ಮಾತು ಯಾವಾಗಲೂ ಕೇಳಿಬರುತ್ತದೆ. ಅದು ಹೀಗಿರುತ್ತದೆ : ಬಂಡವಾಳವನ್ನು ಹೂಡಿ ಹೋಟೆಲ್ ಉದ್ಯಮ ಸ್ಥಾಪಿಸಿ ಚೆನ್ನಾಗಿ ಲಾಭ ಮಾಡಿಕೊಳ್ಳಲು ಆಶಿಸಿದ್ದೀರಾ ? ಹಾಗಿದ್ದರೆ ಋಷೀಕೇಶಕ್ಕೆ ಬಂದು ಒಂದಷ್ಟು ಜಾಗವನ್ನು ಖರೀದಿಸಿ ಅಥವಾ ಲಪಟಾಯಿಸಿ ಒಂದು ಕಟ್ಟಡ ಕಟ್ಟಿ, ಅದಕ್ಕೆ ಪರಮಾರ್ಥ ಆಶ್ರಮವೆಂದೋ ಸ್ವರ್ಗಾಶ್ರಮವೆಂದೋ ಹೆಸರಿಡಿ. ಹವಾನಿಯಂತ್ರಿತ ಕೊಠಡಿಗಳನ್ನು ಸಜ್ಜುಗೊಳಿಸಿ. ಬಿಳಿ ತೊಗಲಿನವರಿಗೆ ವಿಶೇಷ ಮನ್ನಣೆ ಎಂದು ಪ್ರಚಾರ ಮಾಡಿ. ವ್ಯಾಪಾರ ಚೆನ್ನಾಗಿ ಕುದುರುತ್ತದೆ. ಇದರಲ್ಲಿ ಅದೃಶ್ಯ ಲಾಭವೊಂದಿದೆ. ನಿಮ್ಮದು ''ಆಶ್ರಮ''ವಾದ್ದರಿಂದ ಆದಾಯ ತೆರಿಗೆ ಇತ್ಯಾದಿಗಳ ಬಾಧೆಯಿಲ್ಲ!

ಇದೇ ಜನವರಿಯಲ್ಲಿ ಹತ್ತಾರು ''ಆಶ್ರಮ''ಗಳನ್ನು ಋಷೀಕೇಶದಲ್ಲಿ ಸಂದರ್ಶಿಸಿದ್ದರೆ ಯಾರಿಗಾದರೂ ಇದೆಲ್ಲಾ ಗೋಚರಿಸುತ್ತಿತ್ತು. ಯಾವುದೇ ತಿಂಗಳಲ್ಲೂ ಅದು ಗೋಚರ. ಒಂದೇ ಒಂದು ಉದಾಹರಣೆಗೆ ಇಲ್ಲಿ ಅವಕಾಶವಿದೆ : ಪರಮಾರ್ಥ ಆಶ್ರಮದಲ್ಲಿ ಸುಮಾರು ನಲವತ್ತು ಚೀಣೀಯರಿಗೆ ವಸತಿ- ಊಟದ ಸೌಲಭ್ಯ ನೀಡಿ ದಿನವೊಂದಕ್ಕೆ ತಲಾ ಐನೂರು ರೂಪಾಯಿಗಳನ್ನು ವಸೂಲು ಮಾಡಿ ''ಸ್ವಯಂ ಪ್ರೇರಣೆಯಿಂದ ದೇಣಿಗೆ'' ನೀಡಿದ್ದಕ್ಕೆ ಅವರಿಗೆ ವಂದನಾಪೂರ್ವಕವಾಗಿ ರಸೀದಿಯನ್ನು ನೀಡಲಾಯಿತು! ಐನೂರೇ ಏಕೆ ಎರಡು ಸಾವಿರದ ಐನೂರು ವಸೂಲು ಮಾಡುವ ಶ್ರೇಷ್ಠರೂ ಇದ್ದಾರೆ. ಇದಕ್ಕೆ ತೆರಿಗೆಯಿಲ್ಲ. ಇದು ದಿನನಿತ್ಯದ ಅವ್ಯವಹಾರ. ಏನಿಲ್ಲವೆಂದರೂ ಋಷೀಕೇಶ-ಹರಿದ್ವಾರಗಳಲ್ಲಿ ಇಂತಹ ಐನೂರು ತಾಣಗಳಿವೆ. ಅಂತಹ ಅಧ್ಯಾತ್ಮ ಮಂದಿರಗಳು ದೇಶದಲ್ಲಿ ಇನ್ನೆಷ್ಟಿವೆ ? ಅಂದರೆ, ''ಆಶ್ರಮದ ಉದ್ಯಮವು'' ಅತ್ಯಂತ ಲಾಭಕರವಾದ್ದು. ಲಾಭ ಮಾಡುವವರು ವಾರಕ್ಕೆ ಇಷ್ಟೆಂದು ''ಹಫ್ತಾ'' ನೀಡುವುದು ಮುಂಬೈನಲ್ಲಿ ಮಾತ್ರ ಜಾರಿಯಲ್ಲಿಲ್ಲ. ದಾವೂದ್ ಇಬ್ರಾಹಿಂ ಭಂಟರು ಇಲ್ಲದಿರುವ ಋಷೀಕೇಶದಲ್ಲಿ ''ಆಶ್ರಮ''ಗಳು ಇದೇ ಸಂಪ್ರದಾಯವನ್ನು ಅನುಸರಿಸುತ್ತವೆ. ಅಗೋಚರವಾದ ಮಾಫಿಯಾಗಳು ಇವೆಯೆಂದು, ತಿಳಿದ ಸ್ಥಳೀಯರು ಹೇಳುತ್ತಾರೆ. ಇದೆಲ್ಲಕ್ಕೂ ಹೊರತಾದ ಸಣ್ಣಪುಟ್ಟ ಆಶ್ರಮಗಳು ಇಲ್ಲವೆಂದಲ್ಲ; ಆದರೆ ಅವು ವಿರಳ. ಬೆಂಗಳೂರಿನಲ್ಲಿ ಆಂಗ್ಲ ಮಾಧ್ಯಮ ''ಪಬ್ಲಿಕ್ ಸ್ಕೂಲ್''ಗಿಂತಲೂ ಲಾಭದಾಯಕವಾದ್ದು ಋಷೀಕೇಶದ ''ಆಶ್ರಮ'' ವ್ಯವಹಾರ. ಅಧ್ಯಾತ್ಮಜ್ಞಾನವನ್ನು ಉಂಡುಂಡೆಯಾಗಿ ನುಂಗಿರುವುದಾಗಿ ಭ್ರಮಿಸುವವರು ಮತ್ತು ಬೇರೆಯವರಿಗೆ ನುಂಗಿಸುವವರು ಸ್ವಲ್ಪ ದೊಡ್ಡದಾಗಿ ಕಣ್ಣುಬಿಟ್ಟು ನೋಡಿದರೆ ''ಮಿಥ್ಯಾ ವಿಶ್ವವು'' ಮಾಯವಾಗಿ ಮಾಯಾಜಾಲದ ವ್ಯಾಪಾರ ಕೇಂದ್ರಗಳು ಕಾಣಸಿಗುತ್ತವೆ. ಚೆಟ್ಟಿನಾಡಿನ ನಿಪುಣ ಪಿ. ಚಿದಂಬರಂ ಒಮ್ಮೆ ಋಷೀಕೇಶಕ್ಕೆ ಹೋಗಿ ಗಂಗೆಯಲ್ಲಿ ಮಿಂದು ''ಆಶ್ರಮ''ಗಳ ವಹಿವಾಟನ್ನು ಅರ್ಥಮಾಡಿಕೊಂಡು ಅದರ ಮರ್ಮವನ್ನು ಮೊಂಟೆಕ್ ಸಿಂಗ್ ಅಹ್ಲುವಾಲಿಯಾಗೂ ತಿಳಿಸಿ ಕೃತಾರ್ಥರಾಗಲು ಅಡ್ಡಿಯಿಲ್ಲ! ''ಪರಮಾರ್ಥ'' ಎಂಬ ಸವರ್ಣದೀರ್ಘ ಸಂಧಿಯ ಪದದಲ್ಲಿ ಸೂಚಿತವಾಗಿರುವುದೂ ಇದೇ : ಹೇಗಾದರೂ ಸರಿ, ಪರಮ (ಅಂದರೆ, ಅತಿಹೆಚ್ಚಿನ) ಅರ್ಥ (ಅಂದರೆ, ಹಣವನ್ನು) ಕೂಡಿಹಾಕಿಕೊಳ್ಳುವುದನ್ನು ಅಂತಿಮ ಗುರಿಯಾಗಿಸಿ ಕೊಳ್ಳುವುದು ಶ್ರೇಯಸ್ಕರ !! ಹಾಗಲ್ಲವೆಂದು ಉಲಿಯುವವರು ನಾಸ್ತಿಕರಿರಬೇಕು; ಅಥವಾ ''ಆಶ್ರಮ'' ಭಾಷೆಯಲ್ಲಿ ಹೇಳುವುದಾದರೆ ಅವರೆಲ್ಲಾ ''ಅಪ್ಪಟ ಭೋಗನಿರತರು'' ಆಗಿರುತ್ತಾರೆ. ಇದು ಹುರುಳಿಲ್ಲದ ಆಪಾದನೆ. ನಿಜಕ್ಕೂ ಕೀಳುಮಟ್ಟದ ಭೋಗಲಾಲಸೆ ಇರುವುದು ಬೇರೆಡೆ : ಆಶ್ರಮಗಳಂತೂ ಖಂಡಿತ ಅದಕ್ಕೆ ಹೊರತಲ್ಲ. ಆದರೆ ಉತ್ತರಾಖಂಡದ ಈಚಿನ ಚುನಾವಣೆಯ ಸಂದರ್ಭದಲ್ಲಿ ಇದನ್ನು ಯಾರೂ ಸಾರ್ವಜನಿಕ ಸಭೆಗಳಲ್ಲಿ ಹೇಳಲಿಲ್ಲವಲ್ಲವೇ ?

---

೭ನೇ ಪುಟದಿಂದ (ಈ ತಿಂಗಳು)

ಆರೆಸ್ಸೆಸ್ ಸಮರ್ಥಕರು ನೀಡಿದ ಘೋಷಣೆಗಳು, ಅಂಟಿಸಿದ ಭಿತ್ತಿಪತ್ರಗಳು ಮತ್ತು ತಗುಲಿಹಾಕಿದ ಬ್ಯಾನರ್‌ಗಳು ಯಾವುದೇ ಸಮಸ್ಥಿತಿಯ ನಾಗರಿಕರ ಮನಸ್ಸಿಗೆ ಖೇದವನ್ನುಂಟುಮಾಡುವಂತಿದ್ದುವು. ಯಥಾವತ್ತಾಗಿ ಹೇಳಬೇಕಾದರೆ ಅದು ದೂಷಣೆಗಳ ಉತ್ಸವವಾಗಿತ್ತು. ಪರಿವಾರದ ಉದ್ದೇಶ ಈಡೇರಿತು, ಏಕೆಂದರೆ, ಪಾಪ್ಯುಲರ್ ಫ್ರಂಟ್‌ನ ಯಾರೋ ತಿಳಿಗೇಡಿಗಳು ಸಂಘ ಪರಿವಾರದ ಬ್ಯಾನರ್‌ಗಳನ್ನು ಕಿತ್ತರು. ಅದಕ್ಕೆ ಪ್ರತಿಯಾಗಿ ಉತ್ಸವದ ಹುಮ್ಮಸ್ಸಿನಲ್ಲಿದ್ದ ವೀರರು ಕಿಚ್ಚು ಹೊತ್ತಿಸಿದರು. ಸರ್ಕಾರವು ನಿಷ್ಕ್ರಿಯವಾಗಿ ಉಳಿದು ಆಮೇಲೆ ಪೊಲೀಸರನ್ನು ಕಳಿಸಿ ಶಿವಾಜಿನಗರದ ಸುತ್ತಮುತ್ತಣ ವಾಸಸ್ಥಳಗಳಲ್ಲಿ ಹಿಂಸೆಯನ್ನು ಎಗ್ಗಿಲ್ಲದೆ ಹರಿಬಿಟ್ಟಿತು. ಪ್ರಚೋದನೆಯನ್ನು ತಣ್ಣಗಾಗಿಸುವ ಬದಲು ಅದನ್ನು ಉದ್ವಿಗ್ನಗೊಳಿಸಲು ಪೊಲೀಸರು ಯಾವ ಅಳುಕೂ ಇಲ್ಲದೆ ತಮ್ಮ ಸ್ವೇಚ್ಛಾಚಾರವನ್ನು ಮೆರೆದರು. ಹಿಂದೊಮ್ಮೆ ದೇವೇಗೌಡರು ಪರದೆಯ ಹಿಂದೆ ಕುಳಿತು ಬಾಗೂರು-ನವಿಲೆ ಹಳ್ಳಿಗಳಲ್ಲಿ ಪೊಲೀಸರು ಜನಸಾಮಾನ್ಯರಿಗೆ ಎಲ್ಲಿಲ್ಲದ ಹಿಂಸೆ ನೀಡಿದ್ದನ್ನು ನೋಡಿದ್ದರು. ನಲಿದಿದ್ದರೋ ಇಲ್ಲವೋ ತಿಳಿಯದು. ಈಗ ಅವರ ಸುಪುತ್ರ ಕುಮಾರಸ್ವಾಮಿ ಶಿವಾಜಿನಗರದ ಸುತ್ತಮುತ್ತ ಬಾಗೂರು-ನವಿಲೆಯ ದಾರುಣ ಚಿತ್ರವನ್ನು ಬೆಂಗಳೂರಿನ ನಾಗರಿಕರಿಗೆ ಪರಿಚಯಿಸಿದ್ದಾರೆ. ಉತ್ತರ ಪ್ರದೇಶದಲ್ಲಿ ನೀಥಾರಿ ಹತ್ಯೆಗಳ ಪ್ರಕರಣದಲ್ಲಿ ಎಣಿಕೆಗೆ ಸಿಗದಷ್ಟು ಮಕ್ಕಳು ಹತರಾಗಿದ್ದಾರೆ. ಆ ಪ್ರಕರಣದೊಡನೆ ಸ್ಪರ್ಧಿಸಲು ಕರ್ನಾಟಕ ಮುಂದಾಗುವುದು ಬೇಡವೆನ್ನುವುದಾದರೆ ನಮ್ಮಲ್ಲಿ ಪದೇ ಪದೇ ವ್ಯಾಪಕವಾಗಿ ಬೆಳೆಯುತ್ತಿರುವ ಕೋಮುಹಿಂಸೆಯನ್ನು ತಡೆಗಟ್ಟಬೇಕಾಗಿದೆ.

ಅದಕ್ಕೆ ಪೂರಕವಾದ ಕೆಲಸ ಮಾಡುವುದರ ಬದಲು ಯಾವುದೋ ಕಾಲೇಜಿನ ವಿದ್ಯಾರ್ಥಿನಿಯರಿಗೆ ''ಹಿಂದುತ್ವ ಮೂಡುತ್ತಿದೆ, ಅದರಿಂದ ಭರವಸೆ ಮೂಡುತ್ತಿದೆ'' ಎಂಬ ಹಾಡನ್ನು ಸಾಮೂಹಿಕವಾಗಿ ಹಾಡಲು ಕಲಿಸುವ ಸಂಸ್ಕೃತಿ ನಮ್ಮದಾಗುತ್ತಿದೆ. ಇತ್ತೀಚೆಗೆ ಬೆಂಗಳೂರು ಆಕಾಶವಾಣಿಯು ಆ ಅಪಗೀತೆಯ ಗಾಯನವನ್ನು ಪ್ರಸಾರ ಮಾಡಿತೆಂದರೆ ನಂಬಬಹುದೇ ? ಜಾಗತೀಕರಣದ ಹೊಲಸನ್ನು ಬಯಲಿಗೆಳೆದು ಏನನ್ನಾದರೂ ಹೇಳಿದರೆ ಆಕಾಶವಾಣಿಯು ಅದಕ್ಕೆ ಗಿಲೊಟಿನ್ ಪ್ರಯೋಗಿಸುತ್ತದೆ; ಆದರೆ ''ಹಿಂದುತ್ವದಿಂದ ಮೂಡುವ ಭರವಸೆ'' ಬಗ್ಗೆ ಹಾಡಿದರೆ ಅದನ್ನು ಸುಶ್ರಾವ್ಯವಾಗಿ ಕೇಳಿಸುತ್ತದೆ ನಮ್ಮ ಆಕಾಶವಾಣಿ. ನಾವೆತ್ತ ಸಾಗುತ್ತಿದ್ದೇವೆಂಬುದಕ್ಕೆ ಇದೂ ಒಂದು ಸೂಚನೆಯಲ್ಲವೆ ? ಕೇಂದ್ರ ಸರ್ಕಾರವು ಇದರ ಬಗೆಗೆಲ್ಲಾ ಆಸಕ್ತಿ ವಹಿಸಲು ಅದಕ್ಕೆ ವ್ಯವಧಾನವಿಲ್ಲ!

* * *

ಖಾಸಗಿ ಎಂದ ತಕ್ಷಣ ಸ್ಫೂರ್ತಿ ತುಂಬಿಕೊಳ್ಳುವ ಮಂದಿ ಇತ್ತೀಚಿನ ಒಂದು ದುರ್ಘಟನೆಯನ್ನು ಬುದ್ಧಿವಂತಿಕೆಯಿಂದ ಮುಚ್ಚಿಹಾಕಿದರು. ಗಂಗೂಲಿ ಐವತ್ತುರನ್ನು ಹೊಡೆದರೆ ಐದು ಪುಟ ಕೆಲಸಕ್ಕೆ ಬಾರದ್ದನ್ನೆಲ್ಲಾ ಬರೆಯುವ ನಮ್ಮ ಕೆಲವು ಪತ್ರಿಕೆಗಳಿಗೆ ಇದೊಂದು ಸುದ್ದಿಯೆಂದು ಕಾಣಲೇ ಇಲ್ಲ. ಬೇರೆ ಸಂಪನ್ನ ಮಾಧ್ಯಮಗಳ ಪ್ರತಿಕ್ರಿಯೆ ಇದಕ್ಕಿಂತಲೂ ಭಿನ್ನ

ವಾಗಿರಲಿಲ್ಲ. ಸಂಗತಿ ಇಷ್ಟೇ: ಸುವರ್ಣ ಚತುಷ್ಕೋಣ ಮುಂತಾಗಿ ಅದ್ಭುತವಾಗಿ ಹೊಗಳಲಾಗುವ ರಸ್ತೆಯ ಒಂದು ಭಾಗ ಬೆಂಗಳೂರು-ತುಮಕೂರು ರಸ್ತೆ. ಆ ಊರುಗಳ ಮಧ್ಯೆ ದಾಬಸ್‌ಪೇಟೆ ಇದೆ. ಆ ಡಾಬ್ಸ್ ಯಾವನೋ ಅದನ್ನು ತಿಳಿದೇನಾಗಬೇಕು! ಶಿಲ್ಪಾ ಶೆಟ್ಟಿ ಕೋಟಿಗಟ್ಟಲೆ ಹಣ ಸೂರೆಮಾಡಿದ್ದುದನ್ನು ವಿವರಿಸುತ್ತಿದ್ದ ನಮ್ಮ ಪತ್ರಿಕೆಗಳಿಗೆ ದಾಬಸ್‌ಪೇಟೆಯಲ್ಲಿ ಖಾಸಗಿ "ಶ್ರೇಷ್ಠ" ಕಂಪನಿಯೊಂದು ಇತ್ತೀಚೆಗಷ್ಟೆ ನಿರ್ಮಿಸಿದ್ದ ರಸ್ತೆಯ ತಡೆಗೋಡೆಯು ಮುರಿದುಬಿತ್ತು ಎಂಬುದು ಕಾಣಲಿಲ್ಲ. ಒಂದೆರಡು ಅಡಿಯಷ್ಟಲ್ಲ, ಮೂವತ್ತು ಅಡಿಗೂ ಹೆಚ್ಚು. ಸಾರ್ವಜನಿಕ ಹಣವನ್ನು ಇಂತಹ ಕಳಪೆ ಕಾಮಗಾರಿಗಾಗಿ ಲಪಟಾಯಿಸಿ ನುಂಗಿದ ಕಂಟ್ರಾಕ್ಟರ್ ಯಾರು? ಸರ್ಕಾರ ಮುಂದೆ ಯಾವ ಕ್ರಮ ಜರುಗಿಸಿತು? ಖಾಸಗಿತನದ ಶ್ರೇಷ್ಠತೆಯ ಬಗ್ಗೆ ಹೇರಳವಾಗಿ ಮಾತನಾಡುವವರ ಬಾಯಿ ಕಟ್ಟಿಹೋಗಿದ್ದೇಕೆ?

* * *

ಆಂಗ್ಲಭಾಷೆಯು ನಮ್ಮ ರಾಜ್ಯದಲ್ಲಿ ಎಷ್ಟು ಕ್ರಾಂತಿ ಕಾರಕವಾದ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳನ್ನು ತರುತ್ತದೆಂಬುದರ ಬಗ್ಗೆ ಕಳೆದ ಒಂದು ವರ್ಷದಲ್ಲಿ ಅಜೀರ್ಣವಾಗುವಷ್ಟು ಪ್ರವಚನಗಳನ್ನು ಕೇಳಿದ್ದೇವೆ. ಅದರ ಸತ್ಯಾಸತ್ಯತೆ ಏನೇ ಇರಲಿ, ಬೆಂಗಳೂರಿನ ರಿಮ್ಯಾಂಡ್ ಹೋಂನಿಂದ ತಪ್ಪಿಸಿಕೊಂಡು ಓಡಿಹೋದ ಹುಡುಗನೊಬ್ಬ ತನ್ನ ಅಪರಾಧಕ್ಕೆ ಕಾರಣ ಗುರುತಿಸುವಾಗ ಆಂಗ್ಲಭಾಷೆ ಅವನಿಗೆ ಬರುವುದಿಲ್ಲವೆಂಬುದನ್ನು ಹೇಳಿ ಗಳಗಳನೆ ಅತ್ತುಬಿಟ್ಟನಂತೆ. ಯಾರನ್ನೋ ಕೊಂದು ಹಾಕಿದ್ದ ಹದಿನಾರು ವಯಸ್ಸಿನ ಈ ಹುಡುಗ ಹೇಳಿದನಂತೆ: "ನನಗೂ ಇಂಗ್ಲಿಷ್ ಬಂದಿದ್ದರೆ ನಾನು ಕೊಲೆಗಾರನಾಗುತ್ತಿರಲಿಲ್ಲ, ಒಳ್ಳೆಯ ಉದ್ಯೋಗದಲ್ಲಿ ನಿರತನಾಗಿರುತ್ತಿದ್ದೆ" ಎಂದು. ಪಾಪ ಆ ಹುಡುಗನಿಗೆ ತಿಳಿಯದ ಎರಡು ಅಂಶಗಳಿವೆ: (ಅ) ಇಂಗ್ಲಿಷನ್ನು ಹುರಿದಂತೆ ಮಾತನಾಡುವ ನಿರುದ್ಯೋಗಿಗಳು ನಮ್ಮಲ್ಲಿ ಬೇಕಾದಷ್ಟಿದ್ದಾರೆ; (ಆ) ಈ ಹುಡುಗ ಒಬ್ಬ ವ್ಯಕ್ತಿಯನ್ನು ಕೊಂದಿದ್ದಾನೆಂದು ಹೇಳಲಾಗಿದೆ. ಅವನಿಗೆ ಇಂಗ್ಲಿಷ್ ಬಾರದಿರುವುದೇ ಅದಕ್ಕೆ ಕಾರಣವಿರಬಹುದೆಂದು ಅವನು ಈಗ ಹೇಳುತ್ತಿದ್ದಾನೆ; ಇಂಗ್ಲಿಷ್ ಚೆನ್ನಾಗಿ ಬರುವ ಮೊಂಟೆಕ್ ಸಿಂಗ್ ಅಹ್ಲುವಾಲಿಯ ಎಂಬ ಯೋಜನಾ ಆಯೋಗದ ಅಧ್ಯಕ್ಷ ಇಡೀ ದೇಶವನ್ನು ಕೊಲ್ಲುತ್ತಿದ್ದಾನೆ!

* * *

"ಕರಾವಳಿ ಅಲೆ" ಎಂಬ ಪತ್ರಿಕೆಯು ಮಂಗಳೂರಿನಿಂದ ಪ್ರಕಟವಾಗುವ ಒಂದು ಉತ್ತಮವಾದ ಪತ್ರಿಕೆ. ಶ್ರೀಯುತ ಸೀತಾರಾಂ ಅದರ ಸಂಪಾದಕರು. ಅವರನ್ನು ಬಲ್ಲವರೆಲ್ಲಾ ಅವರ ವಿದ್ವತ್ತು, ಶೀಲ ಮತ್ತು ವಿನಯಗಳನ್ನು ಶ್ಲಾಘಿಸುತ್ತಾರೆ. ವಸ್ತುನಿಷ್ಠ ವರದಿಗಳಿಗೆ, ಜನಪರ ಕಾಳಜಿಗಳಿಗೆ, ಧರ್ಮನಿರಪೇಕ್ಷತೆಗೆ ಮತ್ತು ಪ್ರಜಾಪ್ರಭುತ್ವವಾದಿ ಪ್ರಕ್ರಿಯೆಗಳಿಗೆ ಬದ್ಧವಾಗಿರುವ ಪತ್ರಿಕೆ ಇದು. ಈಚೆಗೆ ಮಂಗಳೂರಿನಲ್ಲಿ ನಡೆದ "ವಿರಾಟ್ ಹಿಂದೂ ಸಮಾಜೋತ್ಸವ" ಸಭೆಯನ್ನು ಕುರಿತು ಪತ್ರಿಕೆಯು ವರದಿಯೊಂದನ್ನು ಪ್ರಕಟಿಸಿತ್ತು. ಸಭೆಯಲ್ಲಿ ಯಾರೋ ಸ್ವಾಮಿಗಳು ಅಸಮಾಧಾನಗೊಂಡು ವೇದಿಕೆಯಿಂದ ನಿರ್ಗಮಿಸಿದ್ದರು. ಅದನ್ನು ವರದಿ ಮಾಡಿದ್ದು "ಕರಾವಳಿ ಅಲೆ". ಸಮಾಜೋತ್ಸವದ ಧುರೀಣರು ಉತ್ಸವದ ಉತ್ಸಾಹವನ್ನು ಮುಂದುವರಿಸಿ "ಅಲೆ"ಯ ಕಚೇರಿಗೆ ನುಗ್ಗಿ ಗಣಕ ಯಂತ್ರ, ಗಾಜು, ಮೇಜು, ಕುರ್ಚಿಗಳು, ಕಾಗದ ಪತ್ರಗಳು ಎಲ್ಲವನ್ನೂ ಧ್ವಂಸಮಾಡಿದ್ದಾರೆ. ಕಚೇರಿಯ ಹತ್ತಿರದಲ್ಲೇ ಇರುವ ಶ್ರೀ ಸೀತಾರಾಂ ಅವರ ಮನೆಗೂ ನುಗ್ಗಿ ಕೈಗೆ ಸಿಕ್ಕ ಪದಾರ್ಥಗಳನ್ನೆಲ್ಲಾ ಹಾಳು ಮಾಡಿದ್ದಾರೆ. ಪತ್ರಿಕೆಗಳ ಸ್ವಾತಂತ್ರ್ಯ ಮತ್ತು ವಸ್ತುನಿಷ್ಠತೆಯ ಬಗ್ಗೆ ಕಾಳಜಿ ಇರುವುದಾಗಿ ಹೇಳುವ ರಾಜ್ಯದ ಗೃಹಸಚಿವ ಶ್ರೀ ಎಂ.ಪಿ. ಪ್ರಕಾಶ್ ಅವರ ಗಮನಕ್ಕೆ ಇದೆಲ್ಲಾ ಬಂದಿಲ್ಲವೇ? ಬಂದಿದ್ದರೆ ಪಾತಕಿಗಳನ್ನು ಬಂಧಿಸುವುದಕ್ಕೆ ಆದೇಶ ನೀಡುವರೆ?

* * *

ಇದು ಹೊರಗಿನವನೊಬ್ಬನ, ಆದರೆ ಹೃದಯವನ್ನು ಹಿಂಡುವ ತುಣುಕು. ನಮ್ಮ ದೇಶವು ಅಮೆರಿಕಾದ ಪದತಲದಲ್ಲಿ ಕೂರುವ ಸನ್ನಿವೇಶ ಬಹಳ ವೇಗವಾಗಿ ನಿರ್ಮಾಣವಾಗುತ್ತಿದೆ. ಅಮೆರಿಕಾದ ಯಾವನಾದರೊಬ್ಬ "ಪ್ರತಿಭಾವಂತ" ಅರ್ಥಶಾಸ್ತ್ರಜ್ಞ, ರಾಜಕಾರಣಿ, ವಿಜ್ಞಾನಿ, ಭಾರತದಲ್ಲಿ ಪ್ರತಿನಿತ್ಯವೂ ಇರುವುದು, ಉಪದೇಶ ನೀಡುವುದು ಮತ್ತು ಪ್ರಚ್ಛನ್ನವಾಗಿ ಬೆದರಿಕೆ ಹಾಕುವುದು ಸರ್ವೇಸಾಮಾನ್ಯವಾಗುತ್ತಿದೆ. ನಮ್ಮ ಮಾಧ್ಯಮಗಳು ಮತ್ತು ಬುದ್ಧಿಜೀವಿಗಳು ಇದನ್ನೆಲ್ಲಾ ಸಹಜವೆಂದು ಪರಿಗಣಿಸುವ ದುಃಸ್ಥಿತಿ ನಮ್ಮದು. ಫೆಬ್ರವರಿಯ ಎರಡನೆಯ ವಾರದಲ್ಲಿ ಸ್ಟೀಫನ್ ರೇಡ್‌ಮೇಕರ್ ಎಂಬುವವನು ದೆಹಲಿಯಲ್ಲಿ ದೊಡ್ಡ ಮನುಷ್ಯರನ್ನು ಉದ್ದೇಶಿಸಿ ಮಾತನಾಡಿದ; ಅದೂ ರಕ್ಷಣಾ ಸಂಬಂಧಿ ಅಧ್ಯಯನ ಮತ್ತು ವಿಶ್ಲೇಷಣೆಗೆ ಮೀಸಲಾದ ಸಂಸ್ಥೆಯಲ್ಲಿ. ಹಿಂದೆ ಆತ ಅಮೆರಿಕಾ ಸರ್ಕಾರದ ವಿದೇಶಾಂಗ ಸಚಿವಾಲಯದಲ್ಲಿ ಉನ್ನತ ಹುದ್ದೆಯಲ್ಲಿದ್ದ. ಅನಧಿಕೃತ ರಾಯಭಾರಿಯಾಗಿ ಭಾರತಕ್ಕೆ ಬಂದು ಒಂದಷ್ಟು ಗಾಳಿಪಟ ಬಿಡುವುದು ಅವನ ಉದ್ದೇಶ. ಆತನನ್ನು ಸಿ.ಐ.ಎ. ಭಾರತಕ್ಕೆ ಕಳಿಸಿದ್ದರೆ ಆಶ್ಚರ್ಯವೇನೂ ಇಲ್ಲ. ಅಂತರರಾಷ್ಟ್ರೀಯ ಪರಮಾಣು ಇಂಧನದ ಸಂಬಂಧ ಇರಾನ್ ವಿರುದ್ಧ ಮತ ಹಾಕಲು ಅಮೆರಿಕಾವು ಭಾರತದ ಮೇಲೆ ಒತ್ತಡ ಹೇರಿತ್ತೆಂದು ಎಲ್ಲರಿಗೂ ಗೊತ್ತಿದ್ದ ಸಮಾಚಾರವನ್ನು ಈತ ನಾಟಕೀಯವಾಗಿ ನಿರೂಪಿಸಿದ. ಅದರಿಂದಲೇ ಅಮೆರಿಕಾ ಈಗ ಪರಮಾಣು ಒಪ್ಪಂದಕ್ಕೆ ಮುಂದೆ ಬಂದಿದೆಯೆಂದು ತಿಳಿಸಿದ. ಇರಾನ್ ಮತ್ತು ಉತ್ತರ ಕೊರಿಯ ಪರಮಾಣು ಕ್ಷೇತ್ರದಲ್ಲಿ ಹೆಚ್ಚಿನ ಸಾಧನೆಗಳನ್ನು ಮಾಡುತ್ತಿರುವುದರಿಂದ ಭಾರತಕ್ಕೆ ಇನ್ನೂ ಅಗಾಧವಾದ ಅಂತರರಾಷ್ಟ್ರೀಯ ಕರ್ತವ್ಯಗಳಿವೆಯೆಂದು ಈತ ಸಾರಿದ. ಅಂದರೆ, ನಾಳೆ ಅಮೆರಿಕಾವು ಇರಾನ್ ಮೇಲೆ ಧಾಳಿ ಮಾಡಿದರೆ ಭಾರತ ಸಹಕರಿಸಬೇಕು ಎಂದು ಇದರರ್ಥ. ಅದರಿಂದ ಭಾರತಕ್ಕೆ ಭವ್ಯವಾದ ಭವಿಷ್ಯ ರೂಪಿತವಾಗುತ್ತದಂತೆ! ಅಮೆರಿಕಾ ಜೊತೆ ಕೈಗೂಡಿಸದಿದ್ದರೆ ಒಳ್ಳೆಯ ಅವಕಾಶದಿಂದ ಭಾರತವು ವಂಚಿತವಾಗುತ್ತದಂತೆ! ಅದಕ್ಕೆ ಮೊದಲ ಹೆಜ್ಜೆ. ಇವನ ಪ್ರಕಾರ, ಭಾರತ-ಪಾಕಿಸ್ತಾನ-ಇರಾನ್ ತೈಲ ಸಾಗಿಸುವ ಕೊಳವೆ ನಿರ್ಮಾಣದ ಯೋಜನೆಯಿಂದ ಹೊರಬರುವುದು. ಅದರಿಂದ ಇರಾನ್‌ಗೆ ಎಚ್ಚರಿಕೆ ನೀಡಿದಂತಾಗುತ್ತದೆ ಮತ್ತು ಭಾರತದ ಮೇಲೆ ಆರ್ಥಿಕವಾಗಿ ಯಾವ ದುಷ್ಪರಿಣಾಮವೂ ಇರುವುದಿಲ್ಲವೆಂದು ಈತನ ಚತುರ ಸಂಶೋಧನೆ. ಭಾರತ ಮಾಡಬಹುದಾದ "ಚುರುಕುತನದ ತಂತ್ರ" ಇದಂತೆ. ಕಡೆಗೆ ಬೆನ್ನು ತಟ್ಟಿ ಹೇಳಿದ: "ಭಾರತವು ಮೂರನೆಯ ಜಗತ್ತಿನ ರಾಷ್ಟ್ರವಲ್ಲ. ಅದೆಲ್ಲಾ ಹಳೆಯ ಮಾತು. ಅದನ್ನು ಮರೆತುಬಿಡಿ. ನೀವು ಮೊದಲನೆಯ ಜಗತ್ತಿನ ರಾಷ್ಟ್ರಗಳೊಡನೆ ಹೆಚ್ಚುಹೆಚ್ಚಾಗಿ ಸಹಕರಿಸಿ."

ಇದು ಸ್ಟೀಫನ್ ಮುಖಾಂತರ ಬುಷ್ ಮತ್ತು ಸಿ.ಐ.ಎ. ಕಳಿಸಿರುವ ಸಂದೇಶ. ಕೇಂದ್ರ ಸರ್ಕಾರಕ್ಕೆ ಇದು ಕೇಳಿಸದಿರಬಹುದು, ಆದರೆ ದೇಶದ ಜನ ಕೇಳಿಸಿಕೊಳ್ಳಲೇಬೇಕು ಮತ್ತು ಸಕ್ರಿಯವಾಗಿ ಪ್ರತಿಕ್ರಿಯಿಸಬೇಕು. ದೊಡ್ಡಣ್ಣನಿಗೆ ಒಂದು ದೊಡ್ಡ ಕಪಾಲಮೋಕ್ಷವು ಇಂದಿನ ತುರ್ತು ಅಗತ್ಯವಾಗಿದೆ.

* * *

ಭಾರತ ಮತ್ತು ಪಾಕಿಸ್ತಾನಗಳ ನಡುವೆ ಪರಸ್ಪರ ತಿಳಿವಳಿಕೆ ಮೂಡಿಸಲು ಮತ್ತು ಎರಡೂ ದೇಶಗಳ ಜನರ ನಡುವಣ ಸಂಪರ್ಕವನ್ನು ಹೆಚ್ಚಿಸಲು ದೆಹಲಿ-ವಾಘಾ ನಡುವೆ ನೇರ ರೈಲು ಸಂಚಾರ ಏರ್ಪಡಿಸುವುದನ್ನು ಸಾಮಾನ್ಯವಾಗಿ ಎಲ್ಲೆಡೆ ಸ್ವಾಗತಿಸಲಾಗಿತ್ತು. ಇಂತಹ ಮೈತ್ರಿಯನ್ನು ಸಹಿಸದ ಭಯೋತ್ಪಾದಕರು ಫೆಬ್ರವರಿ ೧೯ರಂದು ರೈಲಿನಲ್ಲಿ ಬೆಂಕಿ ಬಾಂಬು ಸಿಡಿಸಿ ಅಧಿಕ ಸಂಖ್ಯೆಯ ಪ್ರಯಾಣಿಕರನ್ನು ಕೊಂದರು. ಈ ಕೃತ್ಯವನ್ನು ಖಂಡಿಸುತ್ತಾ 'ಹೊಸತು' ಸೌಹಾರ್ದಕ್ಕೆ ಧಕ್ಕೆಯುಂಟಾಗದಿರಲೆಂದು ಆಶಿಸುತ್ತದೆ. ರೈಲಿನ ಬೋಗಿಗಳಿಗೆ ಯಾವ ಕಾರಣಕ್ಕೇ ಆಗಲಿ ಹೊರಗಿನಿಂದ ಬೀಗ ಜಡಿಯುವುದು ಸರಿಯಲ್ಲವೆಂದು ರೈಲ್ವೆ ಅಧಿಕಾರಿಗಳಿಗೆ ಸರ್ಕಾರವು ನಿರ್ದೇಶನ ನೀಡಬೇಕು.

* * *

ಜ್ಞಾನಪೀಠ ವಿಜೇತ ಡಾ॥ ಯು. ಆರ್. ಅನಂತಮೂರ್ತಿಯವರು ಅನಕ್ಷರಸ್ಥ ತಾಯಂದಿರ ಬಗ್ಗೆ ಅವಹೇಳನಕರವಾದ ಮತ್ತು ಅಸಂಬದ್ಧವಾದ ಮಾತುಗಳನ್ನಾಡಿ ಅಸ್ವಾಭಾವಿಕ ಪ್ರಸಿದ್ಧಿ ಗಳಿಸಿಕೊಂಡಿದ್ದಾರೆ. ಪ್ರೊ॥ ಬರಗೂರು ರಾಮಚಂದ್ರಪ್ಪನವರು ಅವರಿಗೆ 'ಪ್ರಜಾವಾಣಿ' ಪತ್ರಿಕೆಯಲ್ಲಿ ಉತ್ತರ ನೀಡಿ ಸಾರ್ವಜನಿಕರ ಅಭಿಪ್ರಾಯವನ್ನು ಬಿಂಬಿಸಿದ್ದಾರೆ. ಇಲ್ಲಿ ಇಷ್ಟು ಮಾತ್ರ ಹೇಳಬೇಕು: ತಮ್ಮ ಸ್ವಂತದ ಕೃತ್ಯ, ಅಕೃತ್ಯ ಮತ್ತು ದುಷ್ಕೃತ್ಯಗಳಿಗೆ ಅನಂತಮೂರ್ತಿಯವರು ಅವರ ತಾಯಿಯವರನ್ನು ದೂಷಿಸುವುದು ಸಾಧುವಲ್ಲ. ಆಕೆ ಅಕ್ಷರಸ್ಥರೋ ಅನಕ್ಷರಸ್ಥರೋ ಅದು ಪ್ರಸ್ತುತವಲ್ಲ. ನಮ್ಮ ಭ್ರಷ್ಟಾಚಾರಗಳಿಗೆಲ್ಲಾ ನಮ್ಮ ತಾಯಂದಿರನ್ನು ಹೊಣೆ ಮಾಡಿದರೆ ನಮ್ಮ ಅವ್ಯವಹಾರಗಳನ್ನು ನಿಸೂರಾಗಿ ಮುಂದುವರಿಸಿಕೊಳ್ಳಬಹುದೇನೋ! ಆದರೆ ಅದು ಗೌರವದ ಕೆಲಸವಲ್ಲ.

### ಜನಾಂದೋಲನವೇ ಮಾರ್ಗ

ಇಂದು ವಿಶೇಷ ಆರ್ಥಿಕ ವಲಯದ ಕುರಿತು ವಿಶೇಷ ಹಾಗೂ ವ್ಯಾಪಕವಾದ ಚರ್ಚೆ ನಡೆಯುತ್ತಿದೆ. ಈ ಚರ್ಚೆಗೆ ಪ್ರತಿಕ್ರಿಯೆಯಾಗಿ ಈ ಲೇಖನವಲ್ಲವಾದರೂ ಚರ್ಚೆಯು ಚಳುವಳಿಯ ರೂಪ ಪಡೆಯಬೇಕೆಂಬ ಆಶಯ ನನ್ನದು. ವಿಶೇಷ ಆರ್ಥಿಕ ವಲಯವು ತಕ್ಷಣ ರೂಪುಗೊಂಡ ಕಾನೂನು ಅಲ್ಲ. ಇದು ಸುಮಾರು ಒಂದೂವರೆ ದಶಕದಿಂದ ಆರಂಭಗೊಂಡ ಜಾಗತೀಕರಣದ ಭಾಗವೇ ಆಗಿದೆ. ಇಡೀ ವಿಶ್ವದ ಉತ್ಪಾದನೆ ಮತ್ತು ವಿತರಣಾ ವಿಧಾನದ ಮೇಲೆಯೇ ತನ್ನ ಕರಿನೆರಳು ಬೀಸಿರುವ ಈ ಜಾಗತೀಕರಣ ಇಂದು ಬದುಕಿನ ಎಲ್ಲ ವಲಯಗಳನ್ನೂ ಆಕ್ರಮಿಸುತ್ತಿದೆ. ಅಭಿವೃದ್ಧಿಯನ್ನು ಮಾನವ ಕಲ್ಯಾಣದ ಪರಿಕಲ್ಪನೆಗೆ ಪ್ರತಿಯಾಗಿ ನಿಲ್ಲಿಸಿರುವ ಕುಖ್ಯಾತಿ ಈ ನವ ವಸಾಹತುಶಾಹಿಯ ಆರ್ಥಿಕ ನೀತಿಗೆ ಸಲ್ಲುತ್ತದೆ. ವಿಶ್ವವನ್ನು ಈ ಹುಸಿ ಅಭಿವೃದ್ಧಿಯ ಸ್ಪರ್ಧೆಯಲ್ಲಿ ತೊಡಗಿಸಿ ಇಡೀ ಮಾನವ ಕುಲವನ್ನು ಗಿರಾಕಿಗಳನ್ನಾಗಿಸಿ, ಪ್ರತಿ ದೇಶವನ್ನು ತನ್ನ ಮಾರುಕಟ್ಟೆಯನ್ನಾಗಿಸುವ ಡಬ್ಲ್ಯು.ಟಿ.ಓ. ಹುನ್ನಾರ ಈ ಆರ್ಥಿಕ ನೀತಿಗಳ ಹಿಂದಿದೆ ಎನ್ನುವುದನ್ನು ಯಾರೂ ಅಲ್ಲಗಳೆಯಲಾರರು.

**ಡಾ|| ಸಿದ್ದನಗೌಡ ಪಾಟೀಲ**

ಆರಂಭದಲ್ಲಿ ಜಾಗತೀಕರಣವನ್ನು ಹಾಡಿಹೊಗಳಿದ ಕೆಲವು ಅರ್ಥಶಾಸ್ತ್ರಜ್ಞರು, ಬುದ್ಧಿಜೀವಿಗಳು, ಜಾಗತೀಕರಣದ ಪರವಾಗಿದ್ದ ರಾಜಕಾರಣಿಗಳು ಇಂದು ಅದರ ಪ್ರತಾಪವನ್ನು ನೋಡಿ ನಿರುತ್ತರರಾಗಿದ್ದಾರೆ. ಇನ್ನು ಕೆಲವರು ಅದರ ಭಾಗವಾಗಿಯೇ ಶೋಷಕವರ್ಗದ ಪಾಲುದಾರರಾಗಿದ್ದಾರೆ.

ವಿಶೇಷ ಆರ್ಥಿಕ ವಲಯ ಕಾನೂನು (೨೦೦೫) ಬರುವುದಕ್ಕಿಂತ ಮುಂಚೆ ಇಂಥ ಹಲವಾರು ವಿಶೇಷ ವಲಯಗಳು ಭಾರತ ಮತ್ತು ಇತರೆ ತೃತೀಯ ವಿಶ್ವದ ದೇಶಗಳಲ್ಲಿ ಅಸ್ತಿತ್ವಕ್ಕೆ ಬಂದಿವೆ. ಕೃಷಿ, ಕೈಗಾರಿಕೆ, ಶಿಕ್ಷಣ, ಸಂಸ್ಕೃತಿ ಹೀಗೆ ಸಮಾಜದ ಪ್ರತಿ ಕ್ಷೇತ್ರದಲ್ಲಿಯೂ ಅಂಥ ವಿಶೇಷ ವಲಯಗಳು ಪರೋಕ್ಷವಾಗಿ ಪ್ರವೇಶಿಸಿ ನಮ್ಮ ಸ್ವಾವಲಂಬನೆ, ಸಾರ್ವಭೌಮತೆಗೆ ಧಕ್ಕೆ ತಂದಿವೆ. ಅಂಥ ಕ್ಷೇತ್ರಗಳ ರಕ್ಷಣೆಗಾಗಿ ಬಿಡಿಬಿಡಿ ಹೋರಾಟಗಳೂ ನಡೆದಿವೆ. ಆದರೆ ಈಗ ಕಾನೂನಿನ ರೂಪದಲ್ಲಿ ಬಂದು ನೇರವಾಗಿ ಕೃಷಿಕರನ್ನು ಭೂಮಿಯಿಂದ ಹೊರಗಟ್ಟುತ್ತಿರುವ, ಭೂಮಿ ಅವಲಂಬಿತರನ್ನು ನಿರ್ವಸಿತರನ್ನಾಗಿಸುತ್ತಿರುವ ವಿಶೇಷ ಆರ್ಥಿಕ ವಲಯಗಳು ಹೆಚ್ಚು ಚರ್ಚೆಗೆ ಒಳಪಡುತ್ತಿವೆ.

ಅಭಿವೃದ್ಧಿಯ ಹೆಸರಿನಲ್ಲಿ ಕೃಷಿಭೂಮಿಯನ್ನು ಕೃಷಿಯೇತರ ಚಟುವಟಿಕೆಗಳಿಗೆ ಬಳಸುತ್ತಿರುವುದು ಹೊಸತೇನಲ್ಲ. ನಗರಗಳ ವಿಸ್ತರಣೆಗೆ (ಗ್ರಾಮಗಳೂ ಕೃಷಿಭೂಮಿಯಲ್ಲಿ ವಿಸ್ತರಣೆಗೊಂಡಿವೆ), ನೀರಾವರಿಗಾಗಿ ಅಣೆಕಟ್ಟುಗಳ ನಿರ್ಮಿತಿಗೆ, ರಸ್ತೆ, ರೈಲುಮಾರ್ಗ ನಿರ್ಮಾಣ ಹೀಗೆ ಫಲವತ್ತಾದ ಕೃಷಿಭೂಮಿಯನ್ನು ಬಳಸಿ, ಕೃಷಿಕರಿಗೆ ಪರಿಹಾರ ನೀಡಿ (ಕೆಲವೊಮ್ಮೆ ಸಮರ್ಪಕವಾಗಿ, ಹಲವಾರು ಕಡೆ ಅಸಮರ್ಪಕವಾಗಿ) ಅವರನ್ನು ಅವರ ಭೂಮಿಯಿಂದ ಹೊರಹಾಕಲಾಗಿದೆ. ಈಗಲೂ ವಿಶೇಷ ಆರ್ಥಿಕ ವಲಯದ ಹೆಸರಿನಲ್ಲಿ ಹಾಗೇ ಆಗುತ್ತಿದೆ ಎಂಬ ಭಾವನೆ ಸಾರ್ವಜನಿಕರಲ್ಲಿದೆ ಮತ್ತು ಭೂಮಿಯಿಂದ ಹೊರಬೀಳುತ್ತಿರುವ ರೈತರಿಗೂ ಅದೇ ಭಾವನೆ ಇದೆ. ಅವರಲ್ಲಿ ಬಹುತೇಕರು ಭೂಮಿ ಬಿಟ್ಟುಕೊಡಲು ತಕರಾರು ಮಾಡುವುದಿಲ್ಲ. ಪರಿಹಾರ ಕುರಿತು ತಕರಾರು ಮಾಡುತ್ತಾರೆ, ಹೆಚ್ಚಿನ ಪರಿಹಾರಕ್ಕಾಗಿ ಒತ್ತಾಯಿಸುತ್ತಾರೆ; ಸಾಧ್ಯವಾದರೆ ಹೋರಾಟವನ್ನೂ ಮಾಡುತ್ತಾರೆ. ಆದರೆ ಈ ವಿದ್ಯಮಾನ ಅಷ್ಟು ಸರಳವಾದದ್ದಲ್ಲ. ಈಗಾಗಲೇ 'ಹೊಸತು' ಪತ್ರಿಕೆಯಲ್ಲಿ ಹಲವಾರು ಚಿಂತಕರು ತಮ್ಮ ಲೇಖನಗಳಲ್ಲಿ ತಿಳಿಸಿರುವಂತೆ ಈ ವಿಶೇಷ ಆರ್ಥಿಕ ವಲಯಗಳು 'ಪರದೇಶಿ ಪ್ರದೇಶ'ಗಳಾಗಿ ಮಾರ್ಪಡಲಿವೆ. ನಮ್ಮ ರಸ್ತೆಗಾಗಿ, ಗ್ರಾಮ, ನಗರ ವಿಸ್ತರಣೆಗಾಗಿ, ನೀರಾವರಿಗಾಗಿ ವಶಪಡಿಸಿಕೊಳ್ಳುವ ಕೃಷಿ ಭೂಮಿಗಳು ನಮ್ಮ ಅನುಕೂಲ ಮತ್ತು ಬಳಕೆಗಾಗಿ ಇವೆ. ಅದರಿಂದ ನಮ್ಮ ಸರಕಾರಗಳು, ಜನತೆ ಪ್ರತಿಫಲ ಪಡೆಯುತ್ತವೆ. ಆದರೆ ಈ ವಿಶೇಷ ಆರ್ಥಿಕ ವಲಯಗಳು ಈಗಾಗಲೇ 'ಹೊಸತು'ವಿನಲ್ಲಿ ಚರ್ಚೆಯಾದಂತೆ ಈ ನೆಲದ ಕಾನೂನಿನಿಂದ ಮುಕ್ತವಾಗಿರುತ್ತವೆ. ಇದು ನಮ್ಮ ದೇಶದ ಸಂವಿಧಾನಕ್ಕೆ ನಾವೇ ಬಗೆವ ಅಪಚಾರ. 'ಈ ಪರದೇಶಿ ಪ್ರದೇಶಗಳು' ಯಾವ ಸ್ಥಳೀಯ ಸರಕಾರಗಳ ಕಾನೂನನ್ನೂ ಮಾನ್ಯ ಮಾಡಬೇಕಿಲ್ಲ. ಅದಕ್ಕೆ ವಿಶೇಷ ಆರ್ಥಿಕ ವಲಯ ಕಾನೂನು ಸೆಕ್ಷನ್ ೯, ೧೧, ೧೨, ೩೧ ಅವಕಾಶ ಮಾಡಿಕೊಡುತ್ತವೆ. ಇದು ಈ ದೇಶದ ಪ್ರಜಾಸತ್ತೀಯ ವಿಕೇಂದ್ರೀಕರಣ ನೀತಿಗೆ ವಿರೋಧ ವಾದದ್ದು. ಇಂಥ ೩೦೦ ವಿಶೇಷ ಆರ್ಥಿಕ ವಲಯಗಳನ್ನು ಸೂಚಿಸಲಾಗಿದೆ. ಈಗಾಗಲೇ ೧,೩೪,೦೦೦ ಹೆಕ್ಟೇರ್‌ಗಿಂತ ಹೆಚ್ಚು ಭೂಮಿಯನ್ನು ೬೬ ವಿಶೇಷ ಆರ್ಥಿಕ ವಲಯದ ಹೆಸರಿನಲ್ಲಿ 'ಪರದೇಶಿ ಪ್ರದೇಶ'ಗಳನ್ನಾಗಿಸುವ ಕ್ರಿಯೆ ನಡೆದಿದೆ. ಈಗಾಗಲೇ ಇಂಥ ಹಲವಾರು ವಿವರಗಳು ಬಂದಿರುವುದರಿಂದ ಮತ್ತೆ ಅದನ್ನೇ ಹೇಳುವುದರಲ್ಲಿ ಅರ್ಥವಿಲ್ಲ. ಆದರೆ, ಈಗ ಈ ಕಾನೂನನ್ನು ಜಾರಿಗೆ ತರುವಾಗ ನಮ್ಮ ಸಂಸತ್‌ನಲ್ಲಿ ಎಡಪಕ್ಷಗಳನ್ನು ಹೊರತುಪಡಿಸಿ ಆಳುವ, ವಿರೋಧ ಪಕ್ಷಗಳಿಂದ ಯಾವ ರೀತಿಯ ವಿರೋಧವೂ ಬರಲಿಲ್ಲ ಎನ್ನುವುದು ಗಮನಿಸಬೇಕಾದ ಅಂಶ. ಇವತ್ತು ಈ ವಿಶೇಷ ಆರ್ಥಿಕ ವಲಯ ಕಾನೂನು – ೨೦೦೫ ಜಾರಿಯಲ್ಲಿದೆ. ಅದರ ಪರಿಣಾಮಗಳ ವಿಶ್ಲೇಷಣೆ ಸಾಕಷ್ಟು ಆಗಿದೆ. ಈಗ ದೇಶದ ಜನರ ಮುಂದಿರುವ, ಜನಪರ ಚಳುವಳಿಗಾರರ ಮುಂದಿರುವ ಪ್ರಶ್ನೆ ಏನೆಂದರೆ, ವಿಶೇಷ ಆರ್ಥಿಕ ವಲಯ ತೊಲಗಬೇಕು, ಇಲ್ಲವಾದರೆ ನಮ್ಮ ದೇಶದ ಪ್ರಭುತ್ವಕ್ಕೆ ಒಳಪಟ್ಟು, ಈ ನೆಲದ ನೀತಿಗಳಿಗನುಗುಣವಾಗಿ ಇರಬೇಕು ಎನ್ನುವುದು. ಆದರೆ ನಮ್ಮ ದೇಶ, ರಾಜ್ಯಗಳನ್ನಾಳುವವರೇ ಈ ಕಾನೂನನ್ನು ರೂಪಿಸಿ, ಎಲ್ಲಿಲ್ಲದ ಸಂಭ್ರಮದಿಂದ ಅದನ್ನು ಜಾರಿಗೊಳಿಸುತ್ತಿರುವಾಗ ಸರಕಾರಗಳಿಂದ ಇದೆಲ್ಲವನ್ನೂ ನಿರೀಕ್ಷಿಸುವುದು ಅಸಾಧ್ಯ. ಕಾರಣ ಇದೊಂದು ಜನಾಂದೋಲನವಾಗಿ ಮಾರ್ಪಡಬೇಕು. ಈ ಜನಾಂದೋಲನ ಕೈಗೆತ್ತಿಕೊಳ್ಳಬೇಕಾದ ವಿಷಯಗಳು ಈ ಕೆಳಗಿನಂತಿರಬೇಕೆಂಬುದು ನನ್ನ ಅನಿಸಿಕೆ :

* ಈ ವಿಶೇಷ ಆರ್ಥಿಕ ವಲಯ ಎಂಬ ಪರಿಕಲ್ಪನೆಯನ್ನು ಬದಲಿಸಬೇಕು. ವಿಶೇಷ ಆರ್ಥಿಕ ವಲಯದಿಂದ ಮಾತ್ರ ಕೈಗಾರಿಕೀಕರಣ ಸಾಧ್ಯ ಎಂಬ ನಂಬಿಕೆಗಳನ್ನು ನಮ್ಮ ಸರಕಾರಗಳು ಕೈಬಿಡಬೇಕು.
* ಹಾಗೊಮ್ಮೆ ಕೈಬಿಡಲು ಸಾಧ್ಯವಾಗದಿದ್ದರೆ ಈಗ ಅನಿಯಮಿತವಾಗಿ ಅನುಮೋದಿಸುತ್ತಿರುವ ವಿಶೇಷ ಆರ್ಥಿಕ ವಲಯಗಳ ಸಂಖ್ಯೆಯನ್ನು ಕಟ್ಟುನಿಟ್ಟಾಗಿ ನಿಯಂತ್ರಿಸಬೇಕು.
* ಕೈಗಾರಿಕೆಗೆ ಅಗತ್ಯವಿದ್ದಷ್ಟು ಭೂಮಿಯನ್ನು ಮಾತ್ರ ಕೊಡಬೇಕು. ಅಂತಹ ಭೂಮಿಯು ಸರಕಾರದ ಮಾಲಿಕತ್ವದಲ್ಲಿರಬೇಕು.

# ವಿಶೇಷ ಆರ್ಥಿಕ ವಲಯ (ಎಸ್.ಇ.ಝಡ್.)

**ಜಾಗತೀಕರಣದ ನೀತಿಯಿಂದಾಗಿ ನಮ್ಮ ದೇಶದ ಎಲ್ಲ ಕ್ಷೇತ್ರಗಳೂ ಅಂದರೆ ಕೃಷಿ, ಕೈಗಾರಿಕೆ, ಶಿಕ್ಷಣ, ಸಂಸ್ಕೃತಿ, ಮಾಧ್ಯಮಗಳಂತಹ ಎಲ್ಲ ಕ್ಷೇತ್ರಗಳೂ ಬಂಧಿತವಾಗಿದ್ದರೂ ಇದುವರೆಗೆ ಈ ಎಲ್ಲ ಕ್ಷೇತ್ರದ ಬಂಧಿತ ಜನ ಐಕ್ಯ ಹೋರಾಟ ನಡೆಸಿಲ್ಲ. ರೈತರು, ಕಾರ್ಮಿಕರು, ನೌಕರರು, ನಿರುದ್ಯೋಗಿ/ಉದ್ಯೋಗ ಕಳೆದುಕೊಂಡ ಯುವಕರು, ಆದಿವಾಸಿಗಳು, ಕೃಷಿಕೂಲಿಕಾರರು, ಗ್ರಾಮೀಣ ಜನತೆ, ದಲಿತರು, ವಿದ್ಯಾರ್ಥಿಗಳು, ಸಾಂಸ್ಕೃತಿಕ ಲೋಕದ ಜನರು, ಬುದ್ಧಿಜೀವಿಗಳು, ಪತ್ರಕರ್ತರು, ಮಹಿಳೆಯರು, ಕೊಳಗೇರಿ ಪ್ರದೇಶದ ಜನ, ಹೀಗೆ ಈ ದೇಶದ ಬಹುಸಂಖ್ಯಾತ ಜನತೆ ಏಕಕಾಲಕ್ಕೆ ಸಂಘಟಿತವಾಗಿ ಧ್ವನಿ ಎತ್ತಿದರೆ ಮಾತ್ರ ಇಂಥ ನೀತಿಗಳು ಖಂಡಿತವಾಗಿ ಜಾರಿಗೆ ಬರಲಾರವು.**

**ಆದರೆ ಒಂದೆಡೆ ಜಾತಿ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಸಂಘರ್ಷಗಳು, ಇನ್ನೊಂದೆಡೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದ ಸಂಘರ್ಷಕ್ಕಿಳಿದಿರುವ ಅಥವಾ ಪ್ರತ್ಯೇಕವಾಗಿರುವ ಜನಪರ ಚಳುವಳಿಗಳ ಸಂಘಟನೆಗಳು ಇಂಥ ಒಂದು ಐಕ್ಯ ಹೋರಾಟಕ್ಕೆ ಅಡ್ಡಿಯಾಗಿವೆ.**

* ಭೂಮಿ ಕೊಡುವಾಗ ಬಂಜರು, ಅತೀ ಕಡಿಮೆ ಬೆಳೆ ಬೆಳೆವ ಭೂಮಿಯನ್ನು ಮಾತ್ರ ಕೊಟ್ಟು ಫಲವತ್ತಾದ ಭೂಮಿ ಈ ವಿಶೇಷ ಆರ್ಥಿಕ ವಲಯದೊಳಗೆ ಬರದಂತೆ ನೋಡಿಕೊಳ್ಳಬೇಕು. ಹೊಸದಾಗಿ ಭೂಮಿ ಮಿತಿ ನೀತಿಯನ್ನು ರೂಪಿಸಬೇಕು.
* ರಾಜ್ಯದ ಪ್ರಾದೇಶಿಕ ಅಸಮಾನತೆಯನ್ನು ಗಮನದಲ್ಲಿರಿಸಿಕೊಂಡು ಹಿಂದುಳಿದ ಪ್ರದೇಶಗಳಲ್ಲಿ ಮಾತ್ರ ಅನುಮತಿ ಕೊಡಬೇಕು. ಅವಶ್ಯವಿದ್ದಲ್ಲಿ ಮೂಲಭೂತ ಅವಶ್ಯಕತೆಗಳನ್ನು (ರಸ್ತೆ, ವಿದ್ಯುತ್ ಇತ್ಯಾದಿ) ಒದಗಿಸಬಹುದು.
* (ಫಲವತ್ತಲ್ಲದ) ಭೂಮಿಯನ್ನು ಬಿಟ್ಟುಕೊಟ್ಟು ರೈತರಿಗೆ ಮತ್ತು ಆ ಪ್ರದೇಶದ ಭೂ ಅವಲಂಬಿತ ಕೃಷಿ ಕೂಲಿಕಾರರು ಮತ್ತಿತ್ತರರಿಗೆ ಬೇರೆಡೆ ಭೂಮಿಯನ್ನು ಅಥವಾ ಬಹಿರಂಗ ಮಾರುಕಟ್ಟೆ ಬೆಲೆಯನ್ನು ಪರಿಹಾರವಾಗಿ ಕೊಡಬೇಕು.
* ಭೂಮಿ ಕೊಟ್ಟ ರೈತರಿಗೆ, ಆಯಾ ಪ್ರದೇಶದ ಜನರಿಗೆ ಉದ್ಯೋಗ ಅವಕಾಶ ಕಡ್ಡಾಯವಾಗಿ ಮಾಡಿಕೊಡಬೇಕು.
* ಯಾವ ಪ್ರದೇಶದಲ್ಲಿ ಇಂಥ ಕೈಗಾರಿಕೆಗಳನ್ನು (ಎಸ್.ಇ.ಜ಼ಡ್) ಸ್ಥಾಪಿಸಲಾಗುವುದೋ ಆ ಪ್ರದೇಶದ ಪರಿಸರ ರಕ್ಷಣೆ ಮತ್ತು ಇತರೆ ಕೆಲವು ಸಾಮಾಜಿಕ ಜವಾಬ್ದಾರಿಯನ್ನು ಭೂಮಿಯನ್ನು ಕೊಳ್ಳುವವರು ನಿಭಾಯಿಸಬೇಕು.
* ವಿಶೇಷ ಆರ್ಥಿಕ ವಲಯದ ಪ್ರದೇಶವನ್ನು ಯಾವುದೇ ಖಾಸಗಿ ಭೂ ಮಾಫಿಯಾಗಳಿಗೆ ಕೊಡಕೂಡದು.
* ಭೂಮಿ ಕಳೆದುಕೊಂಡ ಜನರಿಗೆ ಪುನರ್ವಸತಿಗಾಗಿ ಸೂಕ್ತವಾದ ರಾಷ್ಟ್ರೀಯ ನೀತಿ ರೂಪಿಸಬೇಕು.
* ವಿಶೇಷ ಆರ್ಥಿಕ ವಲಯಗಳು 'ಪರದೇಶಿ ಪ್ರದೇಶ'ಗಳಾಗದಂತೆ ಸ್ಥಳೀಯ ಗ್ರಾಮ ಪಂಚಾಯಿತಿಯಿಂದ ರಾಷ್ಟ್ರಮಟ್ಟದವರೆಗಿನ ಎಲ್ಲ ಕಾನೂನು, ನೀತಿನಿಯಮಗಳು ಅವುಗಳಿಗೆ ಅನ್ವಯ ಆಗಬೇಕು. ಪರಿಸರ, ಕಾರ್ಮಿಕ-ಕೈಗಾರಿಕಾ ಕಾನೂನು, ಉತ್ಪಾದನೆ, ರಫ್ತು, ಕಚ್ಚಾ ಸರಕು ಆಮದು, ಎಲ್ಲಾ ರೀತಿಯ ತೆರಿಗೆ ಇವೇ ಮೊದಲಾದ ಕೆಲವು ಸೀಮಿತ ರಿಯಾಯಿತಿಗಳನ್ನು ಕೊಡಬಹುದೇ ಹೊರತು ಕಾನೂನು ಮತ್ತು ಸುಂಕ ವಿನಾಯಿತಿ ವಲಯಗಳನ್ನಾಗಿ ಮಾಡಕೂಡದು. ಈ ಮೂಲಕ ಈಗ ಘೋಷಿಸಿರುವ ವಿನಾಯಿತಿಯಿಂದ ಆಗಬಹುದಾದ ೧.೭೧ ಲಕ್ಷ ಕೋಟಿ ರೂ. ನಷ್ಟ ತಪ್ಪಿಸಬೇಕು.
* ಜನಸ್ನೇಹಿಯಾದ, ದೇಶಸ್ನೇಹಿಯಾದ ಕೈಗಾರಿಕಾ ನೀತಿ ರೂಪಿಸಲು, ಈಗಿರುವ ವಿಶೇಷ ಆರ್ಥಿಕ ವಲಯ ನೀತಿ ಪುನರ್ ರಚಿಸಲು, ವಿವಿಧ ವಲಯಗಳ ತಜ್ಞರನ್ನೊಳಗೊಂಡ ಸಮಿತಿ ರಚಿಸಬೇಕು. ಅದಕ್ಕನುಗುಣವಾಗಿ ಕಾವಲು ಸಮಿತಿಗಳನ್ನು ವಿವಿಧ ಹಂತಗಳಲ್ಲಿ ರಚಿಸಬೇಕು.

ಮೇಲಿನ ಈ ಎಲ್ಲ ನೀತಿ-ನಿಯಮಗಳಿಗೊಳಪಟ್ಟು ಯಾರಾದರೂ ಈ ದೇಶದಲ್ಲಿ ಕೈಗಾರಿಕೆ ಆರಂಭಿಸಿದರೆ ಖಂಡಿತ ಅದನ್ನು ಸ್ವಾಗತಿಸಬಹುದಾಗಿದೆ. ಆದರೆ ಈಗ ವಿಶೇಷ ಆರ್ಥಿಕ ವಲಯವು ಈ ಮೇಲಿನ ಆಶಯಗಳಿಗೆ ತದ್ವಿರುದ್ಧವಾಗಿರುವುದರಿಂದ ಈ ವಲಯಗಳು ಆಧುನಿಕ ಜಮೀನ್ದಾರರಂತೆ ಬರುವುದರಿಂದ, ಸರಕಾರಗಳೂ ಅವರ ಪರವಾಗಿರುವುದರಿಂದ ಜನಾಂದೋಲನ ಅನಿವಾರ್ಯವಾಗಿದೆ ಮತ್ತು ಅದು ಇಂದಿನ ಅವಶ್ಯಕತೆಯೂ ಆಗಿದೆ.

ಜಾಗತೀಕರಣದ ನೀತಿಯಿಂದಾಗಿ ಈ ದೇಶದ ಎಲ್ಲ ಕ್ಷೇತ್ರಗಳೂ ಅಂದರೆ ಕೃಷಿ, ಕೈಗಾರಿಕೆ, ಶಿಕ್ಷಣ, ಸಂಸ್ಕೃತಿ, ಮಾಧ್ಯಮಗಳಂತಹ ಎಲ್ಲ ಕ್ಷೇತ್ರಗಳೂ ಬಂಧಿತವಾಗಿದ್ದರೂ ಇದುವರೆಗೆ ಈ ಎಲ್ಲ ಕ್ಷೇತ್ರದ ಬಂಧಿತ ಜನ ಐಕ್ಯ ಹೋರಾಟ ನಡೆಸಿಲ್ಲ. ರೈತರು, ಕಾರ್ಮಿಕರು, ನೌಕರರು, ನಿರುದ್ಯೋಗಿ/ಉದ್ಯೋಗ ಕಳೆದುಕೊಂಡ ಯುವಕರು, ಆದಿವಾಸಿಗಳು, ಕೃಷಿ ಕೂಲಿಕಾರರು, ಗ್ರಾಮೀಣ ಜನತೆ, ದಲಿತರು, ವಿದ್ಯಾರ್ಥಿಗಳು, ಸಾಂಸ್ಕೃತಿಕ ಲೋಕದ ಜನರು, ಬುದ್ಧಿಜೀವಿಗಳು, ಪತ್ರಕರ್ತರು, ಮಹಿಳೆಯರು, ಕೊಳಗೇರಿ ಪ್ರದೇಶದ ಜನ, ಹೀಗೆ ಈ ದೇಶದ ಬಹುಸಂಖ್ಯಾತ ಜನತೆ ಏಕಕಾಲಕ್ಕೆ ಸಂಘಟಿತವಾಗಿ ಧ್ವನಿ ಎತ್ತಿದರೆ ಮಾತ್ರ ಇಂಥ ನೀತಿಗಳು ಖಂಡಿತವಾಗಿ ಜಾರಿಗೆ ಬರಲಾರವು. ಆದರೆ ಒಂದೆಡೆ ಜಾತಿ, ಧರ್ಮದ ಹೆಸರಿನಲ್ಲಿ ನಡೆಯುತ್ತಿರುವ ಸಂಘರ್ಷಗಳು, ಇನ್ನೊಂದೆಡೆ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಿಂದ ಸಂಘರ್ಷಕ್ಕಿಳಿದಿರುವ ಅಥವಾ ಪ್ರತ್ಯೇಕವಾಗಿರುವ ಜನಪರ ಚಳುವಳಿಗಳ ಸಂಘಟನೆಗಳು ಇಂಥ ಒಂದು ಐಕ್ಯ ಹೋರಾಟಕ್ಕೆ ಅಡ್ಡಿಯಾಗಿವೆ. ಆ ಕಾರಣಕ್ಕಾಗಿಯೇ ಜನ ಹೋರಾಟಕ್ಕಿಂತ ಹೊಂದಾಣಿಕೆಯೆ ವಾಸಿಯೆಂದು ಈ ಸರಕಾರಗಳ, ಬಹುರಾಷ್ಟ್ರೀಯ ಕಂಪನಿಗಳ ನೀತಿಗೆ ಶರಣಾಗುತ್ತಿದ್ದಾರೆ. ಪರ್ಯಾಯಕ್ಕಿಂತ ಪರಿಹಾರಕ್ಕಾಗಿ, ಹೆಚ್ಚಿನ ಪರಿಹಾರಕ್ಕಾಗಿ ಪ್ರಯತ್ನ ಪಡುತ್ತಾರೆ. ಬರೀ ವಿಶೇಷ ಆರ್ಥಿಕ ವಲಯವೇ ಅಲ್ಲದೆ ಇಡೀ ಜಾಗತೀಕರಣ ನೀತಿಯ ವಿರುದ್ಧ ಜನಾಂದೋಲನ ಇಂದಿನ ಅವಶ್ಯಕತೆಯಾಗಿದೆ ಮತ್ತು ಅದೊಂದೇ ಮಾರ್ಗವಾಗಿದೆ.

ಡಾ|| ಸಿದ್ಧನಗೌಡ ಪಾಟೀಲ
[illegible]



## ಹಾಯ್ಕುಗಳು

ರಾಷ್ಟ್ರಧ್ವಜದ ನೆರಳಿನಲ್ಲಿ ಬಿದ್ದಿದ್ದ
ಆ ಬಿಳಿ ಹೂಗಳು
ಬೆತ್ತಲೆ ಮಗುವಿನ ಒಡಲು ಕಂಡು
ನೆತ್ತರು ಕಕ್ಕುತ್ತವೆ.

'ಪೇರೆಂಟ್ಸ್ ಡೆ' ನಿಮಿತ್ತ
ಅನಾಥಾಲಯಗಳ ಆವರಣದಲ್ಲಿ ವಿಶೇಷ
ಪತ್ರಿಕಾ ಪುರವಣಿ ಕಣ್ಮನ ಸೆಳೆಯುತ್ತದೆ

ರಂಗು ರಂಗಿನ ಗುಲ್‌ಮೊಹರ್ ಹೂಗಳ ಮೋಹಿಸುತ್ತ
ರಸ್ತೆಬದಿಗಳಲ್ಲಿ ಏಕಾಂತ ಕಳೆಯುವ
ಅಂಚೆಪೆಟ್ಟಿಗೆಗಳಿಗೆ ಈಗ,
ವಿರಹ ಗೀತೆಗಳೆಂದರೆ ಹೆಚ್ಚು ಇಷ್ಟ!

ಮಂಜು ಶೆಟ್ಟರ್
ಕೇರಾಫ್ ಈರಪ್ಪ ಎಂ. ಕಂಬಳಿ, ಡಿ - [illegible], ಜೀವನ ಬೀಮಾ ನಗರ,
ಬೆಂಗಳೂರು - [illegible]

"ವ್ಯಕ್ತಿಯ ಉಡುಪು, ಆಚಾರ, ಜಾತಿ, ಧರ್ಮ ಯಾವುದೇ ಇರಲಿ ಅವರೆಲ್ಲ ಮಾನವರು. ಆದುದರಿಂದ ಸಹ ಭೋಜನ ಮತ್ತು ಅಂತರ್ಜಾತಿ ಮದುವೆಗೆ ಅಡ್ಡಿ ಬರಬಾರದು. ಇಡೀ ವಿಶ್ವಕ್ಕೆ ಒಂದೇ ಜಾತಿ, ಒಂದೇ ಧರ್ಮ, ಒಂದೇ ದೇವರು" ಎಂದು ಹೇಳಿದವರು ಶ್ರೀ ನಾರಾಯಣಗುರು. ಇವರು ಭಾರತ ದೇಶ ಕಂಡ ಮಾನವ ಕುಲದ ಶ್ರೇಷ್ಠ ದಾರ್ಶನಿಕರು. ಕತ್ತಲಲ್ಲಿ ಕರಗಿಹೋಗಿದ್ದವರನ್ನು ಬೆಳಕಿನ ಬದುಕಿನೆಡೆಗೆ ಸಾಗಿಸಲು ಶ್ರಮಿಸಿದ ಜ್ಞಾನಜ್ಯೋತಿ. ಈ ದೇಶದ ಬಹುಸಂಖ್ಯಾತ ಶೋಷಿತರ ವಿಮೋಚನೆಗೆ ತಮ್ಮ ಇಡೀ ಬದುಕನ್ನು ಮುಡುಪಾಗಿಟ್ಟವರು. ನೂರು ವರ್ಷಗಳ ಹಿಂದೆಯೇ ಜಾತಿ ಹಾಗೂ ಅಸ್ಪೃಶ್ಯತೆಯ ಕಳಂಕದ ವಿರುದ್ಧ ಹೋರಾಡಿದ ಕ್ರಾಂತಿಪುರುಷ. ಮಾನವೀಯತೆಯ ಮೌಲ್ಯವನ್ನು ಇಡೀ ಜಗತ್ತಿಗೆ ಸಾರಿ ಹೇಳಿದ ಮಹಾನ್ ಚಿಂತಕ. ಇದೇ ೨೬ನೇ ಆಗಸ್ಟ್ ೨೦೦೭ಕ್ಕೆ ನಾರಾಯಣ ಗುರುಗಳ ೧೫೩ನೇ ಜನ್ಮದಿನೋತ್ಸವ. ಈ ಸಂದರ್ಭದಲ್ಲಿ ಅವರ ಹಲವು ಸಮಾಜಪರ ಹಾಗೂ ಜೀವಪರ ಚಿಂತನೆಗಳನ್ನು ಮೆಲುಕುಹಾಕುವುದು ಸಮಂಜಸವಾದದ್ದಾಗಿದೆ. ನಾರಾಯಣಗುರುಗಳು ಭೌತಿಕವಾಗಿ ಇಂದು ನಮ್ಮೊಟ್ಟಿಗಿಲ್ಲದಿದ್ದರೂ, ಅವರು ದರ್ಶಿಸಿದ ತಾತ್ವಿಕ ಸಂದೇಶಗಳು ನೂರು ವರ್ಷಕ್ಕೂ ಮಿಕ್ಕಿ ಜೀವಂತವಾಗಿರುವುದನ್ನು ಇಂದಿಗೂ ಕಾಣಬಹುದಾಗಿದೆ ಹಾಗೂ ಸಾರ್ವಕಾಲಿಕ ಸತ್ಯಗಳಾಗಿವೆ.

ನಾರಾಯಣಗುರು ೨೬ನೇ ಆಗಸ್ಟ್ ೧೮೫೪ರಂದು ಕೇರಳದ ತಿರುವನಂತಪುರದ ಹತ್ತಿರವಿರುವ 'ಚಂಬಳಂತಿ' ಎಂಬ ಹಳ್ಳಿಯಲ್ಲಿ ಜನಿಸಿದರು. ತಂದೆ ಮಾಡಾನ್ ಆಶಾನ್. ತಾಯಿ ಕುಟ್ಟಿಯಮ್ಮ. ಬಾಲ್ಯದಲ್ಲಿ ಎಲ್ಲರ ಪ್ರೀತಿಯ 'ನಾಣು' ಆಗಿದ್ದ ಇವರದು ಮಧ್ಯಮವರ್ಗದ ಮನೆತನ. ಬೆಳೆಯುವ ಸಿರಿ ಮೊಳಕೆಯಲ್ಲಿ ಎಂಬಂತೆ ನಾರಾಯಣಗುರು ಬಾಲ್ಯದಲ್ಲಿಯೇ ತಮ್ಮ ಕ್ರಿಯಾಶೀಲ ಬೌದ್ಧಿಕತೆಯಿಂದ ಎಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದರು. ಯಾವುದೇ ವಿಷಯದ ಹಿಂದಿರುವ ಸತ್ಯವನ್ನು ಶೋಧಿಸಿ ಚಿಂತನೆಗೊಳಪಡಿಸುವ ಪ್ರವೃತ್ತಿ ಇವರದು. ಸ್ವಭಾವತಃ ಅಂತರ್ಮುಖಿಯೂ ಮಿತಭಾಷಿಯೂ ಆದ ಇವರು ತಪ್ಪು ಕಂಡುಬಂದಲ್ಲಿ ನೇರವಾಗಿ ಖಂಡಿಸುತ್ತಿದ್ದರು. ಅಸಹಾಯಕರು, ನೊಂದವರು, ಶೋಷಿತರು ಹಾಗೂ ಬಡವರನ್ನು ಕಂಡರೆ ಎಲ್ಲಿಲ್ಲದ ಅಕ್ಕರೆ. ಸಮಾಜದಲ್ಲಿನ ರೋಗಗ್ರಸ್ತ ಅಸಮಾನತೆ, ಅಜ್ಞಾನ, ಜಾತೀಯತೆ ಹಾಗೂ ಅಂಧಕಾರದ ವಿರುದ್ಧ ಬಂಡಾಯದ ಮನಃಸ್ಥಿತಿಯನ್ನು ಬಾಲ್ಯದಲ್ಲೇ ಮೈಗೂಡಿಸಿಕೊಂಡ ಇವರು ಜಾತ್ಯತೀತ, ಧರ್ಮಾತೀತ ಸಮಸಮಾಜಕ್ಕಾಗಿ ಹಂಬಲಿಸಿದವರು.

# ಮಹಾನ್ ಮಾನವತಾವಾದಿ ಶ್ರೀ ನಾರಾಯಣಗುರು

ಡಾ॥ ಅಪ್ಪಗೆರೆ ಡಿ. ಸೋಮಶೇಖರ

ನಾರಾಯಣಗುರು, ಜಾತಿ ಮತ್ತು ಅಸ್ಪೃಶ್ಯತೆ ಮಾನವಕುಲದ ನಿಜವಾದ ಶತ್ರುಗಳು ಎಂಬುದನ್ನು ಅರಿತಿದ್ದರು. ತಮ್ಮ ಮನೆಯ ಹಿರಿಯರೇ ಜಾತಿಭೇದ ಮಾಡುವುದನ್ನು ಕಂಡಾಗ ಉರಿದುಬೀಳುತ್ತಿದ್ದರು. ಈಳವ ಜಾತಿಗೆ ಸೇರಿದ ಇವರ ಮನೆಯವರು ತಮಗಿಂತ ಜಾತಿಯಲ್ಲಿ ಕೀಳಾದ ಪುಲಯ, ಪರಯ ಜನಗಳನ್ನು ಮುಟ್ಟಿಸಿಕೊಳ್ಳುತ್ತಿರಲಿಲ್ಲ. ಇದನ್ನು ಗಮನಿಸಿದ್ದ ಬಾಲಕ ನಾಣು, ಪುಲಯರನ್ನು ಮುಟ್ಟಿಬಂದು ಅದೇ ಕೈಯಿಂದ ತಮ್ಮ ಮನೆಯ ಹೆಂಗಸರನ್ನು ಮುಟ್ಟಿ, "ಪುಲಯರನ್ನು ಸ್ಪರ್ಶಿಸಿದ ಕೈಯಿಂದಲೇ ನಿಮ್ಮನ್ನು ಮುಟ್ಟಿದೆ. ಈಗ ಎಲ್ಲಿದೆ ಮೈಲಿಗೆ" ಎಂದು ನಿಂದಿಸುತ್ತಿದ್ದರು. ಇದು ಅವರಿಗಿದ್ದ ಜಾತಿವಿರೋಧಿ ಮನಃಸ್ಥಿತಿಯನ್ನು ಪರಿಚಯಿಸುತ್ತದೆ.

ನಾರಾಯಣಗುರುಗಳ ವೈಚಾರಿಕ ಚಿಂತನೆಯಿಂದ ಪ್ರಭಾವಿತಗೊಂಡವರಲ್ಲಿ ಮಹಾತ್ಮಾ ಗಾಂಧೀಜಿ, ಆಚಾರ್ಯ ವಿನೋಬ ಭಾವೆ, ರವೀಂದ್ರನಾಥ ಠಾಗೂರ್, ಕೇರಳದ ಮಹಾಕವಿ ಕುಮಾರನ್ ಆಶಾನ್, ಫ್ರೆಂಚ್ ತತ್ತ್ವಜ್ಞಾನಿ ರೋಮ್ಯಾನ್ ರೋಲ್ಯಾ ಪ್ರಮುಖರು. ಗಾಂಧೀಜಿಯವರು ೧೨ನೇ ಮಾರ್ಚ್ ೧೯೨೫ರಂದು ಶಿವಗಿರಿಯಲ್ಲಿ ನಾರಾಯಣಗುರುಗಳನ್ನು ಭೇಟಿಮಾಡಿ ಚರ್ಚಿಸಿದ್ದು ಚಾರಿತ್ರಿಕವಾಗಿ ಮಹತ್ವದ ಘಟನೆಯಾಗಿದೆ. ನಾರಾಯಣಗುರು ಗಾಂಧೀಜಿಯವರನ್ನು ಕುರಿತು "ದಲಿತರನ್ನು ಜಾತಿಯ ಸಂಕೋಲೆಯಿಂದ ಬಿಡಿಸುವುದು ರಾಜಕೀಯ ಸ್ವಾತಂತ್ರ್ಯದಷ್ಟೆ ಪ್ರಮುಖವಾದದ್ದು" ಎಂದು ಹೇಳಿದ ಮಾತು ಜ್ವಲಂತ ಸತ್ಯವಾಗಿದೆ. ಸ್ವತಃ ಗಾಂಧೀಜಿಯವರೇ, "ಪೂಜ್ಯ ನಾರಾಯಣಗುರುಗಳನ್ನು ಸಂದರ್ಶಿಸಿದ್ದು ನನ್ನ ಜೀವನದ ಸೌಭಾಗ್ಯ" ಎಂದು ಹೇಳಿಕೊಂಡಿದ್ದಾರೆ.

ಶೋಷಿತರ ಬದುಕಿನ ಬವಣೆಯನ್ನು ಕಣ್ಣಾರೆ ಕಂಡು ಕಂಗಾಲದ ನಾರಾಯಣಗುರುಗಳು, ವೈಯಕ್ತಿಕ ಸುಖ-ಭೋಗಗಳನ್ನು ತ್ಯಜಿಸಿ, ಜಂಗಮ ಸನ್ಯಾಸಿಯಾಗಿ ದಲಿತರ ಉದ್ಧಾರಕ್ಕಾಗಿ ತಮ್ಮ ಇಡೀ ಜೀವನವನ್ನೇ ತ್ಯಾಗ ಮಾಡಿದರು. ಜೀತಪದ್ಧತಿ ಜೀವಂತವಾಗಿದ್ದ ಕೇರಳದಾದ್ಯಂತ ಅಸ್ಪೃಶ್ಯತೆಯ ಕಾರಣಕ್ಕಾಗಿ ದಲಿತರಿಗೆ ಸಾರ್ವಜನಿಕ ಬಾವಿ, ಕೆರೆ, ದೇವಸ್ಥಾನ ಪ್ರವೇಶವನ್ನು ನಿಷೇಧಿಸಲಾಗಿತ್ತು. ಇದನ್ನು ಮನಗಂಡ ನಾರಾಯಣ ಗುರು, "ನಿಮಗೆ ದೇವಸ್ಥಾನದ ಹತ್ತಿರ ಹೋಗಲು ಧೈರ್ಯವಿಲ್ಲದಿದ್ದರೆ, ಮೇಲ್ಜಾತಿಯವರು ನಿಮ್ಮನ್ನು ದೇವಸ್ಥಾನಕ್ಕೆ ಬಿಡಲು ನಿರಾಕರಿಸಿದರೆ ಚಿಂತಿಸಬೇಡಿ. ದೇವಸ್ಥಾನವನ್ನೇ ನಿಮ್ಮ ಬಳಿಗೆ ತಂದುಕೊಡುತ್ತೇನೆ" ಎಂದು ದಲಿತರಿಗೆ ಅಭಯವಿತ್ತರು. ಆಡಿದ ಮಾತಿನಂತೆ ೧೮೮೮ರಲ್ಲಿ ತಿರುವನಂತಪುರದಿಂದ ೧೩ ಮೈಲು ದೂರದಲ್ಲಿರುವ ಅರವಿಪುರಂನಲ್ಲಿ ಶಿವಲಿಂಗ



ಪ್ರತಿಷ್ಠಾಪಿಸಿ ದಲಿತರಿಗಾಗಿಯೇ ಪ್ರತ್ಯೇಕ ದೇವಸ್ಥಾನವನ್ನು ನಿರ್ಮಿಸಿದರು. ಇದನ್ನು ವಿರೋಧಿಸಿದ ಸಂಪ್ರದಾಯವಾದಿಗಳಿಗೆ: "ನಾನು ಪ್ರತಿಷ್ಠಾಪಿಸಿರುವುದು ಕೆಳಜಾತಿಯ ಈಳವರ ಶಿವನನಲ್ಲದೆ, ಬ್ರಾಹ್ಮಣರ ಶಿವನನ್ನಲ್ಲವಲ್ಲ?" ಎಂಬುದಾಗಿ ಸವಾಲೆಸೆದರು. ಮುಂದೆ ಅರವಿಪುರಂ ಪುಣ್ಯ ಕ್ಷೇತ್ರವಾಗಿ ಜನಪ್ರಿಯವಾಯಿತು. ಈ ಕ್ಷೇತ್ರದ ವ್ಯವಹಾರವನ್ನು ನೋಡಿಕೊಳ್ಳಲು 'ಪಾವಟ್ಟು ಯೋಗಂ' ಎಂಬ ಸಂಘವನ್ನು ಸ್ಥಾಪಿಸಿ, ದಲಿತರನ್ನು ಆ ಸಂಘದ ಪದಾಧಿಕಾರಿಗಳನ್ನಾಗಿ ನೇಮಿಸಿದರು. ಶಿಕ್ಷಣದಿಂದ ಮಾತ್ರ ಜಾತೀಯತೆ, ಅಸ್ಪೃಶ್ಯತೆ, ಅಜ್ಞಾನ, ಅಂಧಕಾರವನ್ನು ತೊಡೆಯಲು ಸಾಧ್ಯ ಎಂಬುದನ್ನು ಅರಿತುಕೊಂಡ ನಾರಾಯಣಗುರು ಅರವಿಪುರಂ ಕ್ಷೇತ್ರದಲ್ಲಿ ವಿದ್ಯಾಲಯವನ್ನು ಸ್ಥಾಪಿಸಿ, ದಲಿತರು, ಬಡವರಿಗೆ ಉಚಿತ ಶಿಕ್ಷಣ ವ್ಯವಸ್ಥೆಯನ್ನು ಕಲ್ಪಿಸಿದರು. ಜೊತೆಗೆ ನೇಯ್ಗೆ ಕೈಗಾರಿಕೆಯೊಂದನ್ನು ಸ್ಥಾಪಿಸಿ ದಲಿತರಿಗೆ ಉದ್ಯೋಗಾವಕಾಶವನ್ನು ಸೃಷ್ಟಿಸಿದರು.

ಸುಮಾರು ಎರಡು ವರ್ಷಗಳ ಕಾಲ

ಕನ್ಯಾಕುಮಾರಿ, ಕುಳಚ್ಚಲ್, ಕುರಿಕುಳಂ, ಪೂವಾರ್, ಕೋವಳಂ, ತಿರುವನಂತಪುರಂ, ಅಂಚುತೆಂಗು ಮೊದಲಾದ ಊರು ಗಳಲ್ಲಿನ ದಲಿತರ, ಬಡವರ, ಕೂಲಿಕಾರ್ಮಿಕರ ಜೀವನ ವನ್ನು ಅಧ್ಯಯನ ಮಾಡಿ, ಅವರೆಲ್ಲ ನೋವು-ನಲಿವುಗಳನ್ನು ನಾರಾಯಣಗುರು ನೇರವಾಗಿ ಅನುಭವಿಸಿದವರು. ಆ ಕಾರಣಕ್ಕಾಗಿ ಕೇರಳದ ವರ್ಕಲದ ಶಿವಗಿರಿ ಬೆಟ್ಟದಲ್ಲೊಂದು ಆಶ್ರಮವನ್ನು ಸ್ಥಾಪಿಸಿ, ಬಡವರ ಮಕ್ಕಳಿಗಾಗಿ ಇಂಗ್ಲಿಷ್, ಸಂಸ್ಕೃತದ ಹಗಲು ಮತ್ತು ರಾತ್ರಿ ಶಾಲೆಗಳನ್ನು ಆರಂಭಿಸಿದರು. ಜೊತೆಗೆ ಆ ಮಕ್ಕಳಿಗೆ ಉಚಿತ ಊಟ, ವಸತಿ ಸೌಕರ್ಯಗಳನ್ನು ಕಲ್ಪಿಸಿದರು. ಮಕ್ಕಳ ಜ್ಞಾನಾರ್ಜನೆಗಾಗಿ ಗ್ರಂಥಾಲಯಗಳನ್ನು ತೆರೆದರು. ಇವರು ಸ್ಥಾಪಿಸಿದ ದೇವಸ್ಥಾನಗಳು ಕೇವಲ ಯಾತ್ರಾಸ್ಥಳ ಗಳಾಗಿರದೆ, ಸಾವಿರಾರು ಬಡಮಕ್ಕಳಿಗೆ ಶಿಕ್ಷಣವನ್ನು ನೀಡುವ ವಿದ್ಯಾಕೇಂದ್ರಗಳಾಗಿದ್ದವು. ಹೀಗೆ ಕೇರಳ, ತಮಿಳುನಾಡು, ಕರ್ನಾಟಕದ ಮಂಗಳೂರು ಮುಂತಾದ ಕಡೆಗಳಲ್ಲಿ ದಲಿತರಿಗಾಗಿ ದೇವಸ್ಥಾನ, ಶಾಲೆ, ವಿದ್ಯಾರ್ಥಿನಿಲಯ, ಗ್ರಂಥಾಲಯ, ಆಸ್ಪತ್ರೆಗಳನ್ನು ಸ್ಥಾಪಿಸಿದ ಮೊಟ್ಟಮೊದಲ ಭಾರತೀಯ ಶ್ರೀ ನಾರಾಯಣಗುರು.




ದೇವರಿಗೆ ಹರಕೆ ಸಲ್ಲಿಸಿ ತಮ್ಮ ಜವಾಬ್ದಾರಿ ಮರೆತು ಸುಮ್ಮನೆ ಕೂರುವ ಸೋಮಾರಿಗಳನ್ನು ನಾರಾಯಣಗುರು ಎಂದೂ ಸಹಿಸುತ್ತಿರಲಿಲ್ಲ. ಈ ಹಿಂದೆ ದೇವಸ್ಥಾನಗಳಲ್ಲಿ ಆಚರಣೆಯಲ್ಲಿದ್ದ ಪ್ರಾಣಬಲಿ, ಆಡಂಬರದ ದುಂದುವೆಚ್ಚವನ್ನು ಖಂಡಿಸಿ ತಡೆಗಟ್ಟಿದ್ದರು. ಹಾಗೆಯೇ ತಮ್ಮ ನಿಶ್ಚಲ ಹೋರಾಟದಿಂದಾಗಿ ತ್ರಿಶೂರು ಕೂರ್ಕಂಚೇರಿಯಲ್ಲಿರುವ ಈಳವರ ದೇವಸ್ಥಾನಕ್ಕೆ ಬಡಗಿ, ಕಮ್ಮಾರ, ಅಕ್ಕಸಾಲಿಗ, ಹೊಲೆಯ, ಪರಯರಿಗೆ ಪ್ರವೇಶವನ್ನು ಕಲ್ಪಿಸಿದರು. ಅರವಿಪುರಂ ದೇವಸ್ಥಾನದಲ್ಲಿ ನಾರಾಯಣಗುರು ಬರೆಸಿರುವ :

''ಜಾತಿಭೇದ ಮತದ್ವೇಷ
ಒಂದೂ ಇಲ್ಲದೆ ಸರ್ವರೂ
ಸೋದರತ್ವದಿ ಬಾಳುವ
ಮಾದರಿ ಸ್ಥಾನವು ಇದು''

ಎಂಬ ಸಾಲುಗಳು ಅವರಲ್ಲಿದ್ದ ಉದಾತ್ತ ಮನುಷ್ಯತ್ವವನ್ನು ಪರಿಚಯಿಸುತ್ತವೆ.

ಕೇರಳದಾದ್ಯಂತ ಅಸ್ಪೃಶ್ಯತಾಚರಣೆಯು ನಿರ್ಮೂಲನೆಯಾಗಿದ್ದು ಹಾಗೂ ಶೋಷಿತರು ಆತ್ಮಾಭಿಮಾನದಿಂದ ಪ್ರಗತಿಯತ್ತ ಸಾಗಿದ್ದು ನಾರಾಯಣಗುರುಗಳ ಹೋರಾಟದ ಪರಿಶ್ರಮದಿಂದಾಗಿ. ದಲಿತರ ಮೇಲಿನ ದೌರ್ಜನ್ಯಕ್ಕೆ ಅವರಲ್ಲಿರುವ ಅಜ್ಞಾನ, ಮೌಢ್ಯ, ಕುಡಿತದ ಚಟ ಹಾಗೂ ಅಸ್ಪೃಶ್ಯತಾಚರಣೆಯೇ ಕಾರಣ ಎಂಬುದನ್ನು ಅರಿತಿದ್ದ ನಾರಾಯಣಗುರು ಆ ಎಲ್ಲಾ ಪಿಡುಗುಗಳ ವಿರುದ್ಧ ಹೋರಾಡಿ ಯಶಸ್ವಿಯಾದರು. ''ಆರೋಗ್ಯವೇ ದೊಡ್ಡ ಸಂಪತ್ತು. ಮದ್ಯಸೇವನೆಯಿಂದ ಆರೋಗ್ಯ ಕೆಡಿಸಿಕೊಳ್ಳಬೇಡಿ. ಮದ್ಯವು ವಿಷ. ಅದನ್ನು ಕುಡಿಯಬೇಡಿ, ತಯಾರಿಸಬೇಡಿ, ಹಂಚಬೇಡಿ. ಕುಡಿತಕ್ಕೆ ವಿನಿಯೋಗಿಸುವ ಹಣವನ್ನು ಉಳಿಸಿ ನಿಮ್ಮ ಮಕ್ಕಳಿಗೆ ವಿದ್ಯೆ ಕೊಡಿಸಿ'' ಎಂದು ದಲಿತರಿಗೆ ಸಂದೇಶ ನೀಡಿದರು.

''ನಾವೆಲ್ಲರೂ ಒಂದೇ ಜಾತಿಗೆ ಸೇರಿದವರು. ಅದುವೆ ಮನುಷ್ಯ ಜಾತಿ. ಜಾತೀಯತೆ ಮನುಷ್ಯನ ಸ್ವಾತಂತ್ರ್ಯಕ್ಕೆ ಧಕ್ಕೆ ತರುತ್ತದೆ. ಆತನನ್ನು ಅಜ್ಞಾನಿಯನ್ನಾಗಿ ಮಾಡುತ್ತದೆ. ಧರ್ಮ ಎನ್ನುವುದು ಇಡೀ ಮಾನವ ಕುಲ ಯಾವುದೇ ಆತಂಕವಿಲ್ಲದೆ ಆಚರಿಸುವಂತಹುದು. ಅದುವೇ ವಿಶ್ವಮಾನವ ಧರ್ಮ. ನಿಜವಾದ ಧರ್ಮ ಮನುಷ್ಯರೆಲ್ಲರನ್ನು ಪ್ರಗತಿಯ ದಾರಿಯಲ್ಲಿ ನಡೆಸಬೇಕು. ಮನುಷ್ಯ ಮನುಷ್ಯನನ್ನೆ ಕೊಲ್ಲುವುದು ಅಧರ್ಮ. ಎಲ್ಲಾ ಧರ್ಮಗ್ರಂಥಗಳ ಸಾರವನ್ನು ಜನರಿಗೆ ತಿಳಿಹೇಳಿದಾಗ ಜಾತಿ-ಧರ್ಮಾಂಧತೆಯ ಕಲಹ ಕೊನೆಗಾಣುತ್ತದೆ. ಮತ ಯಾವುದಾದರೇನು ಮನುಷ್ಯ ಒಳ್ಳೆಯವನಾದರೆ ಸಾಕು. ಮನುಷ್ಯರಿಗೆಲ್ಲ ಒಬ್ಬನೇ ದೇವರು'' ಎಂಬ ತತ್ತ್ವಗಳನ್ನು ನಾರಾಯಣಗುರು ಸಮಾಜಕ್ಕೆ ಸಾರಿ ಹೇಳಿದರು. ಇವರು ೧೯೨೧ರಲ್ಲಿ ಸಂಘಟಿಸಿದ 'ಅಖಿಲ ಕೇರಳ ಸೋದರ ಸಮ್ಮೇಳನ' ಹಾಗೂ ೧೯೨೪ರಲ್ಲಿ ನಡೆಸಿದ 'ಸರ್ವಧರ್ಮ ಸಮ್ಮೇಳನ'ಗಳು ಇದಕ್ಕೆ ಸಾಕ್ಷಿಯಾಗಿವೆ. ಮಹಿಳೆಯರ ಬಗೆಗೆ ತುಂಬು ಕಳಕಳಿ ಇಟ್ಟುಕೊಂಡಿದ್ದ ಇವರು, ಮಹಿಳೆಯರಿಗೆ ಸಮಾನ ಶಿಕ್ಷಣ, ವಿಧವಾ ಪುನರ್ ವಿವಾಹ, ಬಹುಪತ್ನಿತ್ವ ನಿಷೇಧ ಕುರಿತು ಜನರಲ್ಲಿ ಜಾಗೃತಿ ಮೂಡಿಸಿದರು. ಔದಾರ್ಯ-ಪ್ರೇಮ-ಅನುಕಂಪ ಜೀವನದ ಮೂರು ಮೌಲ್ಯಗಳು. ಪ್ರೇಮವಿಲ್ಲದ ಬದುಕು ಬರಡು. ಅಹಿಂಸೆ-ಸ್ನೇಹ-ಒಗ್ಗಟ್ಟು ಮಾನವ ಸಮಾಜದ ಮೂಲ ತತ್ತ್ವ. ಶೋಷಿತರು ಆರ್ಥಿಕ ಸ್ವಾವಲಂಬನೆ, ಸ್ವಾಭಿಮಾನ, ಆತ್ಮ ವಿಶ್ವಾಸವನ್ನು ಮೈಗೂಡಿಸಿಕೊಳ್ಳಬೇಕೆಂಬುದು ನಾರಾಯಣ ಗುರುಗಳ ದೇಶಾತೀತ ಮೌಲ್ಯಗಳು.

ನಾರಾಯಣಗುರುಗಳ ವೈಚಾರಿಕ ಚಿಂತನೆಯಿಂದ ಪ್ರಭಾವಿತಗೊಂಡವರಲ್ಲಿ ಮಹಾತ್ಮಾ ಗಾಂಧೀಜಿ, ಆಚಾರ್ಯ ವಿನೋಬ ಭಾವೆ, ರವೀಂದ್ರನಾಥ ಠಾಗೂರ್, ಕೇರಳದ ಮಹಾಕವಿ ಕುಮಾರನ್, ಆಶಾನ್, ಫ್ರೆಂಚ್ ತತ್ತ್ವಜ್ಞಾನಿ ರೋಮ್ಯಾನ್ ರೋಲ್ಯಾ ಪ್ರಮುಖರು. ಗಾಂಧೀಜಿಯವರು ೧೨ನೇ ಮಾರ್ಚ್ ೧೯೨೫ರಂದು ಶಿವಗಿರಿಯಲ್ಲಿ ನಾರಾಯಣಗುರುಗಳನ್ನು ಭೇಟಿಮಾಡಿ ಚರ್ಚಿಸಿದ್ದು ಚಾರಿತ್ರಿಕವಾಗಿ ಮಹತ್ವದ ಘಟನೆಯಾಗಿದೆ. ನಾರಾಯಣಗುರು ಗಾಂಧೀಜಿಯವರನ್ನು ಕುರಿತು ''ದಲಿತರನ್ನು ಜಾತಿಯ ಸಂಕೋಲೆಯಿಂದ ಬಿಡಿಸುವುದು ರಾಜಕೀಯ ಸ್ವಾತಂತ್ರ್ಯದಷ್ಟೆ ಪ್ರಮುಖ ವಾದದ್ದು'' ಎಂದು ಹೇಳಿದ ಮಾತು ಜ್ವಲಂತ ಸತ್ಯವಾಗಿದೆ. ಸ್ವತಃ ಗಾಂಧೀಜಿ ಯವರೇ, ''ಪೂಜ್ಯ ನಾರಾಯಣಗುರುಗಳನ್ನು ಸಂದರ್ಶಿಸಿದ್ದು ನನ್ನ ಜೀವನದ ಸೌಭಾಗ್ಯ'' ಎಂದು ಹೇಳಿಕೊಂಡಿದ್ದಾರೆ.

ನಾರಾಯಣಗುರು ಅವರು ಸಮಾಜ ಸುಧಾರಕರಾಗಿ, ದಾರ್ಶನಿಕರಾಗಿ ವಿಶ್ವಮನ್ನಣೆ ಪಡೆದ ವಿಶ್ವಗುರು, ಹಿಂದೂ, ಕ್ರೈಸ್ತ, ಮುಸ್ಲಿಂ ಹಾಗೂ ಬೌದ್ಧ ಧರ್ಮೀಯರೆಲ್ಲರೂ ಇವರ ಶಿಷ್ಯರು, ಅನುಯಾಯಿಗಳಾಗಿದ್ದರು. ಅಮೆರಿಕಾ, ಶ್ರೀಲಂಕ ಮುಂತಾದ ದೇಶಗಳಲ್ಲಿ ಇವರ ಹೆಸರಿನಲ್ಲಿ ಸಂಘಸಂಸ್ಥೆಗಳು ಹುಟ್ಟಿಕೊಂಡು ಕಾರ್ಯ ನಿರ್ವಹಿಸುತ್ತಿವೆ. ಅವುಗಳಲ್ಲಿ ೧೯೨೩ರಲ್ಲಿ ಅಮೆರಿಕಾದ ಪೋರ್ಟ್ ಲ್ಯಾಂಡ್‌ನಲ್ಲಿ ಸ್ಥಾಪಿಸಲ್ಪಟ್ಟ 'ನಾರಾಯಣಗುರುಕುಲ' ಪ್ರಮುಖವಾದದ್ದು. ಸ್ವತಃ ನಾರಾಯಣಗುರುಗಳೇ ೧೯೦೩ ಜನವರಿ ೪ರಂದು ಸ್ಥಾಪಿಸಿದ 'ಶ್ರೀ ನಾರಾಯಣ ಧರ್ಮ ಪರಿಪಾಲನಾ ಯೋಗಂ' (ಎಸ್.ಎನ್.ಡಿ.ಪಿ.) ಶೋಷಿತರ ಹಿತಕ್ಕಾಗಿ ದುಡಿಯುವ ಬಹುದೊಡ್ಡ ಸಂಸ್ಥೆಯಾಗಿ ಬೆಳೆದಿದೆ. ದೇಶವಿದೇಶಗಳಲ್ಲಿ ಇದರ ಉಪಶಾಖೆಗಳೂ ಕಾರ್ಯನಿರತವಾಗಿವೆ.

ಸಂಸ್ಕೃತ, ಮಲೆಯಾಳಂ, ತಮಿಳು ಭಾಷೆ ಮತ್ತು ಸಾಹಿತ್ಯದಲ್ಲಿ ಪಾಂಡಿತ್ಯವನ್ನು ಗಳಿಸಿದ್ದ ನಾರಾಯಣಗುರು ೧೪೪ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. 'ದರ್ಶನಮಾಲಾ, ಆತ್ಮೋಪದೇಶ ಶತಕಂ, ಅರಿವು, ಜಾತಿಮೀಮಾಂಸ, ಧರ್ಮಂ, ಜಾತಿಲಕ್ಷಣಂ, ಪ್ರಪಂಚ ಶುದ್ಧೀದಶಕಂ, ಜಾತಿ ನಿರ್ಣಯಂ, ಜೀವಕಾರುಣ್ಯ ಪಂಚಕಂ – ಇವರ ಪ್ರಮುಖ ಕೃತಿಗಳು. ಬದುಕಿದಂತೆ ಬರೆದ, ಬರೆದಂತೆ ಬದುಕಿದ ನಾರಾಯಣಗುರು ೧೯೨೮ರ ಸೆಪ್ಟೆಂಬರ್ ೨೧ರಂದು ಮರಣಹೊಂದಿದರು. ಇವರ ಸಾಧನೆಯ ಕುರುಹಾಗಿ ೧೯೭೭ನೇ ವರ್ಷವನ್ನು 'ಶ್ರೀ ನಾರಾಯಣ ಅಂತರ ರಾಷ್ಟ್ರೀಯ ವರ್ಷ'ವನ್ನಾಗಿ ದೇಶವಿದೇಶಗಳಲ್ಲಿ ಆಚರಿಸಲಾಯಿತು. ಇದೇ ಸಂದರ್ಭದಲ್ಲಿ ಭಾರತ ಸರ್ಕಾರವು ನಾರಾಯಣಗುರುಗಳ ಗೌರವಾರ್ಥ ಅಂಚೆಚೀಟಿಯೊಂದನ್ನು ಹೊರತಂದಿತು. ಭ್ರಷ್ಟಾಚಾರರಹಿತ ಮತ್ತು ಸಂಪೂರ್ಣ ಸಾಕ್ಷರತಾ ರಾಜ್ಯವಾದ ಕೇರಳ, ನಾರಾಯಣಗುರುಗಳ ಸಾಧನೆಗೆ ಜೀವಂತ ಸಾಕ್ಷಿ. ತಮ್ಮ ಜೀವಿತದ ಕೊನೆಯವರೆಗೂ ಬಹುಸಂಖ್ಯಾತ ಶೋಷಿತರ ಪರ ದುಡಿದ ನಾರಾಯಣಗುರುಗಳ ತಾತ್ವಿಕ ಚಿಂತನೆ ಇಂದಿನ ಯುವ ಪೀಳಿಗೆಗೆ ಆದರ್ಶವಾಗಬೇಕಿದೆ.

ಡಾ|| ಅಪ್ಪಗೆರೆ ಡಿ. ಸೋಮಶೇಖರ
ಕನ್ನಡ ಉಪನ್ಯಾಸಕ, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ವಾಸ್ತು ಭೂತ

**ಅಂ**ತೂ ಇಂತೂ ಭೀಮಯ್ಯನವರು ಹೌಸಿಂಗ್ ಬೋರ್ಡ್ ಕಾಲೋನಿಯಲ್ಲಿ ಒಂದು ಮನೆಯನ್ನು ಕಟ್ಟಿಬಿಟ್ಟರು! ಭಾರೀ ದೊಡ್ಡದೂ ಅಲ್ಲದ ತೀರಾ ಸಣ್ಣದೂ ಅಲ್ಲದ ಆ ಮನೆ ಅವರಿಗೊಂದು ನೆಮ್ಮದಿಯನ್ನೂ ತಂದುಕೊಟ್ಟಿತ್ತು. ಸದಾ ಓಣಿಯಿಂದ ಓಣಿಗೆ, ಮನೆಗಳನ್ನು ಬದಲಾಯಿಸಿ ಬದಲಾಯಿಸಿ ಸಾಕುಸಾಕಾಗಿ ಹೋಗಿದ್ದ ಅವರಿಗೆ 'ಒಂದು ಸ್ವಂತ ಮನೆ' ಕಟ್ಟಿಸಿಬಿಡಬೇಕೆಂಬ ಕನಸು ಬಹುದಿನಗಳಿಂದಲೂ ಕಾಡುತ್ತಿತ್ತು.

ಸಣ್ಣ ಉಳಿತಾಯ ಇಲಾಖೆಯ ಗುಮಾಸ್ತರಾಗಿದ್ದ ಅವರಿಗೆ ಮನೆ ಕಟ್ಟಿಸಿದ್ದೊಂದು ಸಾಧನೆಯೇ ಸರಿ. ಇಂಜಿನಿಯರಿಂಗ್ ಮಾಡುತ್ತಿರುವ ಒಬ್ಬ ಮಗ, ಬಿ.ಎಡ್. ಮಾಡುತ್ತಿರುವ ಮಗಳು, ಪಿಎಚ್.ಡಿ. ಮಾಡುತ್ತಿರುವ ಮತ್ತೊಬ್ಬ ಮಗ, ಬಿ.ಎ. ಓದುತ್ತಿರುವ ಕೊನೆ ಮಗ ಇವರೆಲ್ಲರ ಖರ್ಚು ತೂಗಿಸಿ ಸಂಸಾರ ನಡೆಸಿ ಮನೆಕಟ್ಟಬೇಕೆಂದರೆ ಸಾಮಾನ್ಯವೇ? ''ಮನೆ ಕಟ್ಟಿನೋಡು ಮದುವೆ ಮಾಡಿನೋಡು'' ಎಂಬಂತಹ ಗಾದೆಗಳು ಹುಟ್ಟಿದ್ದ ಇಂತಹವರ ಮಧ್ಯದಿಂದ. ಮೊನ್ನೆ ಮೊನ್ನೆಯ ತನಕ ಹಾಗೆ ಕಟ್ಟಿಸಬೇಕು, ಹೀಗೆ ಕಟ್ಟಿಸಬೇಕು ಎಂದು ಬೀಗುತ್ತಿದ್ದ ಶಂಕ್ರಣ್ಣ ಬೆಂಗಳೂರು ಬಳಿಯ ರೈಲು ದುರಂತದಲ್ಲಿ ತೀರಿಹೋಗಿದ್ದ!

ಮೂರ್ತಿ ಹತ್ತು ವರ್ಷದಿಂದ ಸೈಟು ಕೊಳ್ಳುತ್ತಿರುವನೇ ವಿನಾ ಇನ್ನೂ ಮನೆಗೊಂದು ಬುನಾದಿಯೇ ಬಿದ್ದಿಲ್ಲ!

ಮೇಷ್ಟ್ರ ಬಸಣ್ಣನವರಂತೂ ಮನೆ ಕಟ್ಟಿಸತೊಡಗಿ ಮೂರು ವರ್ಷವಾಯ್ತು. ಇನ್ನೂ ಮುಗಿಯುವ ಮಾತೇ ಇಲ್ಲ.

ಹೀಗೆ ಸುತ್ತಲ ಜಗತ್ತನ್ನೊಮ್ಮೆ ತಾಳೆ ಹಾಕಿ ನೋಡಿದರೆ, 'ತನ್ನದೂ ಕೂಡ ಹಿಂದೆ ಚಕ್ರವರ್ತಿಗಳು ಭೂಮಿ ಗೆದ್ದು ತಮ್ಮ ಹೆಸರನ್ನ ವೃಷಭಾಚಲದ ಮೇಲೆ ಕೆತ್ತಿಸುವಂತಹ ಸಾಹಸವೇ ಸರಿ' ಅಂದುಕೊಂಡ. ಅಸಲು ಭೀಮಯ್ಯನೆಂದರೆ ಯಾರಿಗೆ ಗೊತ್ತಿಲ್ಲ! ಕೂಡ್ಲಿಗೆಯಲ್ಲಿ ಓದಿಕೊಂಡಿರುವ, ದುರಭ್ಯಾಸಗಳಿಲ್ಲದ ಈ ದಲಿತ ಶಿಸ್ತಿನ ಮನುಷ್ಯ. ವೈಚಾರಿಕನಾದ ಈತನಿಗೆ ಆಡಂಬರದ ಆಚರಣೆಗಳೂ ಒಡಿಸವು. ಉದ್ದಕ್ಕೂ ನಾಸ್ತಿಕನೆಂದೇ ಗುರ್ತಿಸಿಕೊಂಡ ಈತ ''ಇಲ್ಲಿ ದೇವರು ನಿರ್ಮಿಸಿದ್ದು ಮನುಷ್ಯರನ್ನಲ್ಲ. ಮನುಷ್ಯರೇ ಸೇರಿ ದೇವರನ್ನು ನಿರ್ಮಿಸಿದ್ದು'' ಅಂತ ಖಚಿತವಾಗೇ ಹೇಳುತ್ತಿದ್ದ. ರಾತ್ರೋರಾತ್ರಿ ಉದ್ಭವಿಸುವ ದೇವರುಗಳು, ಸುದ್ದಿ ದೇವರುಗಳು, ಮೈಮೇಲೆ ಬರುವ, ಭವಿಷ್ಯ ನುಡಿವ, ಹಾಲು ಕುಡಿವ, ಪಾಪ ಕಡಿಮೆ ಮಾಡಲು ಹುಂಡಿ ಇಟ್ಟುಕೊಂಡೇ ಕುಳಿತ ದೇವರು, ಬೈಸಿಕೊಳ್ಳುವ, ಉಗುಳಿಸಿಕೊಳ್ಳುವ, ಹೊಡೆಸಿಕೊಳ್ಳುವ ದೇವರುಗಳ ರಹಸ್ಯವನ್ನು, ಬಡವರೆಂದರೆ ಬಹುದೂರ ನಿಲ್ಲುವ ದೇವರನ್ನೂ ಜಾಲಾಡುತ್ತಿದ್ದ. ಅಂತೂ ಇಂತೂ ಇದು ದೇವರುಗಳ ರಾಜ್ಯ, ಇಲ್ಲಿ ದೇವರೇ ನಿಮಿತ್ತ; ಮಾನವನೇ ನಿಂತು ದೇವರಿಂದ, ದೇವರಿಗಾಗಿ, ದೇವರಿಗೋಸ್ಕರ ಆತನನ್ನು ರಕ್ಷಿಸುತ್ತಾ ಬಂದಿದ್ದಾನೆ ಎನ್ನುವ ಭೀಮಯ್ಯ ಒಪ್ಪುವುದು ಮಾರ್ಕ್ಸ್ ಮತ್ತು ಲೋಹಿಯಾರನ್ನು.

ಎಂದೂ ಯಾವ ದೇವಸ್ಥಾನಗಳಿಗೂ ಹೋಗ ಬಯಸದ ಭೀಮಯ್ಯನ ಪತ್ನಿ ಶಾರದಮ್ಮ ಆತನ ನಿಲುವಿಗೇ ತದ್ವಿರುದ್ಧ. ಪೂಜೆ ಮುಗಿಸದೆ ನಿತ್ಯ ನೀರೂ ಕುಡಿಯದ ಆಕೆಗೆ ದೇವರೆಂದರೆ ಪ್ರಾಣ. ಹಬ್ಬ ಆಚರಣೆಗಳೆಂದರೆ ಸಂಭ್ರಮ ಸಡಗರ. ಈಡು ಜೋಡು ಹೀಗಿದ್ದರಿಂದಲೋ ಏನೋ ಇವರ ನಡುವೆ ಆಗಾಗ ತಾಪವೆದ್ದು ಮುಗಿಲು ಮುಟ್ಟಿ ಗುಡುಗು ಮಿಂಚುಗಳ ನಡುವೆ ತುಂತುರು ಮಳೆ ತರುತ್ತಿತ್ತಾದರೂ ಮಳೆಯಿಂದ ನಿಂತ ನೆಲ ತಣ್ಣಗಾಗುವಂತೆ ಯಾವುದೋ ರಾಜಿಸೂತ್ರದಿಂದ ಬದುಕು ಮತ್ತೆ ಸಂತೋಷದ ಕಡೆಗೆ ಸಾಗುತ್ತಿತ್ತು. ಅಂತಹ ಒಂದು

■ **ಶಿವಕುಮಾರ್ ಕಂಪ್ಲಿ**

ವಾಸ್ತವವಾಗಿ ಪುರಾಣ ನಂಬದ ಭೀಮಯ್ಯ, ''ಅಂದ್ರೆ ಇದು ಹಿಂದುಗಳಿಗೆ ಮಾತ್ರ ಎಂಬ ಮಾತೇ ಖಚಿತವಾಯ್ತು ಅನ್ನಿ. ಆದ್ರೆ ಪುರೋಹಿತರೆ, ನಮ್ಮ ದೇಶ ಅನೇಕ ಮತಧರ್ಮಗಳ ತವರು. ಉಳಿದವರಿಗೆ ಏನೂ ಮಾಡದ ನಿಮ್ಮ ವಾಸ್ತುಭೂತ ನಮಗೆ ಮಾತ್ರ ಏನೋ ಮಾಡುತ್ತಾನೆ ಅನ್ನೋ ಭ್ರಮೆ ಯಾಕೆ? ಅಂದ ಹಾಗೆ ಒಂದು ಮಾತು. ಜ್ಞಾನಿಗಳಾದ ತಮಗೆ ನಮ್ಮ ದೇಶದ ನಕ್ಷೆ ನೋಡಿದರೆ ಏನನಿಸುತ್ತೆ? ವಾಸ್ತು ಸರಿ ಇದೆಯಾ?'' ಎಂಬ ಪ್ರಶ್ನೆಗಳನ್ನ ಒಡ್ಡಿದರು.



ಪ್ರಸಂಗವೇ ಆ ಮನೆಯ 'ಗೃಹಪ್ರವೇಶ.'

ಅನಗತ್ಯ ಎಂಬ ವಾದ ಕೊನೆಗೆ ಕಡಿಮೆ ಖರ್ಚಿನೊಳಗೆ ಸರಳವಾಗಿ ಮುಗಿಯಬೇಕು ಎಂಬ ನಿರ್ಧಾರದೊಂದಿಗೆ ಆ ಮನೆಗೆ ಗೃಹಪ್ರವೇಶ ಬಂದಿತ್ತು.

ಸದ್ದುಗದ್ದಲದ ಆ ಸಂತೋಷದ ಆಚರಣೆಗೆ ಸ್ನೇಹಿತರು, ಬಂಧುಗಳು, ಹಿತೈಷಿಗಳು ಬಂದಿದ್ದರು. ಬಲಗಾಲಿಟ್ಟು ಒಳಗೆ ಬರಬೇಕು. ಬಲಗೈಲೆ ಬೆಳಗಬೇಕು ಎಂಬ ಸರಳ ಮಾತುಗಳನ್ನೂ ತೀವ್ರ ವಿರೋಧಿಸುವ ಭೀಮಯ್ಯ ಏಕೆ ಎಡಗಾಲಿಗೆ ಹರಿವ ರಕ್ತ ಬೇರೆಯಾ ! ಎಡಗೈ ಕೆಲಸ ಕನಿಷ್ಟವಾ ? ಎಂದು ಕೇಳುತ್ತಾ ನಿಮ್ಮ 'ಬಲ' ಶುದ್ಧ ನಾನ್‌ಸೆನ್ಸ್ ಎಂದು ವಾದಿಸಿಬಿಡುತ್ತಾನೆಂದು ಯಾರೂ ಆತನ ತಂಟೆಗೆ ಹೋಗದೆ ತಮ್ಮ ಆಚರಣೆ ಗಳಲ್ಲಿ ತಾವು ಮುಳುಗಿದ್ದರೂ ಭೀಮಯ್ಯ ಕೂಡ ಕೇವಲ ಇದೊಂದು ಹಿತೈಷಿಗಳ ಸಂತೋಷಕೂಟವೆಂದೇ ಭಾವಿಸಿ ತಮ್ಮ ಪಾಡಿಗೆ ತಾವು ಗೆಳೆಯರೊಂದಿಗೆ ಹರಟೆಗಿಳಿದಿದ್ದರು.

ಗೊಣಗುತ್ತ, ಇರಸುಮುರಸಿನಲ್ಲಿಯೇ ಪೂಜೆ ಸಲ್ಲಿಸಿದ ಪುರೋಹಿತರು ಅಚ್ಚುಕಟ್ಟಾಗಿ, ತಮಗೆ ಗೊತ್ತಿರುವ ಮೃತ್ಯುಂಜಯ ಹೋಮ ಮಾಡಿ, ಗಾಯತ್ರಿ ಮಂತ್ರ ಜಪಿಸಿ ಫಲತಾಂಬೂಲ ದಕ್ಷಿಣೆಗಳನ್ನ ಪಡೆದು ಹೊರಡುವ ಮೊದಲು "ಈಗಲಾದರೂ ನಿಮ್ಮ ಮನೆಯವರನ್ನ ಕರೆಸಿರಿ. ಅವರಿಗೆ ಅಗತ್ಯವಾಗಿ ಹೇಳಲೇಬೇಕಾದ ವಿಚಾರವೊಂದಿದೆ" ಎಂದು ಕುಳಿತೇಬಿಟ್ಟರು.

"ಅಪ್ಪಾ, ಪುರೋಹಿತರು ಕರಿತಿದಾರೆ" ಅಂತ ಚಿಕ್ಕ ಮಗ ಬಂದಾಗ, "ಯಾಕೋ ದಕ್ಷಿಣೆ ಕೊಟ್ಟಿಲ್ವಾ ? ಮತ್ಯಾವ ತಿರುಪತಿ ತಲೆಗೋ ಮಾರಾಯ ?" ಎಂದು ನಗಲು, "ದಕ್ಷಿಣೆ ಕೊಟ್ಟಾಯಿತಪ್ಪಾ, ಏನೋ ವಿಚಾರವಂತೆ" ಎಂದು ನಿಂತ ಮಗನನ್ನು ತಟ್ಟುತ್ತಲೇ, "ನನ್ನತ್ರ ಎಂತಾದ್ದಪ್ಪ ಆಚಾರ್‍ರ ವಿಚಾರ" ಎಂದು ಒಳಹೋದ. "ಬರ್ರೀ ಸಾಹೇಬ್ರೇ" ಎಂದು ಕುರ್ಚಿ ತೋರಿಸಿದರು ಪುರೋಹಿತರು. "ಏನ್ ಸಮಾಚಾರ, ಎಲ್ಲಾ ಸಂತೋಷಾನೇ ?" ಎನ್ನುತ್ತ ಕುಳಿತರು ಭೀಮಯ್ಯ.

"ನೋಡಿ ಸಾರ್, ನೀವು ತಪ್ ತಿಳಿಬಾರ್‍ದು. ಈ ಮನೆಯ ವಾಸ್ತು ಸರಿ ಇಲ್ಲ. ಈಶಾನ್ಯ ಸ್ನಾನದ ಕೋಣೆ, ಆಗ್ನೇಯ ಶೌಚಾಲಯ ಹೀಗಿದ್ದರೆ ಸಂಕಷ್ಟಗಳ ಸರಮಾಲೆ ಯನ್ನೇ ಹಾಕಿಕೊಂಡಂತೆ. ಹಾ, ಇಲ್ಲಿ ದೋಷ ಒಂದಲ್ಲ ಎರಡಲ್ಲ. ನೋಡಿ ಪಶ್ಚಿಮ-ವಾಯವ್ಯಕ್ಕೆ ನೀರಿನ ತೊಟ್ಟಿ, ಪಶ್ಚಿಮಕ್ಕೆ ಅಡುಗೆಮನೆ. ತಿಳಿದೋ ತಿಳಿಯದೆಯೋ ಮನೆ ಕಟ್ಟಿಬಿಟ್ಟಿದ್ದಾರೆ. ಇದು ಹೀಗೇ ಇದ್ದರೆ ನಿಮ್ಮ ಗಂಡುಮಕ್ಕಳಿಗೆ ಕಷ್ಟ. ಆರ್ಥಿಕ ಹಿನ್ನಡೆಯಾಗುತ್ತದೆ, ಮಂಗಳಕಾರ್ಯಗಳ ಯೋಗವಿಲ್ಲದಂತಾಗುತ್ತದೆ. ಆರೋಗ್ಯಕ್ಕೂ ಹೊಡೆತ ತಪ್ಪಿದ್ದಲ್ಲ. ಔಷಧೋಪಚಾರ, ಆಪರೇಷನ್ ಅಂತ ಖರ್ಚು ಜಾಸ್ತಿ. ಒಟ್ಟಾರೆ ಇಡೀ ವಿಚಾರ ನೋಡಿದಾಗ ಈ ಮನೆಯಲ್ಲಿ ಸುಖ ಸಂತೋಷಕ್ಕಿಂತ ದುಃಖ ಕಷ್ಟವೇ ಜಾಸ್ತಿ ತುಂಬಿರುತ್ತವೆ. ಆದ್ದರಿಂದ ನನ್ನ ಅಭಿಪ್ರಾಯದ ಪ್ರಕಾರ ವಾಸ್ತು ಸರಿಪಡಿಸಿಕೊಳ್ಳುವುದು ಯೋಗ್ಯ" ಎಂದರು ಪುರೋಹಿತರು.

ಪ್ರತಿಯಾಗಿ "ಹೌದೇ" ಎಂದು ಸಣ್ಣಗೆ ನಕ್ಕರು ಭೀಮಯ್ಯ. ಆ ನಗೆಯ ಹಿಂದಿನ ವ್ಯಂಗ್ಯ ಅರಿತ ಪುರೋಹಿತರು, "ನೋಡಿ ಸ್ವಾಮಿ, ಜ್ಯೋತಿಷಶಾಸ್ತ್ರ ನಿಮ್ಮ ವಿಜ್ಞಾನಕ್ಕಿಂತ ಪ್ರಾಚೀನವಾದದ್ದು. ಈ ಕಾಲದಲ್ಲಿ ನಾವೂ ಈ ವಾಸ್ತುಶಾಸ್ತ್ರವನ್ನ ವೈಜ್ಞಾನಿಕವಾಗೇ ಅಭ್ಯಾಸ ಮಾಡಿ ವಿಶ್ಲೇಷಿಸುತ್ತಿದ್ದೇವೆ" ಎಂದರು.

"ಪುರೋಹಿತರೇ, ನನಗೆ ತಿಳಿದಮಟ್ಟಿಗೆ ಇದು ತೀರಾ ಇತ್ತೀಚೆಗೆ ಬಂದದ್ದಲ್ಲವೇ ? ಮುಸ್ಲಿಮರಿಗೆ ಕ್ರಿಶ್ಚಿಯನ್ನರಿಗೆ ಅನ್ವಯಿಸದ ಇದು ಹಿಂದೂಗಳನ್ನಷ್ಟೇ ಏಕೆ ಕಾಡುತ್ತಿದೆ ?" ಎಂದರು ಭೀಮಯ್ಯ.

"ನೋಡಿ ಸಾರ್, ಆಯಾ ಧರ್ಮಕ್ಕೆ ಅಂತ ಕೆಲವು ಪದ್ಧತಿಗಳಿವೆ. ನಮ್ಮ ಪುರಾಣ ಗಳಲ್ಲಿ ಹೇಳುವ ಹಾಗೆ ವಾಸ್ತು ಎಂದರೆ ಭುವನಗಳ ಒಡೆಯ, ಕಟ್ಟಡ ಕಾಯುವ ಕ್ಷೇತ್ರಪಾಲಕ. ಭೂತಗಳ ದೇವರಾದ ಬ್ರಹ್ಮದೇವನೇ ಇವನ್ನ ನೇಮಿಸಿದ್ದು. ಯಾರು ಭೂಲೋಕದಲ್ಲಿ ಆತನ್ನ ಪೂಜಿಸದೆ ಸಂತೃಪ್ತಿಗೊಳಿಸದೆ ಕಟ್ಟಡ ನಿರ್ಮಿಸುವರೋ ಅವರಿಗೆ ಅನೇಕ ವಿಧದಲ್ಲಿ ತೊಂದರೆ ಕೊಡು ಎಂದು ಶಾಪ ನೀಡಿದ್ದಾನೆ" ಎಂದು ಮುಖ ನೋಡಿದರು ಪುರೋಹಿತರು.

ವಾಸ್ತವವಾಗಿ ಪುರಾಣ ನಂಬದ ಭೀಮಯ್ಯ, "ಅಂದ್ರೆ ಇದು ಹಿಂದುಗಳಿಗೆ ಮಾತ್ರ ಎಂಬ ಮಾತೇ ಖಚಿತವಾಯ್ತು ಅನ್ನಿ. ಆದ್ರೆ ಪುರೋಹಿತರೆ, ನಮ್ಮ ದೇಶ ಅನೇಕ ಮತಧರ್ಮಗಳ ತವರು. ಉಳಿದವರಿಗೆ ಏನೂ ಮಾಡದ ನಿಮ್ಮ ವಾಸ್ತುಭೂತ ನಮಗೆ ಮಾತ್ರ ಏನೋ ಮಾಡುತ್ತಾನೆ ಅನ್ನೋ ಭ್ರಮೆ ಯಾಕೆ ? ಅಂದ ಹಾಗೆ ಒಂದು ಮಾತು. ಜ್ಞಾನಿಗಳಾದ ತಮಗೆ ನಮ್ಮ ದೇಶದ ನಕ್ಷೆ ನೋಡಿದರೆ ಏನನ್ನಿಸುತ್ತೆ ? ವಾಸ್ತು ಸರಿ ಇದೆಯಾ ?" ಎಂಬ ಪ್ರಶ್ನೆಗಳನ್ನ ಒಡ್ಡಿದರು.

ತಮ್ಮ ವಿದ್ವತ್ ಪ್ರದರ್ಶನಕ್ಕೆ ಮತ್ತೊಂದು ಅವಕಾಶ ದೊರೆಯಿತು ಎಂದರಿತ ಪುರೋಹಿತರು ಭಾರತ ನಕ್ಷೆ ಗಮನಿಸಿದರು. ಅಳೆದು ತಲೆ ಅಲ್ಲಾಡಿಸಿದರು. ನಿಟ್ಟುಸಿರು ಬಿಟ್ಟರು... ಕಡೆಗೆ, "ವಾಸ್ತುಶಾಸ್ತ್ರದ ವಿಮರ್ಶೆಯ ಪ್ರಕಾರ ಭಾರತ ದೇಶದ ಉದ್ದಗಲದ ಕ್ಷೇತ್ರದಲ್ಲಿ ಉತ್ತರ ದಕ್ಷಿಣವು, ಪೂರ್ವ ಪಶ್ಚಿಮಗಳ ಅಳತೆಗೆ ಎರಡರಷ್ಟಿದೆ. ಉತ್ತರ ಎತ್ತರವಾಗಿದ್ದು ದಕ್ಷಿಣದಲ್ಲಿ ಸಮುದ್ರವಿದೆ. ಹಾಗಾಗಿ ವಾಸ್ತು ಸರಿ ಇಲ್ಲ" ಎಂದರು.

ನಕ್ಕ ಭೀಮಯ್ಯ, "ಇದರಿಂದ ಅಪಾಯವಿಲ್ಲವೇ ?" ಎಂದರು.

"ಯಾಕಿಲ್ಲ, ಅದಕ್ಕೇ ಅಲ್ಲವೇ ಈ ದೇಶದಲ್ಲೂ ಭ್ರಷ್ಟಾಚಾರ ಮುಗಿಲು ಮುಟ್ಟಿದೆ. ದಬ್ಬಾಳಿಕೆ ಹೆಚ್ಚುತ್ತಿದೆ. ಇನ್ನ ವಾಸ್ತುಶಾಸ್ತ್ರದ ನಿಯಮದಂತೆ ಇಲ್ಲಿ ಸ್ತ್ರೀಯರಿಗೆ ಸುಖ ಕಡಿಮೆಯಾಗುತ್ತಿದೆ. ಮತ್ತೊಂದು ಕಡೆ ಸ್ತ್ರೀಯರ ಸಂಖ್ಯೆ ಕಡಿಮೆಯಾಗುತ್ತಿದೆ. ಮುಖ್ಯವಾಗಿ ವಿಧವೆಯರ ಸಂಖ್ಯೆ ಹೆಚ್ಚುತ್ತಿದೆ..."

"ಸಾಕು... ಸಾಕು... ಪುರೋಹಿತರೇ, ನೋಡಿ, ನಾವು ನೀವು ಸತ್ತಿಲ್ಲವಲ್ಲ? ಆರಾಮಾಗಿಲ್ಲವೇ ? ನಿಜವಾಗಿ ನೋಡಿದರೆ ಈ ದೇಶದ ವಾಸ್ತು ಸರಿಯಾಗಬೇಕು. ಅದಕ್ಕೆ ನಿಮ್ಮಂತಹ ಪಂಡಿತರೆಲ್ಲಾ ಸೇರಿ ದಾರಿ ಹುಡುಕುವುದನ್ನು ಬಿಟ್ಟು ನಮ್ಮಂತಹ ಬಡಪಾಯಿಗಳ ಮೇಲೆ ಎರಗಿದರೆ ಹೇಗೆ ? ಇಷ್ಟರ ಮೇಲೂ ಬೇರೆ ದೇಶಕ್ಕೆ ನಮ್ಮ ದೇಶವನ್ನು ಹೋಲಿಸಿಕೊಂಡಾಗಲೂ ಕರ್ನಾಟಕದ ನಾವು ಸುಖವಾಗಿಲ್ಲವೇ ? ನೆಮ್ಮದಿಯಾಗಿಲ್ಲವೇ ? ಅಂದಮೇಲೆ ಈ ವಾಸ್ತುಭೂತ ಅನಪೇಕ್ಷಿತ ಅಲ್ಲವೇ ?" ಎಂದರು.

ಭೀಮಯ್ಯನವರ ಮಾತುಗಳಿಗೆ ಗಲಿಬಿಲಿಗೊಂಡ ಪುರೋಹಿತರು, "ಏನೋ ಸ್ವಾಮಿ, ನಮಗೆ ತಿಳಿದದ್ದು ನಾವು ಹೇಳಿದ್ದೇವೆ. ಇದರ ಮೇಲೆ ತಮ್ಮಿಷ್ಟ" ಎಂದು ಎದ್ದು ಶಾರದಮ್ಮನ್ನ ಒಮ್ಮೆ ನೋಡಿ "ಕೇಶವಾಯ ಮಾಧವಾಯ..." ಎನ್ನುತ್ತಾ ಹೊರಟೇಬಿಟ್ಟರು.

ಬಾಗಿಲ ತನಕ ಪುರೋಹಿತರ ಬೆನ್ನಹಿಂದೇ ಬಂದ ಶಾರದಮ್ಮ ತಿರುಗಿ ಬಂದವಳೇ, "ಅಲ್ರಿ ಅವ್ರು ನಮ್ಮ ಒಳ್ಳೇದಕ್ಕೆ ಅಂತ ಹೇಳೊಕೋದ್ರೆ ಅವ್ರಿಗೆ ತಿರುಗಮುರುಗ ಏನೇನೋ ಪ್ರಶ್ನೆ ಕೇಳಿ ಕಳಿಸಿಬಿಟ್ರಲ್ಲಾ" ಅಂತ ಆಕ್ಷೇಪಣೆ ಎತ್ತಿದಳು.

"ಅಪ್ಪ ಹೇಳಿದ್ರಲ್ಲೀ ತಪ್ಪೇನಿದೆಯಮ್ಮಾ" ಅಂತ ಮಗ ಅಂದ. "ಹೌದಮ್ಮ, ಇವ್ರವೆಲ್ಲಾ ಬರೀ ಕಟ್ಟುಕತೆ" ಮಗಳೆಂದಳು.

"ಏನೇ ಹಿಂಗಂತಿಯಾ ?" ಎನ್ನಲು ಶಾರದಮ್ಮ, "ಹೂಂನಮ್ಮ ನಮ್ಮ ಕ್ಲಾಸ್‌ಮೇಟ್ ಬಂಗಾರಮ್ಮನ ಮನೇಲಿ ಕೂಡ ಹೀಗೇ ಹೇಳಿದ್ರಂತೆ. ಕಾಂಪೌಂಡ್ ಕಟ್ಟಸಬೇಕು ಹೂ ಬೆಳಿಯೋಕೆ ಚೆನ್ನಾಗಿರುತ್ತೆ, ಮನೇನೂ ಸುರಕ್ಷಿತವಾಗಿರುತ್ತೆ ಅಂತ ವಿಶಾಲಾಕ್ಷಿ ಆಂಟಿ ಅಂದಿದ್ದಕ್ಕೇ ಮಂಜು ಅಂಕಲ್ ಬುನಾದಿ ತಗಿಸ್ತಿದ್ರಂತೆ. ಸರಿ ಅದೇ ಟೈಮ್‌ಗೆ ಬಂದ ಪುರೋಹಿತರು ವಾಸ್ತು ಪ್ರಕಾರ ಈ ಮನೆಗೆ ಕಾಂಪೌಂಡ್ ಇರಬಾರ್‍ದು ಅಂದ್ರಂತೆ. ಸರಿ ಬ್ಯಾಡ ಬಿಡಪ್ಪಾ ಅಂದ್ರೆ ಕೆಲಸ ಮಾಡಿಸ್ತಿದ್ದ ಮೇಸ್ತ್ರಿ, ಸ್ವಾಮಿ, ಈ ಮನೆ ಕೆಲಸ ಹಿಡಿದಿದ್ದರಿಂದ ಎರಡು ಮನೆ ಕೆಲಸ ಬಿಟ್ಟಿದ್ದೀವಿ. ಈಗ ಇದ್ದಕ್ಕಿದ್ದಹಾಗೆ ಬ್ಯಾಡ ಅಂದ್ರೆ ಹೆಂಗೆ ? ನಮ್ ದುಡ್ಡು ಕೊಡಿ. ಇಲ್ಲ ಕಟ್ಟಕ್ಕೆ ಬುಡಿ ಅಂದ್ರಂತೆ. ಸರಿ ಬುನಾದಿ ತೆಗಿಬ್ಯಾಡ ಅಂದವ್ರೆ, ಗೋಡೆ ಕಟ್ಬ್ಯಾಡ ಅಂದಿಲ್ವಲ್ಲ ಅಂದ ಮಂಜು ಅಂಕಲ್ ಬುನಾದಿ ಇಲ್ಲದೇ ಕಾಂಪೌಂಡ್ ಕಟ್ಟಿಸಿದರಂತೆ. ಕಟ್ಟಿಸಿದ ಎರಡೇ ದಿನಕ್ಕೆ ಮಳೆ ಬಂದು ಗೋಡೆನೂ ಖಲಾಸ್, ಹೂವಿನ ಗಿಡಗಳೂ ಖಲಾಸ್" ಎಂದಳು.

"ಅಲ್ಲಮ್ಮ, ಕಾಂಪೌಂಡ್ ಕಟ್ಟಿದ್ದರೆ ಏನಾಗುತ್ತಿತ್ತು. ಪುರೋಹಿತರ ಮಾತು ಕೇಳಿದ್ದಕ್ಕೆ ಹಣಾನೂ ಹೋಯ್ತು ಹೂವಿನ ಗಿಡವೂ ಹೋಯ್ತಲ್ಲ" ಎಂದ ಚಿಕ್ಕ ಮಗ.

"ಗಿಡ ಕೇವಲ ಪೂಜೆಗೆ ಅಲಂಕಾರಕ್ಕೇ ಅಂತ ಬೆಳೆಸದೆ ಔಷಧಿಗೆ, ನಿತ್ಯ ಉಪಯೋಗಕ್ಕೆ ಅಂತನೂ ಬೆಳೆಸಬೇಕು. ಕಾಂಪೌಂಡ್ ಕಟ್ಟೋದ್ರಿಂದ ಏನ್ ತಪ್ಪು ಅಲ್ವ, ಅಪ್ಪಾ ?" ಎಂದ ದೊಡ್ಡ ಮಗ.

"ನೋಡೇ, ಸದ್ಯ ವಾಸ್ತುಭೂತ ನಮ್ಮ ಮನೆಗೆ ಬರಲಾರದು ಬಿಡು. ಲಕ್ಷಾಂತರ ರೂಪಾಯಿ ದುಡ್ಡೂ ಉಳಿತು. ಪೋಲಾಯ್ತು, ಹಾಳಾಯ್ತು ಎಂಬ ಚಿಂತೆಯೂ ಬರಲಾರದು. ಅಲ್ಲವೇ ಮಕ್ಕಳೇ", ಎನ್ನಲು ಅವರೂ ನಕ್ಕರು. ಶಾರದಮ್ಮನಿಗೂ ಈ ಮಾತುಗಳು ಸರಿ ಎನಿಸಿ ಗಂಡ ಮಕ್ಕಳನ್ನೊಮ್ಮೆ ಮೆಚ್ಚುಗೆಯಿಂದ ನೋಡಿ ನಗುತ್ತ ಅಡುಗೆ ಮನೆಕಡೆ ನಡೆದಳು.

ಶಿವಕುಮಾರ್ ಕಂಪ್ಲಿ
ಕನ್ನಡ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜ್
ದೇವದುರ್ಗ - ಅಂಚೆ, ತಾಲೂಕು, ರಾಯಚೂರು ಜಿಲ್ಲೆ

"ಲೇ ಪ್ರೇಮಾ..., ನಾಳೆ ಕುಡಿಯುವ ನೀರು ಸರಬರಾಜು ಇರೋದಿಲ್ವಂತೆ, ಡ್ರಮ್ಮು, ಬಕೇಟು, ಬಿಂದಿಗೆಗಳಲ್ಲಿ ಈಗಲೇ ನೀರನ್ನ ಸ್ಟಾಕ್ ಮಾಡಿಕೊಂಡರೆ ಒಳ್ಳೇದಲ್ವೇ..." ದಿನಪತ್ರಿಕೆ ಓದುತ್ತಿದ್ದ ರಾಯರು ಹಜಾರದಿಂದಲೇ ಕೂಗಿ ಹೇಳಿದರು.

"ಹೌದಾ..., ಹಾಗಾದರೆ ನನ್ಗೆ ಸ್ವಲ್ಪ ಸಹಾಯ ಮಾಡ್‌ಬಾರದೇ ? ನಲ್ಲೀಲಿ ನೀರು ಚೆನ್ನಾಗಿ ಬರ್‍ತಾ ಇದೆ. ಪೇಪರ್ ಓದೋದನ್ನ ನಿಲ್ಸಿ ಇತ್ಲಾಗೆ ಬನ್ನಿ..., ನೀರು ತುಂಬೋವ್ರಂತೆ." ಪಾತ್ರೆ ತೊಳೆಯುತ್ತ ಅಡಿಗೆ ಮನೆಯಿಂದಲೇ ನಾನು ಜವಾಬು ಕೊಟ್ಟೆ.

"ಆ ಕೆಲ್ಸ ನೀನೇ ಮಾಡೋಕ್ಕಾಗಲ್ವ ?"

"ನನ್ಗೆ ಎಷ್ಟು ಕೆಲ್ಸ ಇದೆ !... ಇನ್ನೂ ತರಕಾರಿ ಹೆಚ್ಕೋಬೇಕು. ಅಕ್ಕಿ , ಬೇಳೆ ತೊಳೆದು ಅಡಿಗೆಗೆ ಕುಕ್ಕರಿನಲ್ಲಿ ಪಾತ್ರೆಗಳನ್ನ ಜೋಡಿಸಿ, ಸ್ಟೋವ್ ಮೇಲೆ ಇಡ್ಬೇಕು..." ಸಿಟ್ಟಿನಿಂದ ಹೇಳಿದೆ.

"ಬರ್‍ತೀನಿ ಇರು ಐದು ನಿಮಿಷದಲ್ಲಿ" ಅವರು ಗೊಣಗಿಕೊಂಡದ್ದು ಕೇಳಿಸಿತು.

ಅಷ್ಟರಲ್ಲಿ ಅಡಿಗೆ ಮನೆಯ 'ಸಿಂಕ್'ಅನ್ನು ಕ್ಲೀನ್ ಮಾಡಿ, ಬಕೇಟು-ಬಿಂದಿಗೆಗಳನ್ನು ನೀರು ತುಂಬಲು ರೆಡಿ ಮಾಡಿದೆ.

ಪಂಚೆಯನ್ನು ಮೊಣಕಾಲ ಮೇಲೆ ಎತ್ತಿ ಸೊಂಟಕ್ಕೆ ಸಿಕ್ಕಿಸುತ್ತ ಒಳಗೆ ಬಂದ ರಾಯರು ನಲ್ಲಿ ಕೆಳಗೆ ಒಂದು ಬಿಂದಿಗೆ ಇಟ್ಟು "ಇವತ್ತೇನು ಅಡಿಗೆ ?" ಎಂದರು ತಮಾಷೆ ಮಾಡುತ್ತ.

"ಅವರೆಕಾಳು ಇದೆ. ಹುಳಿ ಮಾಡಿ, ಕ್ಯಾಬೇಜ್ ಪಲ್ಯ ಮಾಡ್ತೀನಿ."

"ಭೇಷ್ ಆಗೋಯ್ತು..., ಚೆನ್ನಾಗಿ ಲಗಾಯಿಸ್ತೀನಿ" ಎಂದು ಹಲ್ಲು ಕಿರಿದರು.



# ಇದು ಬರೀ ನೀರಲ್ಲೋ ಅಣ್ಣಾ !

ಕ್ಯಾಬೇಜ್ ಹೆಚ್ಚಲೆಂದು ಡೈನಿಂಗ್ ಟೇಬಲ್ ಮೇಲೆ ಚಾಕು, ಮಣೆ ಇಟ್ಟುಕೊಂಡು ಕುರ್ಚಿಯಲ್ಲಿ ಕುಳಿತೆ.

"ಅಲ್ಲಾ... ರೀ, ನಮ್ಮ ಮನೆ ಮುಂದಿನ ರಸ್ತೇಲಿ ಪೈಪು ಒಡೆದು ಹೋಗಿ ನೆಲದೊಳಗಿಂದ ಕುಡಿಯುವ ನೀರು ಹೊರಗೆ ಹರೀತಿದೆ. ಸುಮಾರು ಹದಿನೈದು ದಿನಗಳ ಮೇಲಾಯ್ತು... ಹೀಗೆ ನೀರು ಹೋಗ್ತಾನೇ ಇದೆ. ನೀರು ವ್ಯರ್ಥವಾಗಿ ಹೋಗ್ತಿದೆಯಲ್ಲ ಅಂತ ನನ್ಗೆ ಬೇಸರ. ವಾಟರ್ ಬೋರ್ಡ್‌ನವರಿಗೆ ನೀವೇ ಫೋನ್ ಮಾಡಿ ನೀರು ಪೋಲಾಗೋದನ್ನ ನಿಲ್ಲಿಸಿ ಅಂತ ಹೇಳಿಬಿಡ್ರಿ."

"ಈ ಬೀದೀಲಿ ಇಷ್ಟು ಜನ ಇದ್ದಾರೆ. ಇವರ್‍ಯಾರಿಗೂ ಇಲ್ಲದ ಕಾಳಜಿ ನಿನಗ್ಯಾಕೆ ? ಇಷ್ಟಕ್ಕೂ ಇದೇ ರಸ್ತೇಲಿ ವಾಟರ್ ಬೋರ್ಡ್‌ನಲ್ಲಿ ಇಂಜಿನಿಯರ್ ಆಗಿರೋ ವೆಂಕಟಪ್ಪನ ಮನೆ ಇದೆ. ಅವನೂ ಇದನ್ನ ನೋಡಿರ್‍ತಾನೆ. ಆದರೂ ಸುಮ್ಮನಿದ್ದಾನಲ್ಲ! ನೀನ್ಯಾಕೆ ಬೇಜಾರು ಮಾಡಿಕೊಳ್ತೀಯಾ ?" ನನ್ನನ್ನು ಸಂತೈಸುವಂತೆ ಹೇಳಿದರು.

"ಬೇರೆಯವರು ಸುಮ್ಮನಿದ್ದಾರೆ ಅಂತ ನಾವೂನೂ ಹಾಗೇ ಇರ್ಬೇಕಾ ? ನೀರು ಎಷ್ಟು ಅಮೂಲ್ಯ ! ಅದು ಹೀಗೆ ವೇಸ್ಟ್ ಆಗ್ತಿದೆಯಲ್ಲ ಅಂತ ನನ್ಗೆ ಸಂಕಟ ಆಗ್ತಿದೆ. ಅದರ ಗೊಡವೆ ಬೇಡ ಅಂತ ಬೇಜವಾಬ್ದಾರಿಯಾಗಿ ನಡಕೊಂಡ್ರೆ ಸರಿಯಾ ? ಪ್ರಜ್ಞಾವಂತ ನಾಗರಿಕರಾಗಿ ನಮ್ಮ ಕರ್ತವ್ಯ ಮಾಡೋಣ" ನಯವಾಗಿಯೇ ದಬಾಯಿಸಿದೆ.

"ಏನು ಮಾಡಲಿ ಹೇಳು ?" ಮೆಲ್ಲಗೆ ಕೇಳಿದರು ರಾಯರು.

"ಅದೇ ಹೇಳಿದೆನಲ್ಲ... ವಾಟರ್ ಬೋರ್ಡ್‌ಗೆ ಫೋನ್ ಮಾಡಿ ವಿಷ್ಯ ತಿಳಿಸಿ."

"ಫೋನ್ ವಿಷಯ ಇರಲಿ. ಮೊದಲು ಆ ವೆಂಕಟಪ್ಪನನ್ನ ಭೇಟಿ ಮಾಡಿ ಮಾತಾಡ್ತೀನಿ. ಅವನು ಅದೇ ಇಲಾಖೆಯಲ್ಲಿರೋದರಿಂದ ಈ ಕೆಲ್ಸ ಬೇಗ ಆಗುತ್ತೆ."

"ಈಗಾಗ್ಲೆ ಅವನು ಅದರ ಕಡೆ ಗಮನ ಕೊಡಬೇಕಿತ್ತು... ಸರಿ, ಹೇಳಿ ನೋಡಿ" ಎನ್ನುತ್ತ ತರಕಾರಿಯನ್ನು ಬೇಗ ಬೇಗ ಹೆಚ್ಚತೊಡಗಿದೆ. ರಾಯರು ನೀರು ತುಂಬುವ ಕಾರ್ಯದಲ್ಲಿ ನಿರತರಾದರು.

* * *

ಸಾಯಂಕಾಲ ವಾಕಿಂಗ್ ಮುಗಿಸಿ ಮನೆಗೆ ಬಂದ ರಾಯರು ಹೇಳಿದರು – "ಆಚೆಮನೆ ಇಂಜಿನಿಯರ್ ವೆಂಕಟಪ್ಪ ಅಕಸ್ಮಾತ್ ಎದುರಿಗೆ ಸಿಕ್ಕಿದ ಕಣೆ. ರಸ್ತೇಲಿ ಪೈಪು ಒಡೆದು ನೀರು ವ್ಯರ್ಥವಾಗ್ತಿರೋ ವಿಷಯ ಹೇಳಿದೆ. ಅದನ್ನ ಅವನೂ ಗಮನಿಸಿದ್ದಾನಂತೆ. ಡಿಪಾರ್ಟ್‌ಮೆಂಟ್‌ನಿಂದ ಆಳುಗಳನ್ನ ಕಳಿಸಿ ದುರಸ್ತಿ ಮಾಡೋದಕ್ಕೆ ಹೇಳ್ತೀನಿ ಅಂತ ದೊಡ್ಡದಾಗಿ ಮಾತಾಡಿದ. ಈಗ ನಿನಗೆ ಸ್ವಲ್ಪ ಸಮಾಧಾನ ಆಯ್ತಲ್ಲ."

"ಆದರೂ ನೀವೇನೇ ಹೇಳಿ... ಈ ಜನರಲ್ಲಿ ಸಿವಿಕ್ ಸೆನ್ಸ್ ಇಲ್ಲವೇ ಇಲ್ಲ. ಮೊನ್ನೆ ದಿನ ಎದುರು ಮನೆ ಕಾವೇರಮ್ಮನ ಹತ್ತಿರ ಇದರ ಬಗ್ಗೆ ಮಾತಾಡ್ತಿದ್ದಾಗ ಏನಂತಾಳೆ ಗೊತ್ತಾ ? ಅಯ್ಯೋ... ನೀವು ಇಷ್ಟಕ್ಕೆ ಹೀಗಂತೀರ. ನೀವು ಇಲ್ಲಿಗೆ ಇತ್ತೀಚೆಗೆ ಬಂದೋರು. ಕಳೆದ ವರ್ಷ ನೋಡಬೇಕಿತ್ತು! ಈ ರಸ್ತೆ ಪೂರ್ತ ಪೈಪುಗಳು ಒಡೆದು ನೀರು ಹೊಳೆ ತರ ಹೋಗ್ತಿತ್ತು. ಎಷ್ಟೋ ಜನ ಇಲ್ಲಿ ತಮ್ಮ ಮನೆಗಳಿಗೆ ಅಕ್ರಮವಾಗಿ ನೀರಿನ ಕನೆಕ್ಷನ್ ತೊಗೊಂಡಿದ್ದಾರಂತೆ. ಮೇಲೆ ಮೇಲೆ ನೆಲ ತೋಡಿ ಪೈಪು ಹಾಕ್ತಾರೆ. ದೊಡ್ಡ ದೊಡ್ಡ ವಾಹನಗಳು ಓಡಾಡುವಾಗ ಪೈಪುಗಳು ಒಡೆದು ಹೋಗತ್ವೆ. ಇದಕ್ಕೆ ನಾವೇನು ಮಾಡೋಣ ಅಂತಾರೆ. ಇವತ್ತಿನ ಅವ್ಯವಸ್ಥೆ ಹಿಂದಿನ ಅವ್ಯವಸ್ಥೆಗಿಂತ ವಾಸಿ ಅಂತ 'ತೃಪ್ತಿ' ಪಟ್ಟುಕೊಂಡು ಕೂರುವ ಜಡತ್ವ ನಮ್ಮ ಜನಗಳಲ್ಲಿ ಹೆಪ್ಪು ಗಟ್ಟಿಬಿಟ್ಟಿದೆ" ಎಂದೆ ಜಿಗುಪ್ಸೆಯಿಂದ. ರಾಯರು ತಮ್ಮೊಳಗೆ ನಗುತ್ತ ರೂಮಿನೊಳಗೆ ಹೊರಟುಹೋದರು. ನನಗೆ, ನಾವುಗಳು ಹಿಂದೆ ನೀರಿಗಾಗಿ ಪಾಡುಪಟ್ಟದ್ದು ನೆನಪಾಗುತ್ತದೆ. ಅದೆಷ್ಟು ಕೋಟಲೆಗಳು ! ಸಮಸ್ಯೆಗಳು !

ಆಗ ನಾವೆಲ್ಲ ಚಿಕ್ಕವರು. ಒಂದು ಬಾಡಿಗೆ ಮನೆಯಲ್ಲಿ ಇದ್ದಾಗ, ಹಣದ ತಾಪತ್ರಯದಿಂದಾಗಿ ನನ್ನ ತಂದೆ ಎರಡು ಮೂರು ತಿಂಗಳ ಬಾಡಿಗೆ ಹಣವನ್ನು ಮನೆ ಮಾಲೀಕನಿಗೆ ಕೊಡಲಾಗಲಿಲ್ಲ. ಆಗ ಆತ ಬಾಯಿಗೆ ಬಂದಂತೆ ಕೂಗಾಡಿದ್ದ– "ಬಾಡಿಗೆ ಕೊಡೋದಕ್ಕೆ ತಾಕತ್ತು ಇಲ್ಲದಿದ್ರೆ ಮನೆ ಬಿಟ್ಟು ಹೋಗ್ರಿ... ಬಿಟ್ಟು ಹೋಗದಿದ್ರೆ ನಲ್ಲಿ ಕಿತ್ತು ಹಾಕಿಸ್ತೀನಿ. ಕುಡಿಯೋದಕ್ಕೆ ನೀರು ಇಲ್ಲದ ಹಾಗೆ ಮಾಡ್ತೀನಿ" ಅಂತ. ಅವನ ಕಟುಮಾತಿನಿಂದ ಅಪ್ಪ ಬಹಳ ನೊಂದು ಕೊಂಡಿದ್ದರು. ಮನೆ ಮಾಲೀಕ ನಿರ್ದಾಕ್ಷಿಣ್ಯವಾಗಿ ನೀರಿನ ಕನೆಕ್ಷನ್ ಕಿತ್ತುಹಾಕಿದ. ಆಗ ನಾವುಗಳು ಎಷ್ಟು ಪಾಡುಪಟ್ಟೆವು ! ಆತ ಎಂತಹ ನಿಷ್ಕರುಣಿ...! ಅವನಲ್ಲಿ ಅಂತಃಕರಣ ಸತ್ತು ಹೋಗಿದ್ದಿರಬೇಕು. ಪುಣ್ಯಕ್ಕೆ ಅಕ್ಕಪಕ್ಕದ ಮನೆಯವರು ಒಳ್ಳೆಯವರಾಗಿದ್ದರು. ಅವರ ದಯೆಯಿಂದ ನೀರಿಗೆ ಕಷ್ಟ ಆಗಲಿಲ್ಲ. ಧಾರಾಳವಾಗಿ ನೀರು ಕೊಟ್ಟರು. ಹಣ ಹೇಗೋ ಹೊಂದಿಸಿದ ಅಪ್ಪ ಬಾಡಿಗೆ ಬಾಕಿಯನ್ನು ಮಾಲೀಕನಿಗೆ ಕೊಟ್ಟು ತೀರಿಸಿದ್ದರು.

ಇನ್ನೊಂದು ಕಡೆ ನಮ್ಮದು ಎರಡನೇ ಮಹಡಿಯಲ್ಲಿ

**ಕೆ. ವಿ. ಉಭಯಭಾರತಿ**

ವಾಸ. ಅಲ್ಲಿ ಕುಡಿಯುವ ನೀರಿಗೆ ಬಹಳ ಕಷ್ಟ. ಬಿಲ್ಡಿಂಗ್‌ನಲ್ಲಿ ಆರೇಳು ಮನೆಗಳಿದ್ದವು. ನಲ್ಲಿಯಲ್ಲಿ ಬರುವ ನೀರು ಎರಡನೇ ಮಹಡಿಗೆ ಏರುತ್ತಿರಲಿಲ್ಲ. ಕೆಳ ಅಂತಸ್ತು ಮನೆಗಳವರ ನೀರಿನ ಧಾವಂತ ಮುಗಿದ ಮೇಲೆ ನಡುರಾತ್ರಿ ಕಳೆದು ಎರಡು ಗಂಟೆಗೋ ಮೂರು ಗಂಟೆಗೋ ನಮ್ಮ ಮನೆ ನಲ್ಲಿಯಲ್ಲಿ ಸಣ್ಣಗೆ ನೀರು ಬರುತ್ತಿತ್ತು. ನಿದ್ರೆಕೆಟ್ಟು ಒಂದಷ್ಟು ಪಾತ್ರೆಗಳಲ್ಲಿ ಕುಡಿಯುವ ನೀರು ಹಿಡಿದಿಡುತ್ತಿದ್ದೆವು. ಕೆಳ ಅಂತಸ್ತಿನಲ್ಲಿ ಬಾವಿ ಇದ್ದುದರಿಂದ ಬದುಕಿದೆವು! ಸ್ನಾನಕ್ಕೆ, ಬಟ್ಟೆ ಒಗೆಯೋದಕ್ಕೆ ಇತ್ಯಾದಿ ಕೆಲಸಗಳಿಗೆ ಬಾವಿಯಿಂದ ನೀರು ಸೇದಿಕೊಂಡು, ತುಂಬಿದ ಬಕೆಟು-ಬಿಂದಿಗೆಗಳನ್ನು ಹೊತ್ತುಕೊಂಡು ಎರಡು ಮಹಡಿ ಏರಿ ಬರುವಷ್ಟರಲ್ಲಿ ಸಾಕಾಗಿಹೋಗುತ್ತಿತ್ತು. ಓವರ್‌ಹೆಡ್ ಟ್ಯಾಂಕ್ ಕಟ್ಟಿಸಿ, ಬಾವಿಗೆ ಮೋಟರು ಜೋಡಿಸಿ, ಮೇಲಿನ ಟ್ಯಾಂಕ್‌ಗೆ ನೀರು ಹಾಯಿಸುವ ವ್ಯವಸ್ಥೆ ಮಾಡಿ ಅಂತ ಮನೆ ಮಾಲೀಕನ ಹತ್ತಿರ ಎಷ್ಟು ಬೇಡಿಕೊಂಡರೂ ಅವನು ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲ. ಈ ಕಷ್ಟ ಸಹಿಸಲಾರದೆ ನಾವೇ ಬೇರೆ ಮನೆಗೆ ಹೋಗಬೇಕೆಂದು ತೀರ್ಮಾನಿಸಿಕೊಂಡೆವು.

ಮತ್ತೊಂದು ಬಾಡಿಗೆ ಮನೆಯಲ್ಲಿಯೂ ನೀರಿಗಾಗಿ ಬಹಳ ವೇದನೆ ಅನುಭವಿಸಿದ್ದೆವು. ಒಂದೇ ಬಿಲ್ಡಿಂಗ್‌ನಲ್ಲಿ ನಾಲ್ಕು ಮನೆಗಳು. ಅದರಲ್ಲೊಂದರಲ್ಲಿ ಮನೆ ಮಾಲೀಕನ ಕುಟುಂಬ. ಕುಡಿಯುವ ನೀರಿಗೆ ಬರ. ''ಬಾವಿಯ ನೀರು ಚೆನ್ನಾಗಿದೆ. ಮೋಟರ್ ಹಾಕಿಸಿದ್ದೀನಿ... ಏನೂ ಸಮಸ್ಯೆಯಿಲ್ಲ ಅಂತ'' ಬಡಾಯಿಕೊಚ್ಚಿಕೊಂಡಿದ್ದ.ಆ ಮನೆಗೆ ಹೋದ ಶುರುವಿನಲ್ಲಿ ಒಂದು ವಾರ ಪರವಾಗಿರಲಿಲ್ಲ. ಆಮೇಲೆ ಬಂತು ನಮಗೆ ಗ್ರಹಚಾರ! ಬಾವಿಯಲ್ಲಿ ನೀರು ಕಮ್ಮಿ ಆಗತೊಡಗಿತು. ಆಗ ಬೇಸಿಗೆ ಕಾಲ ಬೇರೆ. ಮೋಟರ್‌ಗೆ ಅಳವಡಿಸಿದ್ದ ಪೈಪು ಬಾವಿಯ ನೀರಿನಲ್ಲಿ ಮುಳುಗಲಿಲ್ಲ. ನೀರು ಸಾಕಷ್ಟಿದ್ದರೆ ತಾನೇ! ಎಲ್ಲರೂ ನೀರು ಸೇದಿಕೊಳ್ಳಲಾರಂಭಿಸಿದೆವು. ಅದಕ್ಕೂ ಸರತಿ. ಬರಬರುತ್ತಾ ಬಾವಿಯಲ್ಲಿ ನೀರು ಊರುವುದೇ ಕಷ್ಟವಾಯಿತು. ಕಡೆಯಲ್ಲಿ ನೀರು ಸೇದಿದವರಿಗೆ ಮಣ್ಣು ನೀರೇ ಗತಿ! ಮನೆಮಾಲೀಕ ಬಹಳ ಕಿಲಾಡಿ. ರಾತ್ರಿಯ ಹೊತ್ತಿನಲ್ಲಿ ಬಾವಿಯ ರಾಟೆಯನ್ನು ತೆಗೆದು ತನ್ನ ಮನೆಯಲ್ಲಿಟ್ಟುಕೊಳ್ಳುತ್ತಿದ್ದ. ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ಸದ್ದಿಲ್ಲದಂತೆ ರಾತ್ರಿಯೆಲ್ಲ ಭೂಮಿಯಿಂದ ಜಿನುಗಿ ಸಂಗ್ರಹವಾಗಿದ್ದ ನೀರನ್ನು ಸೇದಿ ಸೇದಿ ತನ್ನ ಮನೆಯ ಹಂಡೆ, ಬಕೇಟು, ಬಿಂದಿಗೆ, ಪಾತ್ರೆಗಳಲ್ಲಿ ಸ್ಟಾಕ್ ಮಾಡಿಕೊಳ್ಳುತ್ತಿದ್ದ. ನೀರಿಗಾಗಿ ಅಭಾವ ಇದ್ದಾಗ, ತನ್ನ ಮನೆಗೆ ಸಾಕಷ್ಟು ನೀರು ಇದ್ದರೆ ಆಯಿತು; ಇತರರಿಗೆ ಸಿಕ್ಕರೆಷ್ಟು ಬಿಟ್ಟರೆಷ್ಟು ಎನ್ನುವ ಸ್ವಾರ್ಥಭಾವ ಅವನದು. ಅವನ ನಂತರ ಬಂದವರಿಗೆ ಸ್ವಲ್ಪ ವಾಸಿ. ಕಡೆಯಲ್ಲಿ ಬಂದವರಿಗೆ ನಾಮ! ಇಂತಹ ಚಿಲ್ಲರೆ ಬುದ್ಧಿಯ ಜನರೊಂದಿಗೆ ನಮಗೆ ಹೋರಾಡಲಾಗುತ್ತಿರಲಿಲ್ಲ. ಕುಡಿಯೋದಕ್ಕೆ ನೀರಿರಲಿ, ಕಕ್ಕಸಿಗೆ ಹೋದರೆ ತೊಳೆದುಕೊಳ್ಳಲು ಕೂಡ ನೀರಿಗೆ ಬರ ಬಂದರೆ ಹೇಗೆ? ಹಾಗೂ ಹೀಗೂ ಅಕ್ಕಪಕ್ಕದ ಮನೆಯವರ ಕೃಪೆಯಿಂದ ಜೀವಾಧಾರಕ್ಕೆ ನೀರು ಸಿಗುತ್ತಿತ್ತು. ಆದರೂ ಎಷ್ಟು ದಿನ ಅಂತ ಅವರನ್ನು ಆಶ್ರಯಿಸೋದು?

ಮನೆ ಮಾಲೀಕನಿಗೆ ಹೇಳಿದ್ದಾಯ್ತು– ''ಅಯ್ಯಾ, ಇಲ್ಲಿ ನಾಲ್ಕು ಮನೆಗಳಿವೆ. ಬಾವಿಯಲ್ಲಿ ನೀರಿಲ್ಲ. ಬೋರ್‌ವೆಲ್ ಹಾಕಿಸಿದರೆ ಎಲ್ಲರಿಗೂ ಸೌಕರ್ಯವಾಗುತ್ತೆ'' ಅಂತ. ಅದಕ್ಕೆ ಅವನ ಗಯ್ಯಾಳಿ ಹೆಂಡತಿ – ''ಬೋರ್ ಹಾಕಿಸೋದಕ್ಕೆ ದುಡ್ಡನ್ನ ನೀವು ಕೊಡ್ತೀರ?'' ಅಂತ ಜಗಳಕ್ಕೆ ನಿಂತವಳಂತೆ ಮಾತಾಡಿದ್ದಳು. ಇಷ್ಟಕ್ಕೂ ಅವಳು ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನಲ್ಲಿ ಉದ್ಯೋಗಸ್ಥೆ. ಮನೆಯಲ್ಲಿ ಅವಳದೇ ದರ್ಬಾರು. ಮಾಲೀಕ ಕಾಲೇಜೊಂದರಲ್ಲಿ ಲೆಕ್ಚರರ್. ಮನಸ್ಸು ಮಾಡಿದರೆ ಬೋರ್‌ವೆಲ್ ಹಾಕಿಸುವುದು ಅವರಿಗೆ ಅಸಾಧ್ಯವಾಗಿರಲಿಲ್ಲ.



''ನೀರು ಅಮೂಲ್ಯ.. ದುಂದುಮಾಡಬೇಡಿ'' ಅಂತ ಎಲ್ಲಾ ಮಾಧ್ಯಮಗಳಲ್ಲೂ ಜಾಹೀರಾತು ಬರುತ್ತಲೇ ಇರುತ್ತದೆ. ಈ ಜನರಿಗೆ ಮಾತ್ರ ಒಂದು ಬಗೆಯ ಧೋರಣೆ ಏಕೆ? ಕೆಲವು ಹಳ್ಳಿ ನಗರಗಳಲ್ಲಿ ನೀರಿಗಾಗಿ ಹಾಹಾಕಾರ! ಬರಗಾಲದ ಅನುಭವ! ಮತ್ತೆ ಕೆಲವು ಕಡೆ ನೀರಿನ ಪೋಲು! ಇದೆಂತಹ ವಿಪರ್ಯಾಸವೆಂದು ಚಿಂತಿಸುತ್ತಿದ್ದೆ.

• • •

ಹತ್ತು ದಿನಗಳು ಕಳೆದವು. ವಾಟರ್ ಬೋರ್ಡ್‌ನ ವೆಂಕಟಪ್ಪ ನೀರು ಸೋರಿಕೆ ಕುರಿತಂತೆ ಸ್ವಲ್ಪವೂ ತಲೆ ಕೆಡಿಸಿಕೊಂಡಿರಲಿಲ್ಲ. ರಸ್ತೆಯಲ್ಲಿ ನೀರು ಜೋರಾಗಿ ಹರಿದು ಚರಂಡಿಗೆ ಹೋಗುತ್ತಿತ್ತು. ನನ್ನ ಚಡಪಡಿಕೆ ಜಾಸ್ತಿ ಆಯಿತು. ರಾಯರ ಹತ್ತಿರ ಈ ವಿಷಯದ ಬಗ್ಗೆ ಒಂದೆರಡು ಸಲ ಪ್ರಸ್ತಾಪಿಸಿ ಅವರಿಂದ ಬೈಸಿಕೊಂಡೆ. ಪೆಚ್ಚುಮುಖ ಹಾಕಿಕೊಂಡಿದ್ದ ನನ್ನನ್ನು ನೋಡಿ ಅವರೇ ಸಮಾಧಾನ ಮಾಡಿದರು. ನನ್ನ ನೋವನ್ನಾಗಲೀ, ದುಃಖವನ್ನಾಗಲೀ ಇನ್ನಾರ ಹತ್ರ ಹೇಳಿಕೊಳ್ಳಲಿ... ನೀವೆ ಹೇಳಿ ಅಂತ ಬಿಕ್ಕಿದೆ. ನನ್ನ ಒದ್ದಾಟ ನೋಡಲಾರದೆ ''ಸರಿ, ಟೆಲಿಫೋನ್ ಡೈರೆಕ್ಟರಿಯಲ್ಲಿ ವಾಟರ್ ಬೋರ್ಡ್ ನಂಬರನ್ನು ಹುಡುಕಿ ಬರೆದುಕೊಡು'' ಅಂದರು. ಅವರು ಹೇಳಿದಂತೆ ಒಂದೆರಡು ಫೋನು ನಂಬರುಗಳನ್ನು ಒಂದು ಚೀಟಿಯಲ್ಲಿ ಬರೆದು ಕೊಟ್ಟೆ. ಅವರಲ್ಲೊಂದು ನಂಬರಿಗೆ ಫೋನು ಮಾಡಿದರು. 'ಯಾರೂ ಫೋನನ್ನು ಎತ್ಕೋತ್ತಾನೇ ಇಲ್ವಲ್ಲೇ' ಎಂದರು. ಮತ್ತೊಂದು ನಂಬರಿಗೆ ಫೋನ್ ಮಾಡಿದಾಗ ಅತ್ತ ಕಡೆಯಿಂದ ಪ್ರತಿಕ್ರಿಯೆ ಬಂತು. ಇಲ್ಲಿನ ವಿಷಯ ತಿಳಿಸಿ, ತಕ್ಷಣ ನೀರು ಸೋರಿಕೆ ತಡೆಗಟ್ಟುವಂತೆ ಕೇಳಿಕೊಂಡರು. ನನ್ನ ಮುಖ ನೋಡಿ, ''ಆಳುಗಳನ್ನು ಕೂಡಲೇ ಇಲ್ಲಿಗೆ ಕಳಿಸಿ ಸರಿಪಡಿಸ್ತೀವಿ ಅಂತ ಹೇಳಿದ್ದಾರೆ, ನೋಡೋಣ'' ಎಂದರು ರಾಯರು. ಹೋಗಲಿ, ಅಷ್ಟಾದರೂ ಹೇಳಿದರಲ್ಲ ಅಂತ ನಾನು ಸುಮ್ಮನಾದೆ.

ಮತ್ತೆ ಎರಡು ದಿನಗಳು ಉರುಳಿದವು. ಯಾವ ಆಳುಗಳೂ ಇತ್ತ ಕಡೆ ಬರಲಿಲ್ಲ. ನನಗಂತೂ ತುಂಬಾ ಖೇದವಾಯಿತು.

''ರೀ... ಪುನಃ ನೀರಿನ ಇಲಾಖೆಯವರಿಗೆ ಫೋನ್ ಮಾಡ್ರಿ'' ಎಂದು ರಾಯರನ್ನು ವರಾತ ಮಾಡಿದೆ.

''ನನ್ನನ್ಯಾಕೆ ಗೋಳು ಹುಯ್ಕೋತೀಯಾ? ನೀನೇ ಫೋನು ಮಾಡು'' ಅಂತ ಸಿಡುಕಿದರು.

''ಗಂಡಸರು ದಬಾಯಿಸಿದರೇನೇ ಅವರಿಗೆ ತಲೆ ತಾಕೋದು. ನೀವೇ ಮಾಡಿ'' ಅಂತ ತಾಕೀತು ಮಾಡಿದೆ. ನನ್ನ ಸೂಕ್ಷ್ಮ ಮನಸ್ಸನ್ನು ರಾಯರು ಚೆನ್ನಾಗಿ ಅರಿತಿದ್ದರು.

''ಫೋನ್ ಮಾಡಿದರೆ ಸುಮ್ಮನೆ ರಿಂಗ್ ಆಗುತ್ತೆ. ಅಲ್ಲಿ ಕೆಲಸ ಮಾಡುವವರು ಎಲ್ಲಿ ಹಾಳಾಗಿಹೋಗಿದ್ದಾರೋ? ಅಥವಾ ಫೋನ್ ಅಟೆಂಡ್ ಮಾಡೋದಕ್ಕೂ ಜನರಿಗೆ ಸೋಮಾರಿತನವೋ?'' ಎಂದು ಅಲ್ಲಿನ ಸಿಬ್ಬಂದಿಯವರನ್ನು ಬೈಯತೊಡಗಿದರು. ಈಗಾಗಲೇ ನಾಲ್ಕಾರು ಸಲ ಫೋನ್ ಮಾಡಿ ರಾಯರು ಬೇಸತ್ತಿದ್ದರು.

ನನ್ನ ಮಟ್ಟಿಗೆ ಇದೊಂದು ಗಂಭೀರ ಸಮಸ್ಯೆಯಾಗಿ ಬಿಟ್ಟಿತ್ತು. ಒಂದು ಕೆಲಸವನ್ನು ನಾವೇ ಮಾಡಿಬಿಡಬಹುದು. ಬೇರೆಯವರಿಂದ ಮಾಡಿಸುವುದು ಎಷ್ಟು ಕಷ್ಟ ಎಂದು ಒಂದು ಕಂಪನಿಯ ಮ್ಯಾನೇಜರ್ ಆಗಿ ಅವರಿಗೆ ಗೊತ್ತು.

''ಹೀಗಾದ್ರೆ ಹೇಗೆ?... ಹೋಗಲಿ, 'ಪ್ರಜಾವಾಣಿ' ಪತ್ರಿಕೆಯ 'ಕುಂದುಕೊರತೆ' ವಿಭಾಗಕ್ಕೆ ಇದರ ಬಗ್ಗೆ ಬರೆದು

ಹಾಕ್ರಿ, ಆಗಲಾದರೂ ಈ ಸಮಸ್ಯೆ ಬಗೆಹರಿಯುತ್ತ ಅಂತ ನೋಡೋಣ'' ಎಂದೆ. ''ನಿನ್ನ ಮನಸ್ಸಿಗೆ ಬಂದ್ರೆ ಮುಗೀತು'' ಅಂತ ಹೇಳಿ ನನ್ನ ಗೋಳಾಟ ನೋಡಲಾರದೆ 'ಪ್ರಜಾವಾಣಿ' ಪತ್ರಿಕೆಗೆ ಒಂದು ಕಾರ್ಡ್‌ನಲ್ಲಿ ಬರೆದು ಹಾಕಿದರು. ಒಂದೆರಡು ದಿನದಲ್ಲೇ ಅದು ಪತ್ರಿಕೆಯಲ್ಲಿ ಪ್ರಕಟವಾಯಿತು. ಅಂದೇ ವಾಟರ್ ಬೋರ್ಡ್‌ನಿಂದ ಇಬ್ಬರು ಆಳುಗಳು ಬಂದು ಒಡೆದ ನೀರಿನ ಪೈಪನ್ನು ಕಿತ್ತೆಸೆದು ಹೊಸ ಪೈಪು ಜೋಡಿಸಿದರು.

ನೀರು ಸೋರಿಕೆ ನಿಂತಿತು ಎಂದು ನೆಮ್ಮದಿಯ ನಿಟ್ಟುಸಿರು ಬಿಡುವಷ್ಟರಲ್ಲಿ ಮಾರನೆಯ ದಿನದಿಂದಲೇ ಮತ್ತೆ ಚರಂಡಿಯಲ್ಲಿ ನೀರು ಹರಿಯಲು ಪ್ರಾರಂಭವಾಯಿತು. ನೆಲದೊಳಗೆ ಮತ್ತೆಲ್ಲೋ ನೀರಿನ ಪೈಪು ಒಡೆದಿತ್ತು. ಈಗ ನೀರು ರಸ್ತೆಯಲ್ಲಿ ಹರಿಯದೆ ಸೀದಾ ಚರಂಡಿಯೊಳಗೆ ಬರುತ್ತಿತ್ತು. ನನಗೆ ಮತ್ತೆ ತಳಮಳ ಶುರುವಾಯಿತು. ''ಏನ್ರೀ, ಮತ್ತೆ ಅದೇ ಗೋಳು. ಅದೇನು ರಿಪೇರಿ ಮಾಡಿದರೋ ಆ ಆಳುಗಳು !'' ಎಂದು ಗೊಣಗತೊಡಗಿದೆ. ''ನಿನ್ನ ಹಳೆರಾಗ ಮತ್ತೆ ಶುರುವಾಯ್ತ? ಇಲ್ಲಿನ ಜನಗಳು ಯಾರೂ ನಿನ್ನ ಹಾಗೆ ತಲೆ ಕೆಡಿಸಿಕೊಂಡಿಲ್ಲ. ನೀನೊಬ್ಬಳೇ ಹೀಗೆ. ನೀನು ಬದುಕಲು ಕಲಿತಿಲ್ಲ'' ಎಂದೂ ರಾಯರು ನನ್ನನ್ನು ಮೂದಲಿಸಿದರು.

ನನಗೆ ಅಳು ಬಂತು. ಜೋಲು ಮುಖ ಹಾಕಿ ಕುಳಿತೆ.

''ಎಲ್ಲದಕ್ಕೂ ತಲೆ ಕೆಡಿಸ್ಕೋತೀಯ! ಪೈಪು ಒಡೆದಿದೆ ಅಂತೀಯಾ... ಹಗಲಿನಲ್ಲಿ ಬೀದಿಲೈಟುಗಳು ಉರಿಯುತ್ತೆ ಅಂತೀಯಾ... ಎಲ್ಲಿ ಅಂದರೆ ಅಲ್ಲಿ ಜನ ಉಗುಳುತ್ತಾರೆ ಅಂತೀಯಾ... ಗಲೀಜು ಮಾಡ್ತಾರೆ..., ಕಸ ಹಾಕ್ತಾರೆ... ಹೀಗೆ ಎಲ್ಲದರಲ್ಲೂ ಸೂಕ್ಷ್ಮ ಆದರೆ ಹೇಗೆ? ಇದು ಇಂಡಿಯಾ. ಈ ಜನರೇ ಹೀಗೆ! ಆಡಳಿತ ವ್ಯವಸ್ಥೆ ಹದಗೆಟ್ಟಿದೆ. ನಮ್ಮನ್ನು ಪಾಲಿಸುವವರು ಭ್ರಷ್ಟರು. ಯಾರು ಎತ್ಲಾಗೆ ಹಾಳಾಗಿ ಹೋದರೆ ನಮಗೇನು ಅನ್ನುವ ಸ್ಥಿತಿ ಬಂದಿದೆ. ನಿನ್ನಂಥವರು ಒಂದಷ್ಟು ಜನ ಮಂತ್ರಿಗಳಾದರೆ ನಮ್ಮ ದೇಶ ಉದ್ಧಾರ ವಾಗ್ತಿತ್ತು ನೋಡು...''. ಎಂದು ಹಾಸ್ಯ ಮಾಡಿದರು.

''ಹೌದು, ನೀವು ಹೇಳಿದ್ದು ದಿಟ. ನಾನು ಮಂತ್ರಿ ಯಾಗಿದ್ದಿದ್ದರೆ ಎಲ್ಲರನ್ನೂ ತರಾಟೆಗೆ ತೊಗೋತಿದ್ದೆ. ಕಾರ್ಪೊರೇಟರು, ಎಂ.ಎಲ್.ಎ.ಗಳು ಅವರವರ ಕ್ಷೇತ್ರಗಳಿಗೆ ಕನಿಷ್ಠಪಕ್ಷ ವಾರಕ್ಕೊಮ್ಮೆ ಭೇಟಿ ನೀಡಿ ಅಲ್ಲಿನ ಕುಂದುಕೊರತೆಗಳನ್ನು ತಿಳಿದುಕೊಂಡು, ಶೀಘ್ರಗತಿಯಲ್ಲಿ ಅವುಗಳನ್ನು ಬಗೆಹರಿಸುವ ಕಾರ್ಯದತ್ತ ಗಮನ ನೀಡಬೇಕೆಂದು ಅವರಿಗೆ ಕಟ್ಟಪ್ಪಣೆ ಮಾಡುತ್ತಿದ್ದೆ'' ಎಂದು ಸೀರಿಯಸ್ಸಾಗಿ ಆತ್ಮವಿಶ್ವಾಸದಿಂದ ಹೇಳಿದೆ.

''ಪರವಾಗಿಲ್ವೆ... ಚೆನ್ನಾಗಿ ಮಾತಾಡ್ತೀಯ! ಎಲ್ಲಾ ಮಂತ್ರಿಗಳು ಪದವಿ ಸಿಗೋ ಮುಂಚೆ ದೊಡ್ಡ ದೊಡ್ಡ ಮಾತುಗಳನ್ನು ಆಡ್ತಾರೆ. ಮಂತ್ರಿ ಕುರ್ಚಿಲಿ ಕೂತ ಮೇಲೆ ಆಗೋ ಕಾರುಬಾರೇ ಬೇರೆ'' ಎಂದು ಕೀಟಲೆ ದನಿಯಲ್ಲಿ ಹೇಳಿದರು.

ಮಾತು ಬೇಡವೆಂದು ಮೌನವಾದೆ. ರಾಯರು ಹೇಳಿದಂತೆ, ''ನಾವು ಸಮಾಜದ, ದೇಶದ ಒಳಿತಿಗಾಗಿ ಏನೇನು ಮಾಡಬಹುದೆಂದು ಯೋಚಿಸುತ್ತೇವೆ, ಬೋಧಿಸುತ್ತೇವೆ; ಕಾರ್ಯದಲ್ಲಿ ಅದನ್ನು ಇಳಿಸುವಷ್ಟು ಇಚ್ಛಾಶಕ್ತಿ ನಮ್ಮಲ್ಲೇಕೆ ಗಟ್ಟಿಯಾಗಿಲ್ಲ?'' ಎಂದು ಆಲೋಚಿಸುತ್ತಿದ್ದೆ.

ದಿನಗಳು ಜಾರುತ್ತಿದ್ದವು.

ಚರಂಡಿಯಲ್ಲಿ ನೀರು ಹರಿಯುತ್ತಲೇ ಇತ್ತು. ಅದನ್ನು ನೋಡಿಯೂ ವೆಂಕಟಪ್ಪ ಸುಮ್ಮನಿದ್ದ. ಈ ಜನರೆಲ್ಲ ಹೀಗೇಕೆ? ಇವರಲ್ಲಿ ಸೂಕ್ಷ್ಮತೆ, ಸಂವೇದನೆ ಸತ್ತಿವೆಯೋ? ನನ್ನಿಂದ ಸುಮ್ಮನಿರಲಾಗಲಿಲ್ಲ.

''ರೀ... ವಾಟರ್‌ಬೋರ್ಡ್‌ಗೆ ಮತ್ತೊಮ್ಮೆ ಫೋನ್ ಮಾಡ್ರಿ'' ಎಂದು ರಾಯರನ್ನು ಪುಸಲಾಯಿಸಿದೆ.

''ನನ್ನನ್ನು ಪೀಡಿಸಬೇಡ. ನೀನೇ ಫೋನ್ ಮಾಡು'' ಅಂತ ನನಗೆ ಜೋರು ಮಾಡಿದರು.

ನನಗೂ ರೋಷ ಉಕ್ಕಿತು. ನಾನೇ ಫೋನ್ ಮಾಡಿ ನೋಡೋಣ ಎಂದುಕೊಂಡು ವಾಟರ್‌ಬೋರ್ಡ್‌ನ ಫೋನ್ ನಂಬರನ್ನು ಡಯಲ್ ಮಾಡಿದೆ. ತುಂಬಾ ಹೊತ್ತು ರಿಂಗಾದ ನಂತರ ''ಹಲೋ'' ಎಂದು ಆಲಸ್ಯದ ದನಿಯೊಂದು ಅತ್ತ ಕಡೆಯಿಂದ ಕೇಳಿಬಂತು.

''ನಮ್ಮ ಏರಿಯಾದಲ್ಲಿ ನೀರಿನ ಪೈಪು ಒಡೆದು ಬೀದಿ ಮೋರಿಲಿ ಕುಡಿಯುವ ನೀರು ಹರಿದುಹೋಗ್ತಿದೆ. ದಯವಿಟ್ಟು ಕೂಡಲೇ ಅದನ್ನು ಸರಿಪಡಿಸಿ'' ಅಂತ ವಿನಂತಿಸಿದೆ.

''ಮೇಡಂ, ಅಲ್ಲಿಗೆ ಇನ್ಸ್‌ಪೆಕ್ಷನ್ ಆಫೀಸರ್ ಬರ್ತಾರೆ. ಸರಿ ಮಾಡಕ್ಕೆ ಹೇಳ್ತಾರೆ. ಅಡ್ರೆಸ್ ಕೊಡಿ'' ಎಂದ. ಅಡ್ರೆಸ್ ಹೇಳಿದೆ.

ಆ ದಿನವೆಲ್ಲಾ ಆಳುಗಳು ಬರ್ತಾರೆ ಅಂತ ಕಾದೆ. ಊಹೂಂ... ಯಾರೂ ಬರಲಿಲ್ಲ.

ಮರುದಿನವೂ ಫೋನು ಮಾಡಿದೆ. ಅಲ್ಲಿ ಮತ್ಯಾರೋ ಫೋನ್ ಎತ್ತಿಕೊಂಡರು. ಹೇಳಿದ್ದೇ ಹೇಳು ಕಿಸಬಾಯಿದಾಸ ಅನ್ನುವಂತೆ ವಿಷಯ ತಿಳಿಸಿದೆ.

''ಮೇಡಂ, ಈ ನಂಬರಿಗೆ ಫೋನ್ ಮಾಡಿದರೆ ಪ್ರಯೋಜನ ಇಲ್ಲ. ಇನ್ನೊಂದು ನಂಬರ್ ಕೊಡ್ತೀನಿ. ಅದಕ್ಕೆ ಮಾಡಿ'' ಅಂದ, ಆ ಭೂಪ.

''ಸರಿ, ನಂಬರ್ ಕೊಡಿ'' ಅಂತ ಹೇಳಿ ಅವನು ಹೇಳಿದ ನಂಬರನ್ನು ಬರೆದುಕೊಂಡೆ. ಆ ನಂಬರಿಗೆ ಫೋನ್ ಮಾಡಿದರೆ ಅತ್ತ ಕಡೆಯಿಂದ ಯಾರೋ ಒಬ್ಬ ''ಮೇಡಂ, ನೀವು ಕಂಪ್ಲೇಂಟ್ ಸೆಕ್ಷನ್‌ಗೆ ಫೋನ್ ಮಾಡಿ. ಅದರ ನಂಬರು ಬರಕೊಳ್ಳಿ'' ಅಂತ ಅದರ ನಂಬರು ಹೇಳಿದ.

ಕಂಪ್ಲೇಂಟ್ ಸೆಕ್ಷನ್‌ಗೂ ಫೋನ್ ಮಾಡಿದೆ – ತಡಮಾಡದೆ.

ಅಲ್ಲಿಂದ ''ಮೇಡಂ, ನಿಮಗೆ ಇಂಜಿನಿಯರ್ ಪುಟ್ಟಸ್ವಾಮಿಯ ಸೆಲ್‌ಫೋನ್ ನಂಬರ್ ಕೊಡ್ತೀನಿ. ಅವರಿಗೆ ಫೋನ್ ಮಾಡಿದರೆ ಅವರು ಅರ್ಜೆಂಟಾಗಿ ಕೆಲಸ ಮಾಡಿಸಿಬಿಡ್ತಾರೆ'' ಅಂತ ಭರವಸೆ ನೀಡಿ ಆತನ ಫೋನ್ ನಂಬರನ್ನು ಹೇಳಿದ.

ಛಲಬಿಡದ ತ್ರಿವಿಕ್ರಮನಂತೆ ನಾನು ಪುಟ್ಟಸ್ವಾಮಿಯ ನಂಬರಿಗೆ ಡಯಲ್ ಮಾಡಿದೆ. ಆತ ಸಲೀಸಾಗಿ ''ಆಯ್ತು ಮೇಡಂ, ಇಮಿಡಿಯೇಟ್‌ಆಗಿ ಅಲ್ಲಿಗೆ ಆಳುಗಳನ್ನು ಕಳಿಸ್ತೀನಿ'' ಅಂತ ಆಶ್ವಾಸನೆ ನೀಡಿದ.

ಒಂದೇ ಸಮ ಫೋನ್ ಮಾಡಿ ಆಯಾಸದಿಂದ ಕಣ್ಣುಮುಚ್ಚಿ ಸುಮ್ಮನೆ ಕುಳಿತೆ.

ರಾಯರು ನನ್ನತ್ತ ನೋಡಿ ಬಿದ್ದು ಬಿದ್ದು ನಗುತ್ತಿದ್ದರು.

''ನಿಜಕ್ಕೂ ನಿನ್ನ ಸಹನಾಶಕ್ತಿಯನ್ನು ಮೆಚ್ಚಲೇಬೇಕು'' ಅಂತ ಶಹಬಾಷ್‌ಗಿರಿ ನೀಡಿದರು.

ನಾನು ಸೀರಿಯಸ್ ಆಗಿ ಯೋಚಿಸುತ್ತಿದ್ದೆ. ಈ ಜನರೆಲ್ಲಾ ಯಾಕೆ ಹೀಗಾಡ್ತಾರೆ? ಅದೆಷ್ಟು ಮೈಗಳ್ಳತನ ಇವರಲ್ಲಿ ಬೇರೂರಿಬಿಟ್ಟಿದೆ? ಕೆಲಸ ಅಂದ್ರೆ ಸಾಕು, ತಮ್ಮಿಂದ ಮತ್ತೊಬ್ಬರಿಗೆ ವರ್ಗಾಯಿಸಿಬಿಟ್ಟು ಜಾರಿಕೊಳ್ಳುವುದೇ ಆಯ್ತು. ಹೀಗಾದ್ರೆ ಹೇಗೆ? ಸರಕಾರದ ಕೆಲಸ ಹೇಗೂ ದೇವರ ಕೆಲಸವಲ್ಲವೇ?

ಯೋಚನೆ, ವಿಚಾರಗಳಿಂದ ತಲೆ ಬಿಸಿ ಆದದ್ದೇ ಲಾಭ.

''ಏನ್ರಿ ಮಾಡೋದು ಈಗ? ಅಷ್ಟೊಂದು ಫೋನ್ ಕಾಲ್ಸ್ ಮಾಡ್ದೆ. ಸುಮ್ನೆ ದಂಡ! ನೇರ ವಾಟರ್ ಆಫೀಸ್‌ಗೆ ಹೋಗಿ ಕಂಪ್ಲೇಂಟ್ ಕೊಟ್ಟು ಬರಬೇಕಷ್ಟೇ'' ಎಂದೆ ವಿಷಾದದಿಂದ.

''ಹಾಗೆ ಮಾಡಬೇಕೇನೋ?'' ಎಂದರು ರಾಯರು. ಅವರ ಧ್ವನಿಯಲ್ಲೂ ಬೇಸರದ ಛಾಯೆ ಇತ್ತು.

''ಮತ್ತೆ ಪೇಪರ್‌ಗೆ ಬರೆದು ಹಾಕೋಣ. ಹೋದ ಸಲ ಪತ್ರಿಕೆಗೆ ಬರೆದು ಹಾಕಿದ್ದಕ್ಕೆ ತಾನೇ ಆಳುಗಳು ಬಂದದ್ದು!'' ಉತ್ಸಾಹ ತುಂಬಿದ ಸ್ವರದಲ್ಲಿ ನುಡಿದೆ.

''ಅದೂ ಆಗಿಬಿಡಲಿ'' ಎಂದರು ರಾಯರು ಹಸನ್ಮುಖರಾಗಿ.

''ಈ ಸಲ ಮತ್ತೆ ಪ್ರಜಾವಾಣಿಗೆ ಬೇಡ. ಕನ್ನಡಪ್ರಭಕ್ಕೆ, ವಿಜಯ ಕರ್ನಾಟಕಕ್ಕೆ ಬರೆಯಿರಿ'' ಎಂದೆ.

ತಕ್ಷಣ ಕಾರ್ಯೋನ್ಮುಖರಾದರು ರಾಯರು. ವಿಜಯ ಕರ್ನಾಟಕದ ''ದೂರು-ದೃಷ್ಟಿ''ವಿಭಾಗಕ್ಕೆ ಕಾರ್ಡ್‌ಅನ್ನು ಬರೆದರು.

* * *

ಎರಡು ದಿನಗಳು ಕಳೆದವು. ಮನೆಯೊಳಗೆ ಕೆಲಸದಲ್ಲಿ ನಿರತಳಾಗಿದ್ದಾಗ ಹೊರಗೆ ರಸ್ತೆಯಲ್ಲಿ ಧನ್, ಧಡ್, ಧನ್... ಎಂದು ಹಾರೆಯಲ್ಲಿ ನೆಲ ಕೆತ್ತುವ ಶಬ್ದ ಕೇಳಿಸಿತು ನನಗೆ. ಕುತೂಹಲದಿಂದ ಹೊರಬಂದು ನೋಡಿದರೆ ಇಬ್ಬರು ಆಳುಗಳು ಮೋರಿಯ ನೇರದಲ್ಲಿನ ರಸ್ತೆಯನ್ನು ಕೆತ್ತುತ್ತಿದ್ದರು. ಈ ಬಾರಿ ಒಬ್ಬ ಇನ್‌ಸ್ಪೆಕ್ಟರ್ ಸಹ ಬಂದಿದ್ದ. ನಾನು ಅವರ ಕೆಲಸವನ್ನು ಗಮನಿಸುತ್ತ ಸ್ವಲ್ಪ ಹೊತ್ತು ನಿಂತೆ. ಆ ಇನ್‌ಸ್ಪೆಕ್ಟರ್ ಎದುರು ಮನೆಯವನ ಬಳಿ ಮಾತನಾಡುತ್ತಿದ್ದುದು ನನ್ನ ಕಿವಿಗೆ ಬಿತ್ತು – ''ಯಾರೋ ಮುದುಕರು ಪೇಪರ್‌ಗೆ ಬರೆದು ಹಾಕವ್ರೆ. ಅವ್ರಿಗೆ ಬೇರೆ ಕೆಲ್ಸ ಇಲ್ಲ'' ಅಂತ.

ನನಗೆ ನಗು ಬಂತು.

ನೋಡ ನೋಡುತ್ತಿದ್ದಂತೆ ಹೊಸ ಪೈಪು ಜೋಡಿಸಿದರು. ತೋಡಿದ್ದ ಹಳ್ಳವನ್ನು ಮುಚ್ಚಿದರು. ಕೆಲಸದಾಳುಗಳು ಹೊರಟೇಬಿಟ್ಟರು. ಈಗ ಮೋರಿಯಲ್ಲಿ ನೀರು ಹರಿಯುವುದು ನಿಂತಿತ್ತು.

ನನ್ನ ಮನಸ್ಸಿಗೆ ನೆಮ್ಮದಿ ಆಯಿತು. ''ಮಣದಷ್ಟು ಮಾತಿಗಿಂತ ತೊಲದಷ್ಟು ಕೃತಿ ಲೇಸು'' ಎನ್ನುವುದು ಎಷ್ಟು ನಿಜ ಅಂದುಕೊಂಡೆ.

ಎಲ್ಲೋ ಹೊರಗೆ ಹೋಗಿದ್ದ ರಾಯರು ಮನೆಗೆ ಬಂದಾಗ ''ಏನೇ, ಮೋರಿಯಲ್ಲಿ ನೀರು ಹರೀತಿಲ್ಲ... ಆಳುಗಳು ಬಂದಿದ್ರಾ?''ಎಂದರು ಆಶ್ಚರ್ಯದಿಂದ.

''ಹೌದು, ಈಗ ತಾನೇ ಕೆಲಸ ಮುಗಿಸಿಹೋದರು'' ಎಂದೆ ಸಂತೃಪ್ತಿಯ ದನಿಯಲ್ಲಿ.

''ಅಲ್ವೇ, ನೀನು ನಿಜಕ್ಕೂ ಹಟವಾದಿ ಕಣೆ. ಸಮುದಾಯದ ಒಳಿತಿಗಾಗಿ ಹೀಗೆ ಹಟ ಸಾಧಿಸುವವರು ಹಿಂದೆ ಇದ್ದರು. ಗಾಂಧಿ-ನೆಹ್ರೂ-ಶಾಸ್ತ್ರಿ ಅವರ ನಂತರ ನಡೆದ ಪ್ರಯೋಗಗಳಲ್ಲಿ ಪುರುಷನ ವೈಫಲ್ಯ ಎದ್ದು ತೋರಿದೆ. ಉದ್ಧಾರವಾಗುವುದಿದ್ದರೆ ಅದು ಸ್ತ್ರೀಶಕ್ತಿಯಿಂದಲೇ ಸಾಧ್ಯ ಎನ್ನುವಂತಿದೆ ನಮ್ಮಲ್ಲಿ ಇವತ್ತಿನ ಬೆಳವಣಿಗೆ. ಇದಕ್ಕೆ ನಿನ್ನಂಥ ಹೀರೋಯಿನ್ನು ''ಇನ್'' ಆದರೆ ಮಾತ್ರ ಸಾಧ್ಯ!'' ಎಂದು ರಾಯರು ಉತ್ಸಾಹದಿಂದ ಎಲ್ಲೆಲ್ಲಿಗೋ ತಂದು ನಿಲ್ಲಿಸಿದರು.

**ಕೆ. ವಿ. ಉಭಯಭಾರತಿ**
ನಂ. ೧೮೦/೨೮, 'ಇಂಚರ', ೧೫ನೇ ಮೈನ್, ೩ನೇ ಕ್ರಾಸ್,
ಕುರುಬರಹಳ್ಳಿ, ಮಹಾಲಕ್ಷ್ಮಿಪುರಂ, ಬೆಂಗಳೂರು - ೫೬೦ ೦೮೬

ಸೀತಮ್ಮ ಆ ಮನೆಗೆ ಬಂದಾಗ ಬೋಳು ಮುತ್ತೈದೆಯಂತೆ ಬಂದರು. ಕಂದಿದ ಮುಖ, ಕೈಯಲ್ಲೊಂದು ದೈನೇಸಿ ಬ್ಯಾಗು, ಅದರೊಳಗೆ ಒಂದೋ ಎರಡೋ ಸೀರೆ, ಕಾಲಲ್ಲಿ ಹರಿದು ತೇಪೆ ಹಾಕಿದ್ದ ಚಪ್ಪಲಿ, ಕೈಯಲ್ಲಿ ಬಣ್ಣ ಕಳೆದ ಗಾಜಿನ ಬಳೆ, ಕಿವಿಯಲ್ಲಿ ಎಣ್ಣೆಗಟ್ಟಿದ ಕೆಂಪುಹರಳಿನ ವಾಲೆ, ಕೊರಳಲ್ಲಿ ಸಪಾಟಾದ ಕರಿಮಣಿಯ ಸರ, ಹಣೆಯಲ್ಲಿ ಹುಡಿ ಕುಂಕುಮ. ಕುದುರೇರ ಮನೆ ಸೀತಮ್ಮೋರು ನಾಳೆಯಿಂದ ಅಡಿಗೆ ಇತ್ಯಾದಿ ಕೆಲಸಕ್ಕೆ ಮನೆಯಲ್ಲೇ ಇರಲು ಬರುತ್ತಾರೆ ಅಂದಾಗ ವಿಶ್ವನಾಥಯ್ಯನೋರ ಮನೆ ಮಕ್ಕಳು ಯಾರೋ ವಯಸ್ಸಾದ ವಿಧವೆ ಬರುತ್ತಾರೆ ಅಂತ ಎಣಿಸಿದ್ದರಿಂದ ಹಣೆಗಿಟ್ಟ ಮುತ್ತೈದೆಯನ್ನು ನೋಡಿದಾಗ ಸ್ವಲ್ಪ ತಬ್ಬಿಬ್ಬಾದದ್ದುಂಟು. 'ಗಂಡ ಇದಾರಾ ?' ಅಂತ ಪಿಸುವಾಗಿ ಕೇಳಿದ ಹಿರೀಮಗನ್ನ ಕಣ್ಣಲ್ಲೇ ಸುಮ್ಮನಾಗಿಸಿದ್ದರು ವಿಶ್ವನಾಥಯ್ಯನೋರ ಹೆಂಡತಿ ಪಾರತಮ್ಮ. ವಾರದಿಂದ ಸರಿಯಾಗಿ ಅಡಿಗೆ ಕಾಣದ ಮನೆಯಲ್ಲಿ ಬತ್ತಿದ ಸೀತಮ್ಮನ ಮುಖವೂ ಸ್ವಲ್ಪ ಸಮಾಧಾನ ತಂದಿತ್ತು. 'ಬಂದ್ರಾ...' ಎಂದು ಕ್ಷೀಣ ನಗೆಯಿಂದ ಮಲಗಿದಲ್ಲೇ ಸ್ವಾಗತಿಸಿದ ಪಾರ್ವತಮ್ಮನ ಉಪಚಾರಕ್ಕೆ 'ಹೂಂ...' ಎಂದು ಕಂದಿದ ಕೊರಳಲ್ಲೇ ಉತ್ತರಿಸಿದ್ದರು ಸೀತಮ್ಮ. ಮುಂದೆ ಮಾತಾಡಬೇಕೆನ್ನುವ ಹೊತ್ತಿಗೆ ವಿಶ್ವನಾಥಯ್ಯ 'ಬನ್ನಿ, ಅಡ್ಗೆ ಮನೆ ತೋರಿಸ್ತೀನಿ. ನಮ್ಮದಿನ್ನೂ ಕಾಫಿ ಆಗಿಲ್ಲ' ಎಂದು ಕರ್ತವ್ಯದ ನೆನಪು ಮಾಡಿಕೊಡುವವರಂತೆ ಅಡಿಗೆ ಮನೆಗೆ ಕರೆದೊಯ್ದಿದ್ದರು. ಹತ್ತು ನಿಮಿಷದಲ್ಲಿ ಕಾಫಿ ಸರಬರಾಜಾದಾಗ ಸದ್ಯ ನಾಳೆಯಿಂದ ಹೊತ್ತು ಹೊತ್ತಿಗೆ ಕೂಳಾದರೂ ಸಿಗಬಹುದು ಎಂಬ ಸಮಾಧಾನ ಎಲ್ಲರ ಮುಖದಲ್ಲಿ ಎದ್ದುಕಾಣಿಸುತ್ತಿತ್ತು.

ದೊಡ್ಡ ಹುದ್ದೆಯಲ್ಲಿದ್ದ ವಿಶ್ವನಾಥಯ್ಯನೋರ ಹರವಾದ ಮನೆಯಲ್ಲಿ ಗಾಳಿ ಸಹ ಗಟ್ಟಿಯಾಗಿ ಉಸಿರಾಡಿದ್ದಿಲ್ಲ. ಮನೆಯಲ್ಲಿದ್ದರೂ ಆಫೀಸಿನಲ್ಲಿರುವಂತೆ ಗುಮ್ಮನೆ ಗುಸಕನೆ ಇದ್ದ ಅಪ್ಪ ಮಕ್ಕಳ ಮಧ್ಯೆ ಕೆಲಸದ ಹುಡುಗ ಹನ್ನೆರಡು ವರ್ಷದ ಚುಲ್ಬಾರಿ ಚಂದ್ರ ಮಾತ್ರ ಮುಖದ ತುಂಬ ಜಿನುಗುತ್ತಿದ್ದ ಉತ್ಸಾಹವನ್ನು ತಡೆಹಿಡಿಯಲಾರದವನಂತೆ ತುಳುಕಿಸುತ್ತಿದ್ದ. ಆ ಮನೆಯಲ್ಲಿ ಬಾಯಿತುಂಬಾ 'ಸೀತಮ್ಮೋರೆ' ಅಂತ ಮೊದಲ ದಿನದಿಂದ ಯಾವ ಬಿಂಕವೂ ಇಲ್ಲದೆ ಕರೆದವನೂ ಅವನೇ. 'ಕಪ್ಪು ಬಸಿ ತೊಳೆದಿಟ್ಟಿದೀನಿ ನೋಡಿ ಸೀತಮ್ಮೋರೆ, ಇದು ನನ್ನ ಕಪ್ಪು. ಅದೇ ಕಾಪಿಪುಡಿಗೆ ಎರಡ್ನೇ ಸಲ ಡಿಕಾಕ್ಷನ್ ಹಾಕಿ ಅದರಿಂದ ನನ್ಗೆ ಕಾಪಿ ಮಾಡ್ಬೇಕು. ಮಾಡಿದ್ಮೇಲೆ ಒಂದು ಸಲ 'ಚಂದ್ರಾ' ಅಂತ ಕೂಗ್ ಹಾಕಿ. ಮುಂದ್ಗಡೆ ಕಸ ಗುಡಿಸ್ತಾ ಇರ್ತೀನಿ, ದೀಪ ಹಚ್ಕೊಳ್ಳುಂಚೆ ಮುಗಿಸ್ಬೇಕು. ಒಂದೇ ಕೂಗ್ಗೆ ವಾಟ ಬಂದ್ಬಿಡ್ತೀನಿ. ಆಂ... ?' – ವಟಗುಟ್ಟಿದ ಹುಡುಗನ ಕಡೆಗೊಂದು ಸಲ ನಿರಾಸಕ್ತಿಯ ದೃಷ್ಟಿ ಬೀರಿದರು ಸೀತಮ್ಮ. 'ಎಂಥದಿದು ಎರಡ್ನೆ ಸಲದ ಡಿಕಾಕ್ಷನ್ ?' ಅಂತ ಕೇಳಬೇಕೆಂದುಕೊಳ್ಳುವ ಹೊತ್ತಿಗೆ ಮನೆ ಯಜಮಾನನ ಮುಖ ಕಂಡಿತ್ತು. ಸುಮ್ಮನಾದರು.

ಎಲ್ಲರಿಗೂ ಕಾಫಿ ಮಾಡಿಕೊಟ್ಟು ಚಂದ್ರನ ಕಪ್ಪಿನಲ್ಲೂ ಅದೇ ಕಾಫಿ ಬಗ್ಗಿಸಿ ಕರೆದಾಗ ಬಂದು ಸೊರ್ರೆಂದು ಒಂದು ಗುಟುಕು ಹೀರಿದ ಹುಡುಗ ಆಶ್ಚರ್ಯದಿಂದ ಅವರ ಮುಖವನ್ನೊಮ್ಮೆ ನೋಡಿ 'ಇವತ್ತೊಂದೇ ದಿನ ಈ ಭಾಗ್ಯ, ನಾಳೆ ಕಲ್ತುಕೊಳ್ತೀರಾ ಬಿಡಿ' ಅನ್ನುವಂತೆ ನಕ್ಕಿದ್ದ. ಕಾಫಿ ಕುಡಿಯುತ್ತಲೇ ಸುತ್ತ ಕಣ್ಣು ಹಾಯಿಸಿದ ಸೀತಮ್ಮನೋರಿಗೆ ಅಡಿಗೆಮನೆ ಕಪಾಟಿನ ಚಿಲಕದಿಂದ ತೂಗುಬಿದ್ದ ಬೀಗ ಮತ್ತು ಎಸಳು ಗಲಿಬಿಲಿಗೊಳಿಸಿದವು. ಇತ್ತ ನೋಡಿದರೆ ಫ್ರಿಜ್ಜಿಗೂ ಅದೇ ಗತಿ! ಸ್ವಲ್ಪ ಬಾಗಿದರೆ ಡೈನಿಂಗ್ ರೂಮಿನ ಕಪಾಟೂ ಸಹ ಅವರನ್ನು ನೋಡಿ ನಕ್ಕಿತು. ಎಡಕ್ಕೆ ಕಣ್ಣು ಹಾಯಿಸಿದರೆ ಸಂಜೆಗತ್ತಲಲ್ಲಿ ಮಬ್ಬಾಗಿ ಕಂಡ ಡಬ್ಬಗಳು ಅದು ಸ್ಟೋರ್ ರೂಮೆಂದು ಸೂಚಿಸಿದವು. ಕಾಫಿಯಾದ ಮೇಲೆ ಏನ್ಮಾಡಬೇಕು ಎಂಬ ಯೋಚನೆಯಲ್ಲಿದ್ದಾಗ ಸರಿಯಾಗಿ ಮನೆ ಯಜಮಾನರು ಬಂದರು. 'ರಾತ್ರೀಗೆ ಒಂದು ಅನ್ನ ಸಾರು, ಸೌತೆಕಾಯಿ ಕೋಸಂಬರಿ ಮಾಡಿದ್ರೆ ಸಾಕು. ಪಾಪ ಈಗ ಬಂದಿದೀರಾ, ಎಲ್ಲೆಲ್ಲಿ ಏನೇನು ಅಂತ ಗೊತ್ಮಾಡಿಕೊಳ್ಳೋಕೆ ಟೈಮಾಗುತ್ತೆ. ಅಕ್ಕಿ ಸ್ಟೋರಿನಲ್ಲಿದೆ. ತರಕಾರಿ ಫ್ರಿಜ್ಜಲ್ಲಿ. ಚೆನ್ನಾಗಿ ತೊಳೆದುಹಾಕಿ. ನಿಮ್ಮನೆ ಅಂತಾನೇ ಅನ್ಕೊಳ್ಳಿ. ಜಾಸ್ತಿ ಮಾಡೋದು ಬೇಡ' ಅಂತ ಚುಟುಕಾಗಿ ಹೇಳಿದ ವಿಶ್ವನಾಥಯ್ಯನೋರ ಅಪ್ಪಣೆಗೆ ತಲೆಯಲ್ಲಾಡಿಸಿದರು ಸೀತಮ್ಮ. ಮನೆ ಯಜಮಾನರೇನೋ ಸರಿ. ಆದರೆ ವಿಶ್ವನಾಥಯ್ಯನೋರು ಸೀತಮ್ಮನಿಗೆ ದೂರದ ಸಂಬಂಧಿಯೂ ಹೌದು. ಆ ಕಾಲಕ್ಕೇ ಆರಂಭ ಬಿಟ್ಟು, ಪಟ್ಟಣ ಸೇರಿ ಕಾರ್ಖಾನೆಯಲ್ಲಿ ಉದ್ಯೋಗ ಮಾಡುತ್ತಾ ಮೆಟ್ಟಲು ಮೆಟ್ಟಿಲಾಗಿ ಮೇಲೇರಿ ಅಧಿಕಾರದ ಗದ್ದುಗೆ ಏರಿದ ವಿಶ್ವನಾಥಯ್ಯನೋರ ಬಗ್ಗೆ ವಾಪೆಯುವರು ಸೇರಿದಾಗೆಲ್ಲಾ ಮಾತಾಡುತ್ತಿದ್ದದ್ದು ಸಾಮಾನ್ಯ. 'ಅತಿ ಶಿಸ್ತಿನ ಮನುಷ್ಯ. ಎದುರಿಗೆ ಬಂದರೆ ಹೆಂಡತಿ ಮಕ್ಕಳೇನು, ಫ್ಯಾಕ್ಟರಿ ಕೆಲಸದವರೂ ಗಟ್ಟಿಯಾಗಿ ಉಸಿರು ಬಿಡಲಾರ್ರು. ಯಾಪಾಟಿ ಶಿಸ್ತು



# ಗಾದೆ ಗೂಚೆ

ಸುಕನ್ಯಾ ಕನಾರಳ್ಳಿ

ಅದು' ಅಂತ ನೆಂಟರು ಮಾತಾಡಿದ್ದು ಸೀತಮ್ಮ ಕೇಳಿದ್ದಲ್ಲ. ಅಂಥ ಮನುಷ್ಯಾ ತಮ್ಮ ಮನೆಗೆ ಒಂದಿನ ಧುತ್ತನೆ ಇಳಿದಾಗ ತಬ್ಬಿಬ್ಬಾಗಿತ್ತು ಹೌದಲ್ಲ!

ಬಂದ ಒಂದೆರಡು ದಿನ ಸೀತಮ್ಮ 'ಹೂಂ', 'ಉಹೂಂ'ನಲ್ಲೇ ನಿಭಾಯಿಸಿದರು. 'ಇದೇನ್ ಈ ಹೆಂಗ್ಸು ಮಾತಾಡ್ಲೇ ಒಲ್ದು' ಅಂತ ಪಾರತಮ್ಮ ಕ್ಷೀಣವಾಗಿ ಗೊಣಗಿದಾಗ 'ಸುಮ್ನಿರೀ ತಾಯಿ, ಹೊಸಾ ಜಾಗ, ಹೊಸಾ ಜನ' ಅಂತ ವಿಶ್ವನಾಥಯ್ಯನೋರು ಸಾವರಿಸಿದರು. 'ನೋಡೀ ಸೀತಮ್ಮನೋರೆ, ನಮ್ಮನ್ನೆಲ್ಲಾ ನೋಡಿ ಭಯಗಿಯ ಪಟ್ಕೋಬೇಡೀ, ಅಥವಾ ಸಿಟಿ ನೋಡಿ ಹೆದರಿದ್ರೋ ಹೇಗೆ?' ಅಂತ ಅವರೇ ಧೈರ್ಯ ಹೇಳಿದ್ರೂ ಸೀತಮ್ಮ ತಲೆತಗ್ಗಿಸಿ ನಿಂತರೇ ಹೊರತು ಪಿಟ್ಟಪೀ ಅನ್ನಲಿಲ್ಲ. ಮಾತೋ ಮೌನವೋ, ಮನೆ ವಿದ್ಯಮಾನಗಳು ಒಂದೊಂದಾಗಿ ತಲೆ ಹೊಕ್ಕಲಾರಂಭಿಸಿದವು. ಎರಡ್ನೆ ಡಿಕಾಕ್ಷನ್ ಕಾಫಿ ಯಾರು ಕುಡೀಬೇಕು, ಮಾಡಿದ ಅಡುಗೆಯಲ್ಲಿ ಹಚ್ಚದಾಗಿರೋ ಎಷ್ಟು ಭಾಗ ಮನೆ ಯಜಮಾನನಿಗೆ ತೆಗೆದಿಡಬೇಕು, ಎರಡ್ನೇ ಪಂಕ್ತಿಗೆ ಯಾರು ಅರ್ಹರು, ಮನೆ ಮುಖ್ಯಸ್ಥನಿಗೆ ಮೊಸರು ತೆಗೆದಿಟ್ಟ ಮೇಲೆ ಎಷ್ಟು ನೀರು ಬೆರೆಸಿ ಉಳಿದವರಿಗೆಲ್ಲಾ ಇಡಬೇಕು, ರಾತ್ರಿ ಚೊಕ್ಕವಾಗಿ ಬರೀ ನಾಲ್ಕು ಚಪಾತಿ ಮಾಡಿ ಇಷ್ಟೇ ಚಟ್ನಿ ಮಾಡಿ ಮಧ್ಯಾಹ್ನದ ಸಾರಿನ ಹೋಳುಗಳನ್ನೆಲ್ಲ ಯಜಮಾನರ ತಟ್ಟೆಯ ಪುಟ್ಟ ಬಟ್ಟಲುಗಳಲ್ಲಿ ಇಟ್ಟ ಮೇಲೆ ಉಳಿದ ಸಾರು ಸಾಕಾಗದಿದ್ದರೆ ಇನ್ನೊಂದು ಸ್ವಲ್ಪ ನೀರಿನ ಜೊತೆ ಸಾರಿನ ಪುಡಿ ಹಾಕಿ ಗಮ್ಮೆನ್ನುವಂತೆ ಕುದಿಸಿ ಟೇಬಲ್ ಮೇಲೆ ಉಳಿದವರಿಗೆ ಇಡಬೇಕು. ಹದಿನೈದು ದಿನಕ್ಕೊಮ್ಮೆ ಮಿಕ್ಸಿಯಲ್ಲಿ ಹುಳಿಮೊಸರಿನ ಜೊತೆ ಕೂಡಿಸಿಟ್ಟ ಕೆನೆಯನ್ನು ಹಾಕಿ ಬೆಣ್ಣೆ ತೆಗೆದು ತುಪ್ಪ ಕಾಯ್ಸಿ ಅಂಗಡಿಯ ತುಪ್ಪದ ಬಾಟ್ಲಿಯಲ್ಲಿ ಹಾಕಿಡಬೇಕು ಇತ್ಯಾದಿ ಇತ್ಯಾದಿ. ಎಲ್ಲ ಪಾರತಮ್ಮೋರೇ ಖುದ್ದಾಗಿ ಸೀತಮ್ಮನ ಕರೆದು ತಲೆದೆಸೆಯಲ್ಲಿ ಕೂರಿಸಿಕೊಂಡು ಮೆಲುದನಿಯಲ್ಲಿ ಹೇಳಿಕೊಟ್ಟ ಪಾಠಗಳು. ಅವರಿಗೆ ಈ ಪಾಠಗಳು ಹೇಗೆ ಬಂದುವೋ ಏನೋ. ಎರಡು ದಿನದಲ್ಲಿ ಕಲಿತ ಪಾಠಗಳು ಹೇಗೆ ಯಾಕೆ ಅನ್ನುವುದನ್ನು ನಾಲ್ಕು ದಿನದಲ್ಲಿ ಕಲಿಸಲಾರವೆ? ಸೀತಮ್ಮ ಹೂಂಗುಟ್ಟಿದ್ದರು.

ಪಾರತಮ್ಮೋರ 'ದೊಡ್ಡ' ಆಪರೇಷನ್ ಸೀತಮ್ಮನವರನ್ನ ಆ ಮನೆಗೆ ತಂದಿತ್ತು. ಕಡ್ಡಾಯ ಆರು ತಿಂಗಳು ಬೆಡ್‌ರೆಸ್ಟ್ ಅಂತ ಡಾಕ್ಟರು ಹೇಳಿ ಮನೆಗೆ ಕಳಿಸಿಕೊಟ್ಟಾಗ ಮನೆ ನಿಭಾಯ್ಸೋದು ಹೇಗಪ್ಪಾ ಅನ್ನುವ ಚಿಂತೆಯಲ್ಲಿಯೇ ವಿಶ್ವನಾಥಯ್ಯ ಮೂರುದಿನ ಕಳೆದಿದ್ದರು. ಮಾರನೇ ದಿನ ಹಠಾತ್ತಾಗಿ ಈ ದೂರದ ಸಂಬಂಧಿ ಸೀತಮ್ಮನ ನೆನಪು ಬಂದಿದ್ದು. ಮುದಿ ಗಂಡ ಸತ್ತು ಇದ್ದೊಬ್ಬ ಮಗ ಬೇರೆ ಹೋಗಿ ಸೀತಮ್ಮ ಒಬ್ಬರೇ ಬಾಳ್ತಾಕ್ತಾ ಇದ್ದದ್ದು ಅವರಿವರಿಂದ ವಿಶ್ವನಾಥಯ್ಯನೋರಿಗೆ ಗೊತ್ತಿತ್ತು. ಗಂಡ ಸತ್ತರೂ ಕುಂಕುಮ ತೆಗೆಯದ ಘಟವಾಣಿ ಹೆಂಗಸು ಅಂತ ಅತ್ತಿತ್ತ ಜನ ಮಾತಾಡಿಕೊಂಡರೂ ಸಿಟಿಯಲ್ಲಿದ್ದ ವಿಶ್ವನಾಥಯ್ಯನೋರಿಗೆ ಅದರಲ್ಲೂ ಈಗಿನ ಪರಿಸ್ಥಿತಿಯಲ್ಲಿ ಅದು ಮುಖ್ಯ ಅಂತ ಅನ್ನಿಸಿರಲಿಲ್ಲ.

ಬಂದ ಹತ್ತು ದಿನ ಸೀತಮ್ಮ ಮಾತೇ ಮರೆತಷ್ಟು ವಿಸ್ಮಯದಲ್ಲಿ ದೊಡ್ಡ ಊರಿನ ದೊಡ್ಡ ಮನೆಯ ಪರಿಚಯ ಮಾಡಿಕೊಳ್ಳುತ್ತಾ ಹೋದರು. 'ಹೆಂಗೆ', 'ಯಾಕೆ'ಗಳಿಗೆ ಚುಲ್ಬಾರಿ ಚಂದ್ರನ್ನ ಬಿಟ್ಟರೆ ಬೇರೆ ಯಾರಿಗೂ ಪುರುಸೊತ್ತಿದ್ದಂತೆ ಇರಲಿಲ್ಲ. ತೀರಾ ನಿಶ್ಶಕ್ತಿಯಲ್ಲಿ ನಿತ್ರಾಣರಾಗಿ ಮಲಗಿರುತ್ತಿದ್ದ ಪಾರತಮ್ಮನವರಿಗೆ ಹೊತ್ತುಹೊತ್ತಿಗೆ ಮುಖ ತೊಳೆಸಿ ಸ್ನಾನ ಮಾಡಿಸಿ ಊಟ ಕೊಟ್ಟರೆ ಮುಗೀತು, ಶತಮಾನಗಳ ಸುಸ್ತನ್ನು ಕಳೆಯುವಂತೆ ನಿದ್ದೆ ಮಾಡೋದೊಂದೇ ಕೆಲಸ.

ನಿನ್ನೆ ನಾಳೆ ಇವತ್ತುಗಳ ಮಧ್ಯೆ ಹೀಗೆ ಗಿರಕಿ ಹೊಡೆಯುತ್ತಿದ್ದ ದಿನಚರಿಗೆ ಭಂಗ ಬಂದಿದ್ದು ಅಕಸ್ಮಾತ್ತಾಗಿ, ಸೀತಮ್ಮ ಬಂದ ಹತ್ತೋ ಹದಿನೈದು ದಿನಗಳ ನಂತರ. ಬೆಳಗಿನ ಹೊತ್ತು ಟೀಡಿ ಡೀಡೀಡಿಂ ಎಂದು ಆರು ಗಂಟೆಗೆ ಶುರುವಾಗುವ ಆಕಾಶವಾಣಿ ರಾಗದ ಜೊತೆಗೆ ಉಸಿರೆಳೆದುಕೊಳ್ಳುತ್ತಿದ್ದ ರೂಮಿನ ರೇಡಿಯೊ ಮತ್ತು ಡೈನಿಂಗ್ ರೂಮಿನ ಪುಟ್ಟ ಸ್ಪೀಕರ್‌ಗಳು ಪ್ರದೇಶ ಸಮಾಚಾರ ಮತ್ತು ವಾರ್ತೆಗಳು ಇತ್ಯಾದಿಗಳನ್ನು ಬಿತ್ತರಿಸುವ ಸಮಯ. ಅದ್ಯಾಕೋ ಏನೋ ರೂಮಿನಲ್ಲಿ ಗಂಡ ಹೆಂಡತಿಗೆ ವಾಗ್ವಾದ ಹತ್ತಿಕೊಂಡಿತ್ತು. ಇಬ್ಬರ ಸ್ವರವೂ ಏರುತ್ತಿದ್ದಂತೆ ರೇಡಿಯೋ ಸ್ವರವೂ ಏರುತ್ತಾ ಹೋಗಿ ಇನ್ನು ಏರುವುದು ಸಾಧ್ಯವಿಲ್ಲದಾಗ ರೂಮಿನ ಬಾಗಿಲು ಟಪ್ಪನೆ ಮುಚ್ಚಲ್ಪಟ್ಟರೂ ಮಾತಿನ ಫೋರ್ಸ್ ಅಡಿಗೆಮನೆಯಲ್ಲಿದ್ದ ಸೀತಮ್ಮನವರಿಗೂ ಓಡಾಡುತ್ತಿದ್ದ ಮಕ್ಕಳಿಗೂ ವೆರಾಂಡ ಒರೆಸುತ್ತಿದ್ದ ಚುಲ್ಬಾರಿಗೂ ಅಲ್ಪಸ್ವಲ್ಪ ಕೇಳುತ್ತಿತ್ತು. ಸ್ವಲ್ಪ ಹೊತ್ತಿನ ನಂತರ ದಢಾರನೆ ಬಾಗಿಲು ತೆಗೆದ ವಿಶ್ವನಾಥಯ್ಯನೋರು, 'ಸೀತಮ್ಮೋರೇ, ತಿಂಡಿ ಟೇಬಲ್ ಮೇಲೆ ಬಡೀರಿ, ನಾನ್ ಬೇಗ ತೊಲಗಬೇಕು' ಅಂದಾಗ ಪಾಪದ ಹೆಂಗಸು ಹೆಚ್ಚೂಕಮ್ಮಿ ಬೆಚ್ಚಿಬಿದ್ದಿತ್ತು. ತಿಂಡಿ 'ಬಡಿದಿದ್ದೂ' ಆಯ್ತು. ಯಜಮಾನರು ತೊಲಗಿದ್ದೂ ಆಯ್ತು. ರೂಮಲ್ಲಿ ಮೂರನೇ ಮಗ 'ಮಹಾಯುದ್ಧದ ಮುಂದಿನ ಭಾಗ ಸಾಯಂಕಾಲ ಬೆಳ್ಳಿ ತೆರೆಯ ಮೇಲೆ ನೋಡಿ ಆನಂದಿಸಿ' ಅಂತ ಗೊಣಗಿದ್ದೂ ಆಯ್ತು. ತಟ್ಟೇಲಿ ರೊಟ್ಟಿ ಪಲ್ಯ ಇಟ್ಕೊಂಡು ಪಾರತಮ್ಮನ ಎಬ್ಬಿಸೋಕೆ ಹೋದ ಸೀತಮ್ಮನೋರಿಗೆ ಕಣ್ಣೀರಿಡುತ್ತಾ ಗೋಡೆ ಕಡೆ ಮುಖ ತಿರುವಿ ಮಲಗಿದ್ದ ಹೆಂಗಸನ್ನು ನೋಡಿ ಮನಸ್ಸು ಚುರುಕ್ಕೆಂದಿರಬೇಕು. 'ಯಾಕೀ... ಯಾಕಳ್ತಾ ಇದೀರೀ? ಏಳಿ... ಅದೇನೋ ಹೇಳ್ತಾರಲ್ಲ... ತುತ್ತೂರಿ ಊದಿದ್ರೆ ತುಪ್ಪಟ ಬರ್ತದಾ ಅಂತ... ಹಂಗಾಯ್ತು. ಅತ್ರೇನು ಬಂತು? ತಬ್ಲಿ ತಲೆ ಬೋಳಿಸ್ಕೊಂಡ್ರೆ ಅಳೋರ್ ಯಾರು? ಬರೀ ಆರ್ಭಟ... ಎಲ್ಲಾದಕ್ಕೂ ಆರ್ಭಟ. ಹಿಂದ್ನವರು ಹೇಳ್ದಂಗೆ ತಿಕಾಮಕ ಒಂದೇ ತಿಪ್ಪಾಭಟ್ಟರಿಗೆ! ಹೆಂಗ್ಸಿನ ಸಂಕ್ಟ ಏನ್ ಗೊತ್ತಾದಾತು ಇವರ್ಗೆಲ್ಲಾ? ತಲೆ ಒಡೆದವನೂ ಸಮಾ... ಲೇಪ ಹಚ್ದವನೂ ಸಮಾ ಈ ಗಂಡಸ್ ಜಾತಿಗೆ. ಏಳಿ, ಅಳೋಕ್ಕೂ ತ್ರಾಣ ಬೇಕಲ್ಲಾ... ತಿಂದ್ ಅಳೋವ್ರಂತೆ...'

ಪಟಪಟನೆ ಆಡಿದ ಮಾತುಗಳ ಆ ಕ್ಷಣದಲ್ಲಿ ಇಬ್ಬರ ಮಧ್ಯೆ ಒಂದು ಬಂಧ ಹೊಂದಿದ್ದಂತೂ ನಿಜ. ಜಗಮೊಂಡಿ ಪಾರತಮ್ಮ ಸೀತಮ್ಮನ ಗಾದೆ ಸಂಪತ್ತಿಗೆ ಸೋತರೋ, ಹೆಣ್ಣು ಮನಸ್ಸಿನ ಕಳಕಳಿಗೆ ಸೋತರೋ ಅಥವಾ ಹೆಚ್ಚು ಬಾಯ್ಬಿಟ್ಟಿರದ ಸೀತಮ್ಮ ಇಷ್ಟು ಮಾತಾಡಿದ್ದಕ್ಕೆ ಸೋತರೋ, ಅಂತೂ ಪಿಟ್ಕೆನ್ನದೆ ಮುಖತೊಳೆದು ತಿಂಡಿ ತಿಂದರು.

'ಹೆಣ್ಜನ್ಮ ಅಂದ್ರೆ ಇಷ್ಟೇ ಅಂತ ಮಾಡ್ ಹಾಕಿದಾರಲ್ಲ! ಅದೂ ಯಾರು? ಆ ಬ್ರಹ್ಮ ಅಲ್ಲ, ಶಿವ ಅಲ್ಲ, ಈ ಗಂಡ್‌ಮುಂಡೇ ಮಕ್ಳು ತಾನೇ? ಅದೇನೋ ಹೇಳ್ತಾರಲ್ಲ... ತುಂಗಭದ್ರೇಗ್ ಹೋದ್ರೂ ಭಂಗ ಪಡೋದು ತಪ್ಪಿಲ್ಲಾ ಅಂತ. ಹಂಗೇ ಕಣೇ ನಮ್ ಪಾಡೂನೂ. ಯಾರ ಹೆಂಡ್ತಿ ಆದ್ರೇನು? ಏನ್ ಓದಿದ್ರೇನು? ಏನ್ ಸಂಬ್ಳ ತಂದ್ರೇನು? ತಿರುಳ್ ತಿಂದ್ರೂ ಮರುಳ್ ಹೋಗ್ನಾರ್ದು. ಅದೇನೋ ಹೇಳ್ತಾರಲ್ಲ, ಅಗ್ರಹಾರಕ್ಕ್ ಹೋದ್ರೂ ದುರಾಗ್ರಹ ಬಿಡ್ಲಿಲ್ಲ ಅಂತ. ಮಾಣಿಕ್ಯ ಕೊಟ್ರೂ ಮಸಿ ಬಟ್ಟೇಲ್ ಕಟ್ಟಿಡೋ ಹುಂಬ್ತನ ನಾನ್ ಕಾಣದ್ದಲ್ಲ. ಹೆಂಗ್ಸಿನ ಪಾಡು ನಾನೂ ಪಟ್ಟಿದೀನಿ ಕಣೇ. ಆದಷ್ಟೂ ಆಯ್ತು ಬರಡೆಮ್ಮೆ ಹಾಲು ಅಂತ ನಾನು ಮೂಗ್ ಮುಚ್ಕಂಡು ನೀಸಿದ್ದೇ... ಅದೇನೋ ಹೇಳ್ತಾರಲ್ಲಾ...'

ಮಾತು ಶುರು ಮಾಡಿದ ರಾಗದಿಂದಲೇ ಮುಗಿಸುವ ಸೀತಮ್ಮನ ಬಾಯಿ ಆವತ್ತು ತೆಗೆದಿದ್ದು ಆಮೇಲೆ ಮುಚ್ಚಿದ್ದೇ ಕಡಿಮೆ. ತಿಂಡಿ ತಿಂದ ಪಾರತಮ್ಮ ನಿಸೂರಾಗಿ ಅಡಿಗೆ ಮನೆಗೇ ಬಂದು ಚಕ್ಕಂಬಕ್ಕಲ ಕೂತು ಮಾತು ಆಡಿದ್ದೇ ಆಡಿದ್ದು, ಕೇಳಿದ್ದೇ ಕೇಳಿದ್ದು. ಆವತ್ತು ಸೀತಮ್ಮನೋರ ಅಡಿಗೆ ಆಗಲಿಲ್ಲ ಅಂತಲ್ಲ. ಸಾರಿಗೆ ಖಾರ ಹಾಕಿ ಮರಳಲು ಬಿಟ್ಟು ಪಾರತಮ್ಮನೋರ ಹತ್ತಿರ ಕೂತು ಆಲಿಸಿ ಕಣ್ಣೀರಾಕಿ, ಸೆರಗಿಂದ ಮುಖ ಮೂಗು ಸೀಟ್ಕೊಂಡು, ಜ್ಞಾಪಕವಾದವರಂತೆ ಗಡಬಡಿಸಿ ಎದ್ದು ಹುಳಿ ಕಿವುಚಿದ ನೀರು ಹಾಕಿ ಮತ್ತೆ ಕೂತು... ಅಂತೂ ಅಡಿಗೆ ಮುಗಿಯುವ ಹೊತ್ತಿಗೆ ಮಲಗಿದ್ದ ಗತವೆಲ್ಲವೂ ಎದ್ದು ಕೂತು ಕಥೆ ಹೇಳಿ ಹಗುರಾಗಿತ್ತು.

'ಏನ್ ಮಾಡಿದ್ರೆ ಏನ್ ಪಾರತಮ್ಮೋರೆ... ನೀವೇನೋ ಗಂಡ ಬಂದಾನೆ, ಮಕ್ಳು ಬಂದಾರೆ ಅಂತ ಹಸಿ ಕಾಯಿಸ್ಕೊಂಡು ಬಿಸಿ ಆರಿಸ್ಕೊಂಡು ಬಾಳಾಕಿದ್ರಿ. ಇವತ್ತಿಗೆ ಏನು? ಅದೇನೋ ಹೇಳ್ತಾರಲ್ಲ... ಉಂಬೋದಕ್ಕೆ ಉಡೋದಕ್ಕೆ ಅಕ್ಕನ್ನ ಕರಿ, ಕೋಳಕ್ಕೆ ಹೆಟ್ಕೋದಕ್ಕೆ ಬಾವನ್ನ ಕರಿ ಅಂತ, ಹಂಗಾಯ್ತು... ನೀನೇಯಾ ಅಂತ ಕೇಳೋರಿಲ್ಲ, ಅವರದ್ದೇ ಅವರ್ಗೆ. ಒಂಟಿ ಮಾರಿ ತಂಟೆ ತೀರ್ಸಿದ್ರೂ ದಂಟಿ ಕೋಲು ಬಿಡ್ಲಿಲ್ಲಾ ಅಂತಾರಲ್ಲ ಹಂಗಾಯ್ತು. ನಾನು ಅನುಭೋಗ್ಸಿ ಸುಸ್ತಾಗಿದೀನಿ ಕಣೆ... ಶಿವನೇ ಅನ್ನೋ ಹೊತ್ತು. ಅದ್ಯಾವಾಗ ಕರ್ಕೊಳ್ತಾನೋ ಗೊತ್ತಿಲ್ಲ. ಅದೇನೋ ಅಂತಾರಲ್ಲ, ಕುಂಡೆ ಮೇಲ್ ಬಡದ್ರೆ ದವಡೆ ಹಲ್ಲು ಮುರ್ದೀತಾ ಅಂತ? ನೀಸೇ ತೀರ್ಬೇಕು. ಏನ್ಮಾಡೀರ? ನೀಸ್ದೆ. ಮರ್ಯಾದೆ ಅನ್ನೋದು ದೊಡ್ಡದು ಅಂತ ಗಂಟು ಬಿಗಿ ಹಾಕ್ಕೊಂಡ್ ಕಾದೆ. ಗಂಡ್ ಪ್ರಾಣಿ ದೌತಿ ಒಳ್ಗೆ ಮಸಿ ಇದ್ರೆ ತಾನೇ ಹೆಣ್ ಬದುಕು ಅನ್ನೋದೂ? ಕಣ್ ಚಿಟಗುಟ್ಸೋ ಪ್ರಾಯದಲ್ಲೂ ಕಣ್ ಕಟ್ಕಂಡಂಗೆ ಬದುಕ್ದೆ. ಏನ್ ತಿಪ್ಪರ್ಲಾಗ ಹಾಕಿದ್ರೂ ಏನ್ ಬಂತು ಮಣ್ಣು? ಹಿಂದ್ನವರು ಹೇಳ್ದಂಗೆ ಕಾಟ್‌ನಾಯ್ಕನ ಮನೆಗೆ ಕನ್ನ ಹಾಕಿದ್ರೆ ಕಂಡಿದ್ದೇನು ಅಂತೀರಿ?

ನೇತಾಡ್ತಿದ್ದಿದ್ದ ಎರಡು ಬಂಗೀ ಚೀಲ ಅಷ್ಟೇಯಾ... ಕಂಡ್ ಕಂಡ್ ದೇವ್ರಿಗೆ ಕೈಮುಗಿದ್ರೂ ಗಂಡ ಇಲ್ದೆ ಮಕ್ಳಾದೀತಾ ಅಂತ ಪ್ರಾಯ ದಾಟ್ದ ಗಂಡನಿಂದ ಸಂತಾನ ಪಡ್ಯೋಕೆ ಭಾರಿ ಕಷ್ಟಪಟ್ಟೆ ಕಣೇ. ಏನ್ಮಾಡಿದ್ರೇನು ? ಹಿಂದ್ನವರು ಹೇಳ್ದಂಗೆ ಅರಸ ಬೊಬ್ಬೆ ಹೊಡೆದ್ರೆ ಊರು ನಡುಗುತ್ತೆ. ಮುದುಕ ಬೊಬ್ಬೆ ಹೊಡೆದ್ರೆ ? ಬರಿ ಗಡ್ಡ ಅಲುಗುತ್ತೆ ಅಷ್ಟೇಯಾ... ಗಾಳಿಯಿಂದ ಧೂಳು ಎದ್ರೆ ನನ್ನ ಕೋರೆ ಹೊಟ್ಟೆ ಹೆಂಗ್ ತುಂಬೀತು ? ವರ್ಷ ಎರಡಾಯ್ತು, ಮೂರಾಯ್ತು. ನಿದ್ದೆಗೆ ಕಣ್ರೆಪ್ಪೆ ಕೂಡಿದ್ದಿಲ್ಲ, ತಿಂಗಳ್ ಮುಟ್ಟು ನಿಂತಿದ್ದಿಲ್ಲ. ಬಾಯಿಗೆ ಬಂದಿದ್ದೇ ಮಾತಾಡಿದ್ರು ಎಲ್ರೂ. ನಮ್ಮಪ್ಪ ಅವ್ವ ಏನ್ ಹಿಂದೆ ಬೀಳ್ಲಿಲ್ಲಾ. ನಾನ್ ಸೋತು ಒಂದಿನ ಝಾಡಿಸ್ದೆ, 'ಚಟ್ಟ ಹತ್ತೋ ಅಯ್ನೋರ್ಗೆ ಪಟ್ಟಿಕ್ ಬರ್‍ತಾ ಇರೋ ಅಮ್ಮನ್ನ್ ಕೊಟ್ರೆ ಇನ್ನೇನಾದೀತು ?' ಅಂತ. ನಮ್ಮಪ್ಪ ಬಿಟ್ಟ್ ಬಾಯಿ ಮುಚ್ಲಿಲ್ಲ. ಅವ್ವ 'ಹಂಗ್ ಮಾತಾಡ್ಬೇಡ್ವೆ ಬಜಾರಿ... ನಿನ್ ಹಣೇಬರಾ ಕೂಡಿಬರ್‍ದಿದ್ರೆ ನಾವೇನ್ ಮಾಡೇವು ?' ಅಂತ ಕಣ್ಣೀರ್ ಹಾಕಿದ್ಳು. ಅವತ್ತು ಈ ಹೆಣ್ ಮನಸ್ಸನ್ನ ಗಟ್ಟಿ ಮಾಡ್ಕಂಡೆ ಕಣೇ, ಬ್ಯಾಡ ಇನ್ ಬ್ಯಾಡ ಅಂತ. ತಿಪ್ಪೆ ಮೇಲ್ ಮಲ್ಗಿ ಉಪ್ಪರಿಗೆ ಕನಸು ಕಂಡ್ರೇನ್ ಬಂತು ? ನನ್ನ ಬಂಜೆ ಅಂದವರ ನಾಲಿಗ್ಗೆ ಹುಳ ಬೀಳ್ಳಿ. ಬಾಳೆಗೆ ಕಾಳಿಯಾದ್ರೇನು, ಬೋಳಿಯಾದ್ರೇನು, ನೀರ್ ಹೊಯಿದ್ರೆ ತಾನೆ ಸರಿ ? ಗಾಳಿ ಮಂಟಪದ ಜೋಗಿ ಹಾಗೆ ಬಟಾಬಯಲಲ್ಲಿ ನಿಂತೆ. ಹಿಂದ್ ನೋಡ್ಲಿಲ್ಲ, ಮುಂದ್ ನೋಡ್ಲಿಲ್ಲ. ಹಣೇಲಿಲ್ಲದ್ದು ಹಣಿಕಿದ್ರೆ ಸಿಕ್ಕುತ್ತೇ ಅಂತ ಅವ್ವ ಹೇಳೋಳಲ್ಲ, ನಾನು ಹಣಿಕ್ದೆ ಕಣಿ. ಸಿಕ್ತು, ಕೈತುಂಬ ಹೊಟ್ಟೆ ತುಂಬ ಸಿಕ್ತು. ಗಕ್ಕನೆ ವಾಂತಿ ಮಾಡಿದ್ ದಿನ ಮುದಿಯ ಬೊಬ್ಬೆ ಹೊಡ್ದ. ನಾನು ಸದ್ದು ಹೊಡ್ದು ನಿಂತೆ, 'ನನ್ನ ತುಂಬಿರೋ ಹೊಟ್ಟೆ, ನಿನ್ನ ಮರ್ಯಾದೆನೂ ಉಳಿಸುತ್ತಲ್ಲ? ನಿನ್ನ ಮನ್ನತ ಮರ್‍ಯಾದೆ ಅಂತ ಬೊಬ್ಬೆ ಹೊಡ್ಯೋದಾದ್ರೆ ಹೊಡಿ. ತಾಳೆಮರ ಉದ್ದ ಆದ್ರೆ ಕೋಳಿಗೇನ್ ಬಂತು ಮಣ್ಣು? ನಾನ್ ಇವತ್ತೇ ಗೂಟ ಕೀಳ್ತೀನಿ' ಅಂತ ಮುಖ ಮೂತಿ ನೋಡ್ದೆ ಒದರ್‍ದೆ. ಯಾಕೋ ಗೊತ್ತಿಲ್ಲ, ಗಪ್‌ಚಿಪ್ಪಾದ. ಮಗ ದೊಡ್ಡೋನಾದ. ಅಡ್ಡಾದುಡ್ಡಿಗೆ ಮೂರಾದ್ರೆ ದುಡ್ಡು ಅಡ್ಡಕ್ಕೆಷ್ಟು ಅಂತ ಹೇಳಿದ್ದನ್ನೇ ಹೇಳ್ತಾ ಸಂಚು ಮಾಡೋಳಲ್ಲ, ಬೆಳೆದ ಮೇಲೆ ಅವಂಗೂ ಹೇಳ್ದೆ, ನೋಡಪ್ಪಾ ನನ್ನ ಸ್ಥಿತಿ ಹೀಗಿತ್ತು ಅಂತ. ಅವಂಗೆ ಏನನ್ನಿಸ್ತೋ ಗೊತ್ತಿಲ್ಲ, ಮಣಮಣ ಅಂತ ಎದ್ದೋದ. ಸಂಗೆ ಮಂತ್ರಾನೂ ಗೊತ್ತಿಲ್ಲ, ತಂತ್ರಾನೂ ಗೊತ್ತಿಲ್ಲ. ತಲೆ ಒಂದ್ ಇದ್ರೆ ಮುಂಡಾಸ್ ಸಾವಿರ ಕಟ್ಟೇನು ಅಂತ ಬದುಕ್ದವಳು ನಾನು, ಅದೇನೋ ಹೇಳ್ತಾರಲ್ಲಾ...'

ಪಾರತಮ್ಮನೋರಿಗೆ ಏನರ್ಥವಾಯ್ತೋ, ಎಷ್ಟರ್ಥವಾಯ್ತೋ, ಒಟ್ನಲ್ಲಿ ಅವರಿಬ್ಬರ ಮಾತು ಸಾಯಂಕಾಲದವರೆಗೂ ಸಾಗಿತ್ತು. ಮ್ಲಾನ ಮುಖ ಹೊತ್ತುಬಂದ ವಿಶ್ವನಾಥಯ್ಯನೋರಿಗೆ ಕಂಡಿದ್ದೇನು ? ತಿಂಗಳಿಂದ ಹಾಸಿಗೆ ಬಿಟ್ಟು ಕದಲದಿದ್ದ ಪಾರತಮ್ಮ ಮನೇ ಬಾಗಿಲಲ್ಲಿ ಕುರ್ಚಿ ಹಾಕಿಕೊಂಡು ಗೇಟಿನಾಚೆ ಹೋಗಿ ಬರೋರನ್ನ ನೋಡ್ತಾ ಕೂತಿದಾರೆ ! ಯಜಮಾನರನ್ನ ನೋಡಿದ್ದೇ ತಣ್ಣಗೆ, 'ಏ ಸೀತಮ್ನೋರೇ, ಇಲ್ನೋಡಿ ಇವರು ಬಂದಿದಾರೆ, ಕಾಫಿ ಕೊಡ್ತೀರಾ ?' ಅಂದಿದ್ದಷ್ಟೇ. ಮತ್ತೆ ಕಣ್ಣು ಗೇಟಿನಾಚೆ ನೆಟ್ಟಿತ್ತು.

...........

ಆವತ್ತಿನ ದಿನದ ಶುಭಾರಂಭ. ಆಮೇಲೆ ಸದಾ ಬಿಮ್ಮನೆ ಬಿಗಿದು ಕೂತಂತಿರುತ್ತಿದ್ದ ವಿಶ್ವನಾಥಯ್ಯನೋರ ಮನೆ ವಾತಾವರಣದಲ್ಲಿ ಗಾಳಿ ಸ್ವಲ್ಪ ಸಡಿಲವಾಗಿ ಆಡಲಾರಂಭಿಸಿತು. ಆಂ, ಊಂ, ಉಹೂಂಗಳಲ್ಲಿ ಮುಗಿಯುತ್ತಿದ್ದ ಮನುಷ್ಯರ ನಡುವಿನ ಸಂಪರ್ಕದಲ್ಲಿ ಒಂದೆರಡು ಮಾತುಗಳು ಸುಳಿಯಲಾರಂಭಿಸಿದವು. 'ಕಾಫಿ ಇದ್ಯಾ ಸೀತಮ್ನೋರೆ' ಅಂತ ಬಂದವರಿಗೆ ಈಗ ಸೀತಮ್ಮ ತುಟಿ ಹೊಲೆದುಕೊಂಡು ಕಾಫಿ ಕೊಡುತ್ತಿರಲಿಲ್ಲ. 'ಇದೇನ್ ಹೀಗ್ ಕೇಳ್ತೀರಾ ? ಅಂಗಡೀಲಿ ಚುಂಗಡಿ ಸಿಕ್ಕೋದಿಲ್ವೆ ? ಎರಡು ಗಳಿಗೇಲಿ ಕೊಟ್ಟೆ...' ಅಂತಲೋ ಚುಲ್ಬಾರಿ ಚಂದ್ರ ಹುಷಾರಿಲ್ದೆ ಮಲಗಿದ್ದ ದಿನ 'ಪಕ್ಕದ್ ರೋಡಲ್ಲಿ ತುಪ್ಪದ್ ಹೀರೇಕಾಯಿ ಮನೆಯೋರ ಕಾಂಪೌಂಡಿನಿಂದ ಕರಿಬೇವು ಕಿತ್ಕೊಂಡ್ ಬರೋಕೆ ನಿಮ್ಗೆ ಗೊತ್ತಾಗುತ್ತಾ ?' ಅಂತ ಕೇಳಿದ್ರೆ 'ಗೊತ್ತಿಲ್ದಿದ್ರೆ ಗೊತ್ತ್‌ಮಾಡ್ಕಂಡೇನು ಬಿಡೀ, ಅದೇನೋ ಹೇಳ್ತಾರಲ್ಲ... ಅಂಬು ಬಿಡಕ್ಕೆ ತಿಳೀದಿದ್ರೆ ಚೊಂಬ್ ಮುಳುಗ್ಸಕ್ಕೆ ತಿಳೀದೇ ?' ಅಂತಲೋ, 'ಇವತ್ತು ನಾಲಕ್ ಜನ ನೆಂಟ್ರು ಬರ್‍ತಾರೆ, ಏನಾದ್ರೂ ವಿಶೇಷ...' ಅಂದ್ರೆ 'ಆಯ್ತು ಬಿಡೀ ಮಾಡೋಣಂತೆ, ಜಗಾ ಜಾಲ್ನೋ ಬಡ್ಡೀಗೆ ಮಗು ತೂಗೋಕ್ಕೆ ಬರಲ್ವೋ' ಅಂತಲೋ, 'ಊಟ ಮಾಡಿದ್ರಾ ಸೀತಮ್ನೋರೇ ?' ಅಂತ ಚುಲ್ಬಾರಿ ಚಂದ್ರ ಕೇಳಿದ್ರೆ 'ಅಯ್ಯೋ... ಮಾಡಿದ್ನಪ್ಪಾ... ಕೆಟ್ಟ ಹೊಟ್ಟೆಗೆ ಎಷ್ಟ್ ಮಹಾ ಬೇಕು ? ಎರಡ್ ತುತ್ತು... ಅದೇನೋ ಹೇಳ್ತಾರಲ್ಲ... ಕತ್ತೆಗ್ ಯಾಕೆ ಕಾಲುಕಡಗ ಅಂತ ?' ಅಂತಲೋ, ಅಮ್ಮ ಮಗ ವಾಗ್ವಾದಕ್ಕಿಳಿದರೆ 'ನೋಡಪ್ಪಾ, ಏನೇ ಆಗ್ಲಿ... ಹೆತ್ತಾಕೆ... ಅವರ್‍ದೇ ತಪ್ಪಿರಬಹುದು, ನೀನೇ ಸರಿಯಿರ ಬಹುದು, ಆದ್ರೂ ಮಾತಿಗ್ ಮಾತ್ ಕೊಟ್ ಏನ್ ಬಂತೂ ? ಜೋಗೀನ ಜೋಗಿ

## ಸಾದರ ಸ್ವೀಕಾರ

**ತಲೆಯ ಮೇಲಿನ ಕೈ** (ಕಥಾ ಸಂಕಲನ)
ಶಾಂತಾರಾಮ ಸೋಮಯಾಜಿ
**ಪುಟ : ೧೦೮** **ಬೆಲೆ : ರೂ. ೫೦**

**ಮಲ್ಲಿಗೆ ಮುಗುಳು - ೨೦೦೬**
(ಪ್ರಶಸ್ತಿ ಪಡೆದ ಕತೆಗಳು, ಕವನಗಳು)
ಸಂ. ಶಾಂತಾರಾಮ ಸೋಮಯಾಜಿ
**ಪುಟ : ೯೨** **ಬೆಲೆ : ರೂ. ೪೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸುಮುಖ ಪ್ರಕಾಶನ,** ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಬಸವ ದರ್ಶನ** (ಕಾವ್ಯ) ಬಿ. ಸಿದ್ಧಗಂಗಯ್ಯ ಕಂಬಾಳು
**ಪುಟ : ೪೧೪** **ಬೆಲೆ : ರೂ. ೧೫೦**
**ಬಿ. ಎಸ್. ಕೆಂಪರಾಜು,** ನಂ. ೧೯೨, ೪ನೇ ಅಡ್ಡರಸ್ತೆ, ೭ನೇ ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು - ೪೦

**ಸುರ್ವೆಯವರ ಸಮಗ್ರ ಕವಿತೆಗಳು** ರಮೇಶ ಸುರ್ವೆ
**ಪುಟ : ೩೪೪** **ಬೆಲೆ : ರೂ. ೨೫೦**
**ಸುರ್ವೆ ಪ್ರಿಂಟರ್ಸ್ & ಪಬ್ಲಿಷರ್,** ೪೬೮, ೧ನೇ ಮಹಡಿ, ೧೩ನೇ ಮುಖ್ಯರಸ್ತೆ, ೩ನೇ ಹಂತ, ಮಂಜುನಾಥನಗರ ಬೆಂಗಳೂರು - ೫೬೦ ೦೧೦

**ಮೋಹದ ಬಲೆಯಲ್ಲಿ** (ಧ್ವನಿಸುರುಳಿ) ರಮೇಶ ಸುರ್ವೆ
**ಬೆಲೆ : ರೂ. ೪೦**
**ಇಂಪು ಆಡಿಯೋ,** ಬೆಂಗಳೂರು

**ಪಾದದಡಿಯ ಸ್ವರ್ಗ** (ಕಥಾ ಸಂಕಲನ)
ಅಬ್ದುಲ್ ಹಮೀದ್ ಪಕ್ಕಲಡ್ಕ
**ಪುಟ : ೮೦** **ಬೆಲೆ : ರೂ. ೪೦**
**ಝುಹ ಪ್ರಕಾಶನ,** ಬೊಳ್ಳಿಬಾರು, ಮಿಜಾರು ಅಂಚೆ, ಮಂಗಳೂರು ತಾಲ್ಲೂಕು (ದ.ಕ.) ೫೭೪ ೨೨೫

**ಮನ ಮಂಥನ** (ಲೇಖನಗಳು) ಸಿ. ಸೀತಾರಾಮ್
**ಪುಟ : ೧೬೨** **ಬೆಲೆ : ರೂ. ೧೨೦**
**ಸುಂದರ ಪ್ರಕಾಶನ,** ಚಿತ್ರಶ್ರೀ ಕಲಾಮಂದಿರ, ೫ನೇ ತಿರುವು, ಅ.ನ. ಸುಬ್ಬರಾವ್ ರಸ್ತೆ, ಹನುಮಂತನಗರ, ಬೆಂಗಳೂರು -೫೬೦ ೦೧೯

**ಪರುಷಮಳೆ** (ಕವನ ಸಂಕಲನ, ಬರಹಗಳು) ಬಿ. ಎಂ. ರಶೀದ್
**ಪುಟ : ೧೧೨** ೆ: ರೂ. ೮೦
**ಬಿ. ಎಂ. ರಶೀದ್ ಪ್ರಕಾಶನ,** ಪಡ್ಪುಮನೆ, ವಳಾಲು ಅಂಚೆ, ಪುತ್ತೂರು ತಾಲ್ಲೂಕು (ದ. ಕ.) - ೫೭೪ ೨೪೧

**ದಿನಚರಿಯ ಸಾಲುಗಳ ನಡುವೆ...** (ವಾಚಾಳಿಯ ಕವನಗಳು)
ವಿ. ಜೆ. ನಾಯಕ
**ಪುಟ : ೮೦** **ಬೆಲೆ : ರೂ. ೬೦**
**ಪಟೇಲ ಜೋಗಿ ನಾಯಕ ಸ್ಮಾರಕ ಗ್ರಂಥಮಾಲೆ,** ಅಂಕೋಲಾ. ಉ.ಕ., ಅಂಚೆ, ವಂದಿಗೆ - ೫೮೧ ೩೫೭

**ಕಾಶ್ಮೀರದ ಹಾಡು** (ಕವನ ಸಂಕಲನ) ಎನ್. ಜಗದೀಶ್ ಕೊಪ್ಪ
**ಪುಟ : ೫೨** **ಬೆಲೆ : ರೂ. ೪೦**
**'ಕ್ರಾಂತಿ ಸಿರಿ' ಪ್ರಕಾಶನ,** 'ಬೆಳದಿಂಗಳು', ನಂ. ೨೮೮, ೧ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ, ನಾಗರಭಾವಿ ೩ನೇ ಹಂತ, ೯ನೇ ಬ್ಲಾಕ್, ಬೆಂಗಳೂರು - ೫೬೦ ೦೭೨

**ಸುವರ್ಣ ಗೀತೆ** (ಗೀತಾ ಗುಚ್ಛ) ಸಂ. : ಬಸವರಾಜ್ ಶಿ. ಬಾಳೇಶ್ವರಮಠ
**ಪುಟ : ೭೫** **ಬೆಲೆ : ರೂ. ೩೦**
**ರಜತ್ ರೋಜಾ ಪ್ರಕಾಶನ,** ಲಕ್ಷ್ಮೇಶ್ವರ - ೫೮೨ ೧೧೬

**ಹಣ, ಯಶಸ್ಸು, ಆರೋಗ್ಯ, ಮನಃಶಾಂತಿ ಗಳಿಸುವುದು ಹೇಗೆ ?** ಉದಯ್ ಜಾದೂಗಾರ್
**ಪುಟ : ೧೨೦** **ಬೆಲೆ : ರೂ. ೭೦**

**ರಸ್ತೆ** (ಕವನ ಸಂಕಲನ) ಗಣೇಶ ಪಿ. ನಾಡೋರ
**ಪುಟ : ೪೦** **ಬೆಲೆ : ರೂ. ೨೦**

**ಅಜ್ಜನ ಮನೆ ಅಂಗಳದಲ್ಲಿ** ವಿಜಯಾ ಶ್ರೀಧರ್
**ಪುಟ : ೧೨೦** **ಬೆಲೆ : ರೂ. ೬೦**

**ಮನೆಯಂಗಳದಲ್ಲಿ ಔಷಧಿವನ** ಡಾ॥ ಎಂ. ವಸುಂಧರ, ಡಾ॥ ವಸುಂಧರಾ ಭೂಪತಿ
**ಪುಟ : ೨೦೦** **ಬೆಲೆ : ರೂ. ೧೫೦**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ತಬ್ಬಿಕೊಂಡ್ರೆ ಮೈಯಲ್ಲ ಜಾಸ್ತಿ ಬೂದಿ ಅಂದ್ ಹಾಗೆ... ತರ್ಕಾ ಮಾಡಿ ಮೂರ್ಖ ಯಾಕಾಗ್ಬೇಕು ? ಬಿಟ್‌ಬಿಡೂ... ತಟಸ್ಥಂಗೆ ತಂಟೆಯಿಲ್ಲ ಅಂತ ಕಾಣ್ದೇ ಹೇಳಿದ್ರೇನು ಹಿಂದ್ನೋರು... ?' ಅಂತ ಬುದ್ಧಿ ಹೇಳುತ್ತಲೋ ಅಂತೂ ಸೀತಮ್ಮನ ಗಾದೆಗಳು ಮನೆ ತುಂಬಾ ಉರುಳಲುಹತ್ತಿದವು. 'ಉಪ್ಪು' ಎಂದು ಕೇಳಿದವರಿಗೂ ಸೀತಮ್ಮ 'ತಗೋಪ್ಪಾ, ತಗೋ, ಉಪ್ಪರ್ಗೆ ಮನೆ ಇದ್ರೂ ಉಪ್ಪಿಲ್ದೆ ಆಗುತ್ತಾ? ಉಪ್ಲಿಂದ್ಲೇ ಮುಪ್ಪ್ ಬಂದ್ರೂ ಉಪ್ಪ್ ಬಿಟ್ಟಾನೆ ಮನ್ಸಾ?' ಅಂತ ಗಾದೆ ಬೆರೆಸಿದ ಉಪ್ಪನ್ನೇ ಕೊಟ್ಟಾರು. 'ಗಾದೆ ಸೀತಮ್ನೋರೇ' ಅಂತ ಕರೆಯುವಷ್ಟು ಸಲಿಗೆ ವಿಶ್ವನಾಥಯ್ಯನೋರ ಮಕ್ಕಳಿಗೂ ಬೆಳೆದಿತ್ತು.

ಈ ವರಸೆ ಬೇರೆಯವರಿಗೂ ತಗುಲದಿರಲಿಲ್ಲ. ಹೇಗೋ ಏನೋ ಎಲ್ಲರ ಮಾತುಗಳಲ್ಲಿ ಗೊತ್ತಿದ್ದ ಅಲ್ಪಸ್ವಲ್ಪ ಗಾದೆಗಳೇ ವಿಚಿತ್ರ ರೂಪ ಪಡೆದು ಕಾಣಿಸಹತ್ತಿದವು. 'ಯಾಕಪ್ಪಾ ಇಷ್ಟು ಲೇಟು ?' ಅಂತ ವಿಶ್ವನಾಥಯ್ಯನೋರು ಮಗನ್ನ ಕೇಳಿದ್ರೆ, 'ಅವ್ನು ಅಡ್ರೆಸ್ ತಪ್ ತಪ್ಪಾಗಿ ಕೊಟ್ಟಿದ್ದ ಅಪ್ಪಾಜಿ, ನಾನೇನ್ ಮಾಡ್ಲಿ? ಕೊಂಕಣ ಸುತ್ತಿ ಮೈದಾನಕ್ಕೆ ಹೋದಂಗಿತ್ತು' ಅಂತ ಹೇಳಿದ್ರೆ 'ಮೈದಾನ ಅಲ್ಲ, ಮೈಲಾರ, ಗಾದೆಗಳನ್ನಾದ್ರೂ ಸ್ವಲ್ಪ ಸರಿಯಾಗಿ ಕಲ್ತುಕೋ' ಅಂತ ಪಿಯುಸಿ ಫೇಲಾದ ಮಗನಿಗೆ ಗಂಭೀರವಾಗಿ ಹೇಳಿದ್ದರು. ಮಗನ ಮೇಲೆ ಗಂಡನಿಗೆ ದೂರು ಹೇಳೊವಾಗ ಪಾರತಮ್ಮ, 'ಹೀನ ಸುಳಿ ಬೋಳಿಸಿದ್ರೂ ಹೋಗುತ್ಯೇ ?' ಅಂತ ಸೇರಿಸಿದಾಗ ಒಂದು ಗಳಿಗೆ ಹೆಂಡತಿಯ ಮುಖವನ್ನೇ ನೋಡಿದ್ದರು ವಿಶ್ವನಾಥಯ್ಯನೋರು. 'ಇಲ್ನೋಡೀ ಅಪ್ಪಾರೆ, ಮೂಲೆ ಮನೆ ಶೆಟ್ರ ಅಂಗಡೀಲೀ ತಂದ್ ತೆಂಗಿನ್ಕಾಯಿ, ಪೂರಾ ಕೆಟ್ಟ್ ಹೋಗದೆ. ಕಾಸೂ ಕೇಡು, ತಲೆನೂ ಬೋಳು ಅಲ್ಲೇನಿ ?' ಅಂತ ದೂರೊಪ್ಪಿಸಿ ಅಪ್ಪಾರ ಹಿಮದಂಥ ಕಣ್ಣುಗಳನ್ನು ಎದುರಿಸಲಾರದೆ ಮೆಲ್ಲನೆ ಕಾಲುಕಿತ್ತಿದ್ದ ಚಂದ್ರ.

........

'ಮಕ್ಳೇ ಈ ತರ ! ಇನ್ನು ಬರೋ ಸೊಸೆ ಕೈಲಿ ಏನ್ ಅನುಭವಿಸ್ಬೇಕೋ !' ಅಂತ ಒಂದು ದಿನ ಪಾರತಮ್ಮ ಮಗನ ಜೊತೆ ಜಗಳವಾದಾಗ ಸೀತಮ್ಮನ ಕೈಲಿ ಅಲವತ್ತುಕೊಂಡರು. ಹುಳಿ ಇಡ್ಲಿಹಿಟ್ಟನ್ನ ತಟ್ಟೇಲಿ ಹಾಕುತ್ತಿದ್ದ ಸೀತಮ್ಮ, 'ಅಯ್ಯೋ, ಪಾರತಮ್ನೋರೇ, ನೀವಿನ್ನೂ ಅನ್ಭವಿಸಿಲ್ಲ, ನಾನ್ ಅನ್ಭವಿಸಾಗಿದೆ ಬಿಡಿ. ಅದೇನೋ ಹೇಳ್ತಾರಲ್ಲ, ಸೊಸೆಗೆ ಗ್ರಾಪ್ರವೇಶ, ಅತ್ತೆಗೆ ಪರವಾಸ ಅಂತ. ಬಂದವ್ಳು ಸೊಸೆಮುದ್ದೆ ಅನ್ಕಂಡೆ, ಮಾರಿ ಅಂತ ಗೊತ್ತಿರ್ಲಿಲ್ಲ. ಮಗ ನಮ್ಮೋನಾದ್ರೆ ಸೊಸೆ ನಮ್ಮೋಳೇ ? ಇವನು ಏನು ಚುಚ್ಚಿದ್ನೋ, ಅವಳೇನ್ ಅರ್ಥ ಮಾಡ್ಕಂಡ್ಳೋ, ಹೀನಾಯವಾಗಿ ಮಾತಾಡೋಕ್ ಹತ್ತಿದ್ಲು ಕಣೇ... ದಿನಕ್ ಒಂದ್ ಹತ್ತ್ ಸಲ ಹಾದರದ ಮಾತಾಡೋಳು. ಕತ್ತೆ ಹಂಗ್ ಕೆಲ್ಸ ಮಾಡಿದ್ ಜೀವ ನಂದು. ಕೆಲ್ಸ ಮಾಡ್ತಾ ಮನೆ ತುಂಬ ಓಡಾಡ್ತಾ ಇದ್ರೆ ಹಾದರಗಿತ್ತಿ ಕಾಲು ಹಸೆಮೇಲ್ ನಿಲ್ಲೂ ಅಂತಾರೆ ತಿಳಿದವ್ರು ಅಂತ ಚುಚ್ತೋಳು. ಮನೇಲ್ ಒಂದ್ ಪಾಯ್ಸ ಮಾಡಿದ್ರೂ 'ಚಂಬು ಚೌರ್ಗೆಗೆ ದರಿದ್ರ ಇದ್ರೂ ಹಂಚು ಹುಡಿಗೆ ಏನೂ ದರಿದ್ರ ಕಾ...ಣೆ' ಅಂತ ರಾಗ್ವಾಗಿ ಅಂದ್ರೆ ಮೈಯೆಲ್ಲಾ ಉರ್ದುಹೋಗಿತ್ತು ಕಣೇ. ಮಗನ್ ಮುಚ್ಚಟೆಯಾಗಿ ಬೆಳೆಸಿದ್ರೂ ಏನ್ ಬಂತು ? ಅಂಗ್ಡಿ ಮಾಡಿ ಗೊಂಗಡಿ ಹೊದ್ದ ಹಾಗೆ ? ನಾನೂ ಬಾಯ್ ಮುಚ್ಕಂಡು ನೀಸ್ದೆ. ಮಾತಂದ್ರೆ ಮಾತು, ಗೊತ್ತಿಲ್ಲ ಗುರಿಯಿಲ್ಲ. ಎಷ್ಟಂತ ನೀಸ್ಲೀ ? 'ಏನ್ ಹೆಣ್ಣೇ, ನಾಲ್ಗೆ ಬಿಗಿ ಹಿಡಿದು ಮಾತಾಡು' ಅಂದ್ರೆ 'ಕಚ್ಚೆ ಬಿಗೀ ಹಿಡೀದಿದ್ದವ್ರಿಗೆ ನಾಲ್ಗೆ ಬಿಗೀ ಹಿಡಿಯೋ ಉಸಾಬ್ರಿ ಯಾಕೆ' ಅನ್ನದಾ ? ಇವಳ್ ಯಾರು ? ಇವಳಿಗ್ ಏನ್ ಗೊತ್ತಿದ್ದು ನನ್ನ್ ಸ್ಥಿತಿ ? ಹರಕ್‌ಬಾಯಿ ಮುಂಡೇದು. ಗಾಳಿ ಬಾಯನ್ನಾದ್ರೂ ಅಡ್ಗಸಬಹುದು. ಗಯ್ಯಾಳಿ ಬಾಯಿ ಆದೀತಾ ? ಅವಳ ಮನೆಯವ್ರ ಹತ್ರ ಏನ್ ಒದರಿದ್ಲೋ, ನನ್ ಕಂಡ್ರೆ ಗುಸಗುಸ ಮಾತಾಡೋರು. ಒಂದಿನ ಹರ್ಕಂಡು ನೋಡಿ, ಉದ್ದುರುಟುತನಕ್ಕೆ ಗುದ್ದೇ ಮದ್ದು ಅಂತ ನಾನೂ ಸೆರಗ್‌ಕಟ್ಟಿ ನಿಂತೆ. ಬೇನೆಯಿಂದ್ ಮಲಗಿದ್ದ ನನ್ ಗಂಡಂಗೆ ಗಂಜಿ ಮಾಡ್ಕಂಡು ತಗೊಂಡ್‌ಹೋಗ್ತಾ ಇದ್ರೆ, 'ಹಗಲೆಲ್ಲಾ ಹಾದ್ರ ಆಡಿ ಯಾವಳೋ ರಾತ್ರಿಯೆಲ್ಲಾ ಕೂತು ಗಂಡನ್ ತಲೆ ಹೇನು ತೆಗೆದ್ಳಂತೆ' ಅಂತನ್ನದಾ ? ಹೆಂಗ್ ಸಹಿಸ್ಕೊಳ್ಳಿ ಈ ಅಗಡಿತನಾನ ?' ನಂದಲ್ಲ ಹೆಣ್ಣೆ ಹಾದರ, ನಿಂದೇ ಮಾತಿನ್ ಹಾದ್ರ' ಅಂತ ಬರ್ತಾ ಇದ್ದ ಸಿಟ್ಟಿಗೆ ಗಂಜಿಪಾತ್ರೆ ತೆಗ್ದು ಅವಳ್ಕಡೆಗೆ ಎಸ್ದೆ. ಶುರುವಾಯ್ತು ರಾಮಾಯ್ಣ. ಗೋಡೇ ಬಿದ್ರೆ ಜಗಲಿ ಮೇಲ್ ತಾನೆ ? ಒಂದೇ ಸಮ ದೂರು ಚುಚ್ಚಿದ್ಲಲ್ಲಾ ಗಂಡಂಗೆ ! ಹೊಟ್ಟೇಲ್ ಹುಟ್ಟಿದ್ ಮಕ್ಳು ಕಂಚೋ ಮಿಂಚೋ ಅಂತಾರಲ್ಲ, ನನ್ ಮಗನೂ ತಿರ್ಗಿಬಿಳೋದಾ ?' ಅಂದ. 'ನಂಗ್ ಸಾಕಾಗ್ ಹೋಗಿದೆ ಕಣಮ್ಮ. ಎಲ್ಲಾದ್ರೂ ಹಾಳಾಗ್

ಹೋಯ್ತಿನಿ' ಅಂದ. ಮಗನ್ ಕಾಡು ಹತ್ತಿಸಿದ್ದು ಅಂತ ಇನ್ನೊಂದ್ ಚುಚ್ಚಾತು ಕೇಳೋಕೆ ನಾನ್ ರೆಡಿ ಇರ್ಲಿಲ್ಲ. ನಾನೇ ಹೋಯ್ತೀನಪ್ಪಾ, ನೀವೇ ಸಮಾ ಇರಿ ಅಂದೆ. ಮನೇ ಒಡೀತು. ಸೊಸೆ ಅನ್ನೋ ಮಾರಿ ಆ ಕಡೆಗೆ ತಿರ್ಗಿ ಅಡ್ಗೆ ಮಾಡಿದ್ರೆ ನಾನ್ ಈ ಕಡೆ. ಗಂಡ ಅನ್ನೋ ಪ್ರಾಣ ಉಬ್ಬಸದ್ ಮೂಟೆ. ಆಗದ್ ಹೋಗದ್ ಬದ್ಕಿಗೆ ರಾಗಿ ಯಾಕೆ ಅಂತ ನನ್ನಾಡಿಗೆ ಗಂಡನ್ ನೋಡ್ಕಂಡ್ ಮಡಗಿದಂಗೆ ಇದ್ನಾ ಇಲ್ವಾ? ಅವನೂ ಒಂದಿನ ಹರಹರಾ ಅಂದ. ಕಂಡ್‌ಕಂಡವರ್ಗೆಲ್ಲಾ ಹಲ್ ಕಿರಿದ್ರೂ ಗಂಡ್‌ಸತ್ತ ಮುಂಡೆ ತಲೆ ಬೋಳಿಸೋದ್ ಬಿಡಲ್ವಂತೆ. ನಾನ್ಯಾಕ್ ಹಲ್ಕಿರೀಲಿ? ಯಾಸೀಮೆ ಗಂಡ ಆಗಿದ್ದ ಅವ್ನು? 'ಅಮ್ಮಾ ಇಲ್ಲ್ ಕೇಳು' ಅಂತ ಮಗ ಬುದ್ಧಿ ಹೇಳೋಕ್ ಬಂದ. 'ಅಮ್ಮ ಅಂತೆ ಅಮ್ಮ, ಅರ್‍ಸ ಯಾರಿಗೆ ಅಪ್ಪ, ಸೂಳೆ ಯಾರಿಗ್ ಅವ್ವ ಅಂತ ಕುಟುಕೋದಾ ಆ ಸೊಸೆ ಅನ್ನೋ ಮಾರಿ? ತೊರೆದ್ಬಿಟ್ಟೆ ಕಣೀ, ಆ ಗಳಿಗೇಲಿ ಎಲ್ಲಾ ತೊರೆದ್ಬಿಟ್ಟು ಹಣೆ ಕುಂಕುಮ ಉಳಿಸ್ಕೊಂಡೆ. ಇಂಥಾ ಹಾದರ್ಗಿತ್ತಿ ಮುಖ ನೋಡ್ಲಾರೆ ಅಂತ ಒಂದೇ ಸಮ ರಂಪ ಮಾಡಿ ಗಂಡನ್ನ್ ಹೊರಡಿಸ್ಕೊಂಡು ಹೊರಟ್‌ಹೋದ್ಲು. ಹೋಗ್ಲಿ, ನನ್ ಅಂಗಾಲಲ್ಲಿ ತ್ರಾಣ ಇರೋತನ್ಕ ಬಂಗಾಳಕ್ ಹೋದೇನು ಅಂತ ಬದುಕಕ್ ನಿಂತೆ. ಸತ್ರೆ ಯಾರೋ ಹೆಣ ಈಚೆಗೆ ಹಾಕ್ತಾರೆ. ಸತ್ಮೇಲೆ ಅದು ನನ್ನ್ ಹೆಣವೋ? ಬೇರೆಯವರ್ದೋ? ಚೂರುಪಾರು ದುಡ್ಡಿದೆ, ಜನ ಇಲ್ಲ, ಅಷ್ಟೇ ಹೋಯ್ತು ಕತ್ತೆ ಬಾಲ ಅಂತ ಬದುಕ್ದೆ ಕಣೀ. ನಿಮ್ಮೆಜಮಾನ್ರು 'ಮನೆ ಪರಿಸ್ಥಿತಿ ಹೀಗಿದೆ ದಯವಿಟ್ಟು ಬರಬೇಕು' ಅಂತ ಕೈಮುಗ್ದು ಕೇಳ್ಕೊಂಡಾಗ ಮನ್ಸು ಕರಗ್ತು. ಎಂಥಾ ದೊಡ್ ಮನ್ಸಾ! ಬೀಗ ಜಡಿದೆ, ಹೊರಟೆ ಕಣೇ, ಅಣ್ಣಪ್ಪ ಎಲ್ಲಿದ್ರೇನು, ಊರಲ್ಲಿದ್ರೂ ಸರಿ, ದಂಡಲ್ಲಿದ್ರೂ ಸರಿ. ತಟ್ಟೊಂದಿದ್ರೆ ತಟಾಯ್ಸಿ ನಡ್ಯೋಕಾಗಲ್ವಾ? ಅದೇನೋ ಹೇಳ್ತಾರಲ್ಲ...'

ಆಪ್ತ ಧ್ವನಿಯಲ್ಲಿ ಅಡಿಗೆಮನೆಯಲ್ಲಿ ಕೂತು ಪಿಸಪಿಸನೆ ಪ್ರವರ ಒಪ್ಪಿಸಿ ಕಣ್ಣೊರೆಸಿಕೊಂಡಾಗ ಪಾರತಮ್ಮನೋರು ಕಲ್ಲಾಗಿ ಕೂತಿದ್ದರು.

..........

ಸೀತಮ್ಮನ ಮಾತಾಳಿತನದ ಬಿಸಿ ತಾಗಿದ್ದು ಮೊದಲು ವಿಶ್ವನಾಥಯ್ಯನೋರಿಗೆ. ಮನೆಯ ಪ್ರತಿಯೊಂದೂ ಖರ್ಚನ್ನು ಹಿಡಿತದಲ್ಲಿಟ್ಟುಕೊಂಡು ಸಂಸಾರ ನಿಭಾಯಿಸುತ್ತಿದ್ದ ಅವರಿಗೆ ಸೀತಮ್ಮನ ಗಾದೆವರ್ತನೆ ಅವರ ಬಿಗಿತನಕ್ಕೆ ಸಿಕ್ಕದಂತೆ ನುಣುಚಿಕೊಳ್ಳಹತ್ತಿದಾಗ ವಿಶ್ವನಾಥಯ್ಯನೋರು ಎಚ್ಚತ್ತುಕೊಳ್ಳಬೇಕಾಯ್ತು. ಆದದ್ದಿಷ್ಟು. ಪಾರತಮ್ಮೋರ ತಂಗಿ ರೇಣುಕಮ್ಮನ ಪರಿವಾರ ಒಂದಿನ ಬಂದು ಇಳಿಯಿತು. ಅದೇ ಊರಲ್ಲಿ ಇದ್ದರೂ ಬಂದರೆ ಇಡೀ ದಿನ ಗಲಗಲವಾಗಿದ್ದು ರಾತ್ರಿ ಎಂಟರ ಹೊತ್ತಿಗೆ ವಾಪಸ್‌ಹೋಗುವ ಕಾರ್ಯಕ್ರಮ ಹಾಕಿಕೊಂಡು ಬರುತ್ತಿದ್ದ ರೇಣುಕಮ್ಮ ಸೀರೆ ಮಾರು, ಉಪ್ಪಿನಕಾಯಿ ಮಾರು, ನಿಪ್ಪಟ್ಟು ಕೋಡುಬಳೆಗೆ ಆರ್ಡರ್ ತಗೋ ಇತ್ಯಾದಿಯಲ್ಲಿ ಸದಾ ಮುಳುಗಿರುತ್ತಿದ್ದ ಹೆಂಗಸು. ಬಂದರೆ ಚಟ್ಟೆಯಂತೆ ಪತರಗುಡುತ್ತಾ ದೊಡ್ಡ ದನಿಯಲ್ಲಿ ಗಂಡಸಂತೆ ನಗುತ್ತಾ ದಪ್ಪ ದೇಹವನ್ನು ಮನೆಯ ಉದ್ದಗಲಕ್ಕೂ ವಾಲಾಡಿಸಿ ನಡೆದಾಡುತ್ತಾ ಇದ್ದರೆ ಮನೆಗೆ ಹಬ್ಬ ಹೊಕ್ಕಂತೆ. ಅವರ ಜೊತೆಯೇ ಡಬ್ಬಿಗಟ್ಟಲೆ ತಿಂಡಿಗಳೂ ಬಂದಿಳಿಯುತ್ತವೆ. ತಂದ ತಿಂಡಿಗಳನ್ನು ಎಲ್ಲರಿಗೆ ಸ್ವಲ್ಪ ಸ್ವಲ್ಪ ಕೊಟ್ಟು ಉಳಿದದ್ದನ್ನು ರೂಮಿನ ಬೀಗ ಇರುವ ಬೀರಿಗೆ ರವಾನಿಸುವುದು ಆ ಮನೆಯ ಪದ್ಧತಿ. ಮಾರನೇ ದಿನದಿಂದ ಆ ತಿಂಡಿಗಳು ಸಾಯಂಕಾಲದ ಕಾಫಿ ಹೊತ್ತಿಗೆ ಮನೆ ಯಜಮಾನನ ತಟ್ಟೆಯಲ್ಲಿ ಮಾತ್ರ ಸ್ವಲ್ಪ ಪ್ರಮಾಣದಲ್ಲಿ ಕಾಣಿಸಹತ್ತಿದರೆ ಆಶ್ಚರ್ಯ ವೇನಿಲ್ಲ. ಏನೂ ಇಲ್ಲದಿದ್ದರೆ ಕಡ್ಲೇಕಾಯಿಬೀಜವನ್ನೇ ಹುರಿದು ಉಪ್ಪುಖಾರ ಬೆರೆಸಿ ಹಳೆ ಹಾರ್ಲಿಕ್ಸ್ ಬಾಟ್ಲಿಯಲ್ಲಿ ಹಾಕಿ ರೂಮಿನ ಬೀರಿನಲ್ಲಿ ಇಡಬೇಕೆಂದು ಅಪ್ಪಣೆ ಯಾಗಿತ್ತು. ಸಾಯಂಕಾಲ ಫ್ಯಾಕ್ಟರಿಯಿಂದ ಬಂದ ಯಜಮಾನರು ಪೇಪರ್ ಓದುತ್ತಾ ಕಾಫಿ ಕುಡಿಯುತ್ತಾ ಒಂದೊಂದೇ ಕಾಳನ್ನು ಬಾಯಿಗೆ ಹಾಕಿಕೊಳ್ಳುತ್ತಿದ್ದರೆ ಆಚೀಚೆ ಓಡಾಡುವ ಮಕ್ಕಳು ಕಂಡೂ ಕಾಣದಂತೆ ಹುಬ್ಬೇರಿಸಬಹುದು ಅಷ್ಟೇ. ಯಾಕಂದ್ರೇ ವಿಶ್ವನಾಥಯ್ಯನೋರೇ ಹೇಳೋ ಹಾಗೆ ಈ ಗಡವಾ ಗಂಡುಮಕ್ಕಳು ಯಾವತ್ತಾದ್ರೂ ಇಷ್ಟು ದೊಡ್ಡ ಮನೆ ಖರ್ಚು ಹೇಗೆ ನಿಭಾಯಿಸ್ತಾ ಇದೀರಾ ಅಂತ ಕೇಳಿದಾರೇನು? ಹತ್ತು ಪೈಸೆ ಬಿಚ್ಚಿದಾರೇನು? 'ತಗಳಿ ಅಪ್ಪಾಜಿ, ಮನೆ ಖರ್ಚಿಗೆ ನನ್ನ ಸಹಾಯ' ಅಂತ ಹತ್ತು ಪೈಸೆ ಬಿಚ್ಚಿದಾರೇನು? ಸಂಪಾದ್ನೆ ಮಾಡೋಕೆ ಹತ್ತಿದ್ರೂ ಅಪ್ಪನ ಅನ್ನ ಆಶ್ರಯದಲ್ಲೇ ಮುಗುಮ್ಮಾಗಿ ಬದುಕ್ತಾ ಇರೋ ಈ ದಂಡಪಿಂಡಗಳಿಗೆ ದೊಡ್ಡ ಸಿಟೀಲಿ ಬದುಕೋದು ಎಷ್ಟು ಕಷ್ಟ ಅಂತ ಗೊತ್ತಿಲ್ಲೇನು?

ಪಾಪ ಸೀತಮ್ಮನೋರಿಗೆ ಇದೆಲ್ಲಾ ಗೊತ್ತಿತ್ತೋ ಇಲ್ಲವೋ. ಅಂತೂ ಪಾರತಮ್ಮ ಎದ್ದುಬಂದು ಹಂಚೋ ಹೊತ್ತಿಗೆ ಸೀತಮ್ಮನೇ ಮನೇಲಿರೋ ಸಮಸ್ತ ಜನಕ್ಕೂ ತಿಂಡಿ ಹಂಚಿ ತಟ್ಟೆಲಿಟ್ಟು ಕೊಟ್ಟಾಗಿತ್ತು. ಚುಲ್ಬಾರಿ ಚಂದ್ರ ತಡ ಮಾಡಿದ್ರೆ ಏನ್ಸಕ್ಕಿಯೋ ಅಂತ ಮೂಲೇಲಿ ನಿಂತು ಒಂದೊಂದಾಗಿ ಗುಳುಂ ಅನ್ನಿಸುತ್ತಿದ್ದ. ಪಾರತಮ್ಮನೋರಿಗೆ ಹೊಟ್ಟೆ ಬೆಂಕಿಯಾಗೋದಿರ್ಲಿ, ವಿಚಿತ್ರವಾದ ಭಯ ಶುರುವಾಯ್ತು. 'ಇದೇನ್ರಿ ಸೀತಮ್ಮೋರೇ, ಎಲ್ಲಾನೂ ಖಾಲಿ. ಅಪ್ಪಾರಿಗೆ ಏನ್ ಕೊಡೋದು?' ಅಂತ ಪಿಸುವಾಗಿ ಕೇಳಿದರೆ ಸೀತಮ್ಮ, 'ಅಪ್ಪಾರಿಗೂ ತಟ್ಟೇಲ್ ಇಟ್ಟಿದೀನಿ ಕಣೇ... ಜಾಸ್ತಿ ದಿನ ಇಟ್ರೆ ರುಚಿ ಇರೋಲ್ಲ. ಇಟ್ ಇಟ್ಟೇ ಕೆಟ್ಟಂತೆ ಸುಬ್ಬಾಭಟ್ಟ' ಅಂತ ನಗುತ್ತಲೇ ಹೇಳಿದ್ದು ಚುಲ್ಬಾರಿಯಾದಿಯಾಗಿ ಯಜಮಾನರಿಗೂ ಕೇಳಿತ್ತು.

ಅಂದು ಹತ್ತಿದ ಅಸಮಾಧಾನದ ಸಣ್ಣ ಎಳೆ ಹೇಗೇಗೋ ಬೆಳೆಯುತ್ತಲೇ ಹೋಯಿತು. ಮಗಂದಿರಿಗೆ ನೇರವಾಗಿ ತಾಕದಿದ್ದರೂ ಅದು ಯಜಮಾನ್ರು, ಸೀತಮ್ಮ ಮತ್ತು ಪಾರತಮ್ಮನವರ ತ್ರಿಕೋನದಲ್ಲಿ ಗಿರಕಿ ಹೊಡೆಯಲಾರಂಭಿಸಿತು. ಆರ್ಭಟಿಸಿದರೆ ಥಳುಕು ಹೊಡೆಸುವಂತಿದ್ದ ಯಜಮಾನರ ನಾಲಗೆ ಸೀತಮ್ಮನವರ ವಿಷಯದಲ್ಲಿ ಸ್ವಲ್ಪ ಯಾಕೋ ಏನೋ ಕುಂದಿದಂತಿತ್ತು.

ಬಂದವರು ತಂದ ತಿಂಡಿಯನ್ನು ಹಂಚಿದ್ದಷ್ಟೇ ಅಲ್ಲ, ಬಂದವರಿಗೆ ಧಾರಾಳವಾಗಿ ಕಾಫಿ ತಿಂಡಿ ಮಾಡಿಹಾಕುವುದರಲ್ಲೂ ಸೀತಮ್ಮ ಹಿಂದೆ ಬೀಳಲಿಲ್ಲ. ಬಂದವರ ಎದುರೇ 'ಸ್ವಲ್ಪ ಬೀಗದೆಸಳು ಕೊಡಿ, ಬಂದವರಿಗೆ ಕಾಫಿ ಮಾಡ್ಬೇಕು' ಅಂತಲೋ, 'ಉಪ್ಪಿಟ್ಟಿನ್ ರವೆ ಹುರ್‍ದು ಇಟ್ಟಿದ್ದೆ, ಬಂದವ್ರಿಗೆ ತಟ್ಟನೆ ಉಪ್ಪಿಟ್ಟ್ ಮಾಡೇನು ಅಂತ. ಈಗ ಕಣ್ಣಿಗೇ ಬೀಳ್ ಒಲ್ದು. ನೀವೇನಾದ್ರೂ ಎತ್ತಿಟ್ರ?' ಅಂತ ಕೇಳಿ ಮನೆ ಯಜಮಾನಿತಿ ಮುಜುಗರದಿಂದ ಎದ್ದುಬರೋ ಹಾಗೆ ಮಾಡದಿದ್ರೆ ಸೀತಮ್ಮ ಸೀತಮ್ಮನೇ ಅಲ್ಲ. 'ಇದ್ಯಾಕ್ರೀ ಸೀತಮ್ನೋರೇ, ಈ ಪಾಟಿ ಡಿಕಾಕ್ಷನ್ ಹಾಕಿದೀರಿ?' ಅಂತ ಸಣ್ಣ ಧ್ವನಿಯಲ್ಲಿ ಕೊಸಕೊಸ ಅಂದರೆ 'ಅಯ್ಯೋ, ಸುಮ್ನಿರಿ, ಬಂದವ್ರಿಗೆ ಸರ್‍ಯಾದ್ ಕಾಫೀನೂ ಕೊಡದಿದ್ರೇ ನಿಮ್ಮನೆ ಬಗ್ಗೆ ಏನನ್ಕೊಂಡಾರು? ಹೆಸರ್‍ಗೆ ಕ್ಷೀರಸಾಗರ ಭಟ್ಟ, ಮನೇಲಿ ನೀರ್ಮಜ್ಜಿಗೆಗೂ ಗೊಟ್ಟ ಅಂತ ಆಡ್ಕಲ್ವಾ? ಬರೋವ್ರು ಅವರ್ ಮನೇಲಿ ತಿನ್ನಕ್ಕಿಲ್ಲ ಅಂತ ನಮ್ಮನೆಗೆ ಬಂದಾರೇನು? ಅದೇನೋ ಹೇಳ್ತಾರಲ್ಲಾ...' ಅಂತ ಪಿಸುವಾಗೇ ಉತ್ತರ ಕೊಟ್ರೆ ಪಾರತಮ್ಮನೋರಿಗೆ ಮುಂದಿನ ಮಾತು ತಿಳಿಯುತ್ತಿರಲಿಲ್ಲ.

ಸೀತಮ್ಮನ ಧಾರಾಳತನ ಅಲ್ಲಿಗೇ ಮುಗೀಲಿಲ್ಲ. ತಿಂಗಳ ಒಟ್ಟು ಸಾಮಾನಲ್ಲಿ ಬಂದುಬೀಳುತ್ತಿದ್ದ ನಾಲ್ಕು ತುಪ್ಪದ ಬಾಟ್ಲಿಗಳಲ್ಲಿ ಎರಡು ಪಕ್ಕದಲ್ಲಿದ್ದ ಇನ್ನೊಂದು ದಿನಸಿ ಅಂಗಡಿಗೆ ಹೋಗುತ್ತಿದ್ದವು. ನಿಗದಿತ ಬೆಲೆಗಿಂತ ಸ್ವಲ್ಪ ಕಡಿಮೆ ದುಡ್ಡು ಪಾರತಮ್ಮನ ಕೈಗೆ ಬಂದುಬೀಳುತ್ತಿತ್ತು. ಆಗಾಗ ಮಿಕ್ಸಿಯಿಂದ ತೆಗೆಯುವ ಬೆಣ್ಣೆ ಕಾಸಿದರೆ ಸ್ವಲ್ಪ ತುಪ್ಪ ಬರುತ್ತಿತ್ತಲ್ಲ. ಹೇಗೂ ತುಪ್ಪದ ಸವಲತ್ತು ಯಜಮಾನರಿಗೆ ಮಾತ್ರ ತಾನೇ. ಹಾಗಂತ ಉಳಿದವರಿಗೆ ಇಲ್ಲವೇ ಇಲ್ಲ ಅಂತಲ್ಲ. ಯಾವಾಗಲೂ ಇಲ್ಲ ಅಷ್ಟೇ. ಸೀತಮ್ಮ ಬೆಣ್ಣೆ ತೆಗೆದ ದಿನ ಯಜಮಾಂತಿಯ ಆಣತಿಯಂತೆ ತುಪ್ಪ ಕಾಯಿಸುವ ಬದಲು ಬಿಡುಬೀಸಾಗಿ ಬೆಣ್ಣೆಯನ್ನೇ ಟೇಬಲ್ ಮೇಲಿಟ್ಟರೆ ಕಾಯಿಸಲು ಏನು ಉಳಿದಿರುತ್ತೆ ಮಣ್ಣು? ಪಾರತಮ್ಮ ಅನ್ನಲಾರರು, ಅನುಭವಿಸಲಾರರು. 'ಮುಗೀತಾ ಬೆಣ್ಣೆ ಎಲ್ಲಾ? ನಾಲಕ್ ತುಪ್ಪದ್ ಬಾಟ್ಲೀನೂ!' ಅಂದರೆ ಸೀತಮ್ಮ ತಣ್ಣಗೆ 'ಮುಗೀದೆ? ಈ ಪಾಟಿ ಜನದ್ ಮನೇಲಿ? ತಿನ್ಲಿ ಬಿಡಿ ನಿಮ್ ಮಕ್ಕಳು ತಾನೇ. ಅದೇನೋ ಹೇಳ್ತಾರಲ್ಲ, ತನ್ನ್ ಅಕ್ಕನ್ ಅರೀದವ್ರು ಪಕ್ಕದ್ಮನೆ ಬೊಮ್ಮಕ್ಕನ್ ಅರ್‍ತಾಳೇ ಅಂತ? ಅಂತ ಹೇಳಿದ್ದೂ ಆಯ್ತು.

ಇದೆಲ್ಲದರ ಜೊತೆಗೆ ಚುಲ್ಬಾರಿ ಚಂದ್ರ ಇನ್ನೊಂದು ರೀತಿಯ ತಲೆನೋವಾಗ ಲಾರಂಭಿಸಿದ್ದ. ಸೀತಮ್ಮನಿಗೂ ಅವನಿಗೂ ನಗೆಸಾರ ಹತ್ತಿದರೆ ಮುಗಿಯಲೊಲ್ಲದ್ದು. 'ಅದೇನೋ ಹೇಳ್ತಾರಲ್ಲ...' ಅಂತ ಸೀತಮ್ಮ ಶುರುಮಾಡೋದೇ ತಡ 'ಅದೇನ್ ಹೇಳ್ತಾರೀ ಸೀತಮ್ಮೋರೇ... ಅದನ್ನ್ ಪಶ್ಟ್ ಹೇಳ್ರಿ...' ಅಂತ ಕ್ಯಕ್ಯಕ್ಯ ನಗುತ್ತಿದ್ದರೆ 'ಇದ್ ಕೆಲ್ಸ ಇದ್ದಲ್ಲೇ ಬಿಟ್ಟು ಕೂತ್ಕೊಳ್ಳುತ್ತೆ ಮುಂಡೇದು, ಅವರ್ಗೂ ಸರಿ, ಇವನ್ಗೂ ಸರಿ' ಅಂತ ಪಾರತಮ್ಮ ಗೊಣಗಿ ಎದ್ದುಬಂದು ಕಣ್ಣು ಬಿಟ್ರೆ ಮೆಲ್ಲಗೆ ಕೆಲಸಕ್ಕೆ ಹೋಗುತ್ತಿದ್ದ ಆಸಾಮಿ. ದಿನ ದಿನಾ ಕೆನ್ನೆ ಬೇರೆ ತುಂಬ್ಕೋತಿತ್ತಲ್ಲ! ಒಂದು ಸಲ ರೇಣುಕಮ್ಮ ಛೇಡಿಸೋ ದನೀಲಿ 'ಏನ್ ಪೂರ್ಣಚಂದ್ರ, ಅಮಾಸೆ ಮರುತ್‌ಹೋಯ್ತಾ?' ಅಂತ ಕೇಳಿದಾಗ ಪಾರತಮ್ಮ ಒಳಗೊಳಗೇ ಉರಿದುಬಿದ್ದಿದ್ದರು. 'ಎಲ್ಲಾರೂ ಸೇರಿ ಅಟ್ಟ ಹತ್ಸಿದಾರೆ ಮುಂಡೇದಕ್ಕೆ. ಈಗೀಗ ಏನ್ ಹಿಂತಿರುಗ್ ಮಾತಾಡೋದ್ ಕಲಿದ್ದೆ? ಮೊನ್ನೆ ಏನೋ ಕೆಲ್ಸ ಕದ್ದಿದ್ದಕ್ಕೆ ರೇಗಿದ್ರೆ 'ಮಾಡ್ತಾನೇ ಇಲ್ವೇನಿ? ಇನ್ನೆಷ್ಟ್ ಬೇಗ್ ಮಾಡ್ಲಿ?' ಅಂತ ಜೋರಾಗಿ ಹೇಳಿ ಮೆಲ್ಲಗೆ 'ಕೊಡೋದ್ ಒಂದ್ ಕಾಸು, ಕೆಲ್ಸ ಹತ್ ತಾಸು' ಅಂತ ಗೊಣಗಿದ್ದು ತನಗೆ ಕೇಳಿರಲಿಲ್ಲವೇ? ಇಡ್ಲಿ ಹಿಟ್ಟು ಮನೆಯಲ್ಲೇ ರುಬ್ಬಿಸಿ

ಮಿಶನ್ನಿಗೆ ಹಾಕಿಸ್ತೆ ಅಂತ ಹೇಳಿ ಎರಡು ರೂಪಾಯಿ ಇಸ್ಕೊಂಡು ಪುಡಿಕಾಸು ಕಷ್ಟಕ್ಕೆ ಇರ್ಲಿ ಅಂತ ಇಟ್ಕೊತಿದ್ದದ್ದು ತನ್ನ ಹಣೇಬರ. ಮೊನ್ನೆ ದಿನ ಯಜಮಾನ್ರು 'ಏನೋ ಚಂದ್ರ, ಮಿಶನ್ನಿಂದ ಇಡ್ಲಿಹಿಟ್ಟು ವಾಪಸ್ ತಂದ್ಯೇನೋ ?' ಅಂತ ಕೇಳಿದ್ರೆ ಮುಂಡೇದು ತಬ್ಬಿಬ್ಬಾದಂಗೆ 'ಏನೀ ಅಮಾ, ನಾನ್ ಹಿಟ್ ರುಬ್ಬಿ ತಂದ್ನೇನಿ ?' ಅಂತ ನನ್ನೇ ಕೇಳಿ ಸಿಕ್ಕಿಹಾಕಿಸ್ತಲ್ಲಾ, ಎಲ್ಲಿಂದ ಬಂತು ಈ ಐನಾತಿ ಬುದ್ಧಿ ಇದಕ್ಕೆ ? ಈ ಮಧ್ಯೆ ಏನ್ ತಿನ್ನೋದ್ ಕಲ್ತಿದೆ! ಮೊನ್ನೆ ಊಟಮಾಡ್ತಿದ್ದಾಗ ತಾನು ಬೇಕಂತ್ಲೇ ಎದ್‌ಬಂದ್ ನೋಡಿದ್ರೆ ತಟ್ಟೇಲಿ ಅನ್ನದ್ ರಾಶಿ! ಭರಭರಾ ಉಣ್ತಾ ಇದೆ! ಅದೇನೋ ಹೇಳ್ತಾರಲ್ಲ... ಕಂಡ್ರೆ ಮಾಣಿ, ಉಂಡ್ರೆ ಗೋಣಿ ಅಂತ... ಛೇ! ತನಗೂ ಏನಾಗಿದೆ ? ಎಲ್ಲಾ ಈ ದರಿದ್ರ ಸೀತಮ್ಮನಿಂದ್ಲೆ...' ಪಾರತಮ್ಮ ತಲೆ ಕೊಡವಿಕೊಂಡರು.

ಅಂತೂ ಪರಿಸ್ಥಿತಿ ಬಿಗಡಾಯಿಸುತ್ತಲೇ ಹೋಯಿತು. ಚುಲ್ಬಾರಿಯ ಕುಲುಕುಲು, ಪಾರತಮ್ಮನ ಗೊಣಗೊಣ, ಸೀತಮ್ಮನ ಗಾದೆಪ್ರವಾಹ, ವಿಶ್ವನಾಥಯ್ಯನೋರ ಬಿಗಿದ ಮುಖ, ಅಡಿಗೆ ಕೆಲಸ, ಮನೆ ಕೆಲಸ, ಬಂದು ಹೋಗುವವರು... ಇತ್ಯಾದಿ. ಒಂದಿನ ಮಾತ್ರ ಕುದಿತ ಸ್ಫೋಟಗೊಂಡಿತು. ಅದೂ ಒಂದು ಸಣ್ಣ ಕಾರಣಕ್ಕೆ.

ವಾರದ ತರಕಾರಿ, ಹಣ್ಣನ್ನು ಯಜಮಾನರು ತಂದು ಟೇಬಲ್ ಮೇಲೆ ಹರವಿ ಲೆಕ್ಕ ಬರ್ಕೊಂಡ ಮೇಲೆ ತೊಳೆದು ಫ್ರಿಜ್ಜಿಗೆ ಸೇರಿಸುವ ಕೆಲಸ ಸೀತಮ್ಮನವರದ್ದು. ಎಷ್ಟು ದಿನಕ್ಕೆ ಎಷ್ಟು ಹಣ್ಣು ಖರ್ಚಾಗುತ್ತೆ ಅನ್ನೋದು ಯಜಮಾನರ ತಲೆಯ ಯಾವುದೋ ಒಂದು ಮೂಲೆಯಲ್ಲಿ ಇದ್ದೇ ಇರುತ್ತಿತ್ತು. ರಾತ್ರಿ ಚಪಾತಿ ತರಕಾರಿ ಜೊತೆ ಹಣ್ಣು ತಿನ್ನೋದು ಯಜಮಾನರ ರೂಢಿ. ಒಂದಿನ ಹಣ್ಣು ಕಾಣಸದಿದ್ದಾಗ ತಂದ ಹಣ್ಣು ಮುಗಿದವೆ ಅಂತ ಪ್ರಶ್ನೆ ಬಂತು. 'ಏ ಪಾರತೂ, ಹಣ್ಣು ತರಕಾರಿ ಹೇಗ್ ಖರ್ಚಾಗ್ತಾ ಇದಾವೆ ಅಂತನಾದ್ರೂ ನೋಡ್ಬಾರ್ದೆ ? ನೀವೇನ್ ವಿವೇಕದ್ ಸಂಸಾರ ಮಾಡ್ತೀರೋ ಹೇಗೆ ?' ಅಂತ ಆಗ ತಾನೇ ಸ್ವಲ್ಪ ಸಲೀಸಾಗಿ ಎದ್ದು ಓಡಾಡುತ್ತಿದ್ದ ಪಾರತಮ್ಮನೋರನ್ನು ಕೇಳಿ 'ಇದೇನ್ ಇವ್ರೂ... ನನ್ ಕೇಳ್ತಾರೆ... ನಾನೇ ಸಾಯ್ತಾ ಬಿದ್ದಿದೀನಿ... ನಂಗ್ ಗೊತ್ತಿಲ್ಲ ಕಣ್ರಪ್ಪ... ಯಾರನ್ ಕೇಳ್ಬೇಕೋ ಅವ್ರನ್ನೇ ಕೇಳಿ...' ಅಂತ ಹೇಳಿ ಮಾತಿಗೆ ಮಾತು ಬೆಳೆದು ಮನಸ್ಸಲ್ಲಿ ಕುಟುಕುತ್ತಿದ್ದ ಹಿಂದಿನ ದಿನದ ಪ್ರಸಂಗವನ್ನು ಅಂತೂ ಪಾರತಮ್ಮ ಕಕ್ಕಿದರು. ಹಿಂದಿನ ದಿನ ಮುಸ್ಸಂಜೇಲಿ ದೀಪ ಹಚ್ಚೋಣ ಅಂತ ಕೈಕಾಲುಮುಖ ತೊಳೆಯೋಕೆ ಹೋಗಿದ್ದಲ್ಲವೇ ? ಚುಲ್ಬಾರಿ ಒಗೆಯೋ ಕಲ್ಲಿನ ಮೂಲೇಲಿ ನಿಂತು ಏನೋ ತಿಂತಿದ್ದದ್ದು ಕಣ್ಣಿಗೆ ಬಿದ್ದಿತ್ತು. ತನ್ನ ಮುಖ ಕಂಡ ತಕ್ಷಣ ತಿಂತಾ ಇದ್ದಿದ್ದನ್ನ ಜೇಬಲ್ಲಿ ಜಾರಿಸಿದ್ದಲ್ಲವೆ ? ಕೇಳಿದ್ದಕ್ಕೆ 'ಏನೂ ಇಲ್ಲ ಕಣೆ ಅಮ್ಮ, ನಾಲಕ್ ಕಡ್ಲೆ' ಅಂತ ಹೇಳ್ತು. ಗದರಿಸಿ ಕೇಳಿದ್ದಕ್ಕೆ ಜೇಬಿಂದ ನಿಧಾನವಾಗಿ ಸೇಬಿನ ಚೂರು ತೆಗೀತು. ಎಷ್ಟೂ ಅಂತ ಹೇಳೋದು ಅಂತ ತಾನು ಸುಮ್ಮನಾಗಿದ್ದಲ್ಲವೇ ? 'ನೋಡ್ರಪ್ಪಾ, ನನ್ನ ಕಣ್ಣಿಗೆ ಬಿದ್ದದ್ದು ಇಷ್ಟು. ಇನ್ ನೀವುಂಟು, ಅವರುಂಟು...' ಅಂತ ಹೇಳಿ ಪಾರತಮ್ಮ ಒಳಗೆ ಮಲಗಿದ್ದೂ ಆಯ್ತು. ಹಾಲ್‌ನಲ್ಲಿ ನಡೆಯೋದು ಹೇಗೂ ರೂಮಿಗೆ ಕೇಳಿಸುತ್ತಲ್ಲಾ. ಚಂದ್ರನ್ನ ಕರೆಯೋದಕ್ಕೆ ತಕ್ಷಣ ಅಪ್ಪಣೆಯಾಯ್ತು. ಬೊಬ್ಬಗೆ ಹೆದರಿಕೊಂಡ ಚಂದ್ರ ಬ್ಬೆಬ್ಬೆಬ್ಬೆ ದನಿಯಲ್ಲಿ ಸೀತಮ್ಮ ಕೊಟ್ಟಿದ್ದು ಅಂತ ಹೇಳಿದ. 'ರೀ, ಸೀತಮ್ನೋರೇ, ಬನ್ನಿ ಇಲ್ಲಿ ಸ್ವಲ್ಪ' ಅಂತ ಯಜಮಾನರು ಗಡಸು ಸ್ವರದಲ್ಲಿ ಕರೆದು ವಿಚಾರಿಸಿದಾಗ ಸೀತಮ್ಮ ಸ್ವಲ್ಪ ತಬ್ಬಿಬ್ಬಾದರೂ ಸಾವರಿಸಿಕೊಂಡು 'ಹೌದಪ್ಪಾ, ನಾನೇ ಕೊಟ್ಟೆ. ಮುಕ್ಕಾಲು ಭಾಗ ಕೊಳ್ತಿದ್ದ ಹಣ್ಣನ್ನ ಆಸೆಯಿಂದ ನೋಡ್ತಾ 'ಇದ್ ಪೂರ ಕೊಳೆತೇಬಿಟ್ಟಿದೆ ಅಲ್ಲಾ ಸೀತಮ್ನೋರೇ' ಅಂತ ಆ ಹುಡ್ಗು ಕೇಳ್ದಾಗ ಕಿಂಚಿತಕ್ಕೆ ವಂಚನೆ ಯಾಕೆ ಅಂತ ನಾನೇ ಎತ್ತಿಕೊಟ್ಟೆ. ಅದನ್ನ ಯಾರಾದ್ರೂ ತಿನ್ನೋಕಾಗುತ್ತಾ? ತಳಿಗೆ ಚಂಬು ಹೋದ್ಮೇಲೆ ಮಳ್ಗೆ ಮುಚ್ಚಿದ್ರೇನ್ ಫಲ ಅಂತ ಇದ್ದಷ್ಟನ್ನ ಕತ್ತರ್ಸಿ ತಿನ್ನು ಅಂತ ಕೊಟ್ಟೆ' ಅಂತ ಅಂದಾಗಲೂ ಯಜಮಾನರ ಏರು ಸ್ವರ ಇಳಿಯಲಿಲ್ಲ. ಕೊಡೋಕ್ಕೆ ಮುಂಚೆ ಅಮ್ಮನೋರನ್ನ ಕೇಳಿ ಕೊಡಬಾರದೇ? ಸೀತಮ್ಮನ್ನ ಸಹಾಯಕ್ಕಿರ್ಲಿ ಅಂತ ಕರೆಸಿದ್ದಾ? ಅಥ್ವಾ ಯಜಮಾನಿಕೆಗೆ ಕರೆಸಿದ್ದಾ? ತನ್ನ ಮನೆ ವರ್ಷಗಟ್ಟಲೆಯಿಂದ ಒಂದು ರೀತಿಯಲ್ಲಿ ನಡೀತಿರಬೇಕಾದ್ರೆ ಹೊರಗಿನೋರು, ಸ್ವಲ್ಪ ದಿನ ಇರೋದಿಕ್ಕೆ ಬಂದೋರು ಇಲ್ಲದ ಉಸಾಬರಿ ಮಾಡಿ ಸಂಸಾರದ ಹದ ಕೆಡಿಸೋದು ಯಾಕೆ? ದೊಡ್ಡ ಹುದ್ದೆ ಅಂತ ಕಂಡ್ರೂ ನಿಯತ್ತಿಂದ ಮಿತವಾಗಿ ತಾವು ಈ ಮಹಾನಗರದಲ್ಲಿ ಸಂಸಾರ ನಿಭಾಯಿಸೋಕ್ಕೆ ಪಡ್ತಾ ಇರೋ ಪಾಡು ಯಾರಿಗಾದ್ರೂ ಹೇಗೆ ಅರ್ಥವಾಗ್ಬೇಕು ?... ಇತ್ಯಾದಿ ಇತ್ಯಾದಿ. ಸೀತಮ್ಮ ತಗ್ಗಿಸಿದ ತಲೆ ಮೇಲೆತ್ತದೆ ನಿಂತರು. ಮಾತು ಮತ್ತೂ ಮುಂದುವರೆದಾಗ ವಿಶ್ವನಾಥಯ್ಯನೋರ ಎರಡನೇ ಮಗನಿಗೆ ಏನನ್ನಿಸಿತೋ ಏನೋ, ರೂಮಿಂದ ಎದ್ದುಬಂದು 'ಅದ್ಯಾಕ್ ಅಪ್ಪಾಜಿ, ಒಂದು ಕೊಳೆತ ಸೇಬು ತಾನೇ ? ಏನೀಗ ಹೋಗಲಿ ಬಿಡಿ...' ಅಂತ ಅಂದಿದ್ದು ದೊಡ್ಡ ಅಗ್ನಿಪರ್ವತವನ್ನೇ ಸಿಡಿಸಿತು. 'ಬಾಯ್ ಮುಚ್ಚು. ನನಗೇ ಬುದ್ಧಿ ಹೇಳೋಕ್ಕೆ ಬರಬೇಡಾ. ಯಾವ್ಯಾವ್ದು ಎಲ್ಲೆಲ್ಲಿರ್ಬೇಕೋ ಅಲ್ಲಲ್ಲೇ ಇರ್ಬೇಕು. ಈ ಹೆಂಗ್ಸು ಹಾದರ ಮಾಡಿ ಹೆತ್ತದ್ದೂ ಅಲ್ದೆ ನನ್ನ ಮನೆಗೆ ಬಂದು ಕೆಲಸದೋನ ಜೊತೆ ಏಕಾಂತ ಹೊಡೀತಾ ಬೆಳೆದ ಗಂಡುಮಕ್ಕಳ ಜೊತೆ ಗಾದೆ ಮಾತಿನ್ ಸರಸ ಆಡ್ತಾ ಯಜಮಾನ್ಕೆ ಮಾಡೋಕ್ ಬಂದಿದೆ ಗಾದೆ ಗೂಬೆ!' ಅಂತ ಅಬ್ಬರಿಸಿದ ಪಟ್ಟಿಗೆ ಮಗ ದಿಗ್ಭ್ರಾಂತನಾಗಿ ರೂಮಿನ ಕಡೆ ಹೆಜ್ಜೆಹಾಕಿದರೆ, ಚುಲ್ಬಾರಿ ಓಡಿಹೋಗಿ ದೊಡ್ಡ ಮನೆಯ ಮೂಲೆಯಲ್ಲಿದ್ದ ತನ್ನ ಚಾಪೆ ಬಿಡಿಸಿ ಮುಸುಕೆಳೆದುಕೊಂಡ. ರೂಮಿನಲ್ಲಿದ್ದ ಪಾರತಮ್ಮನವರಿಗೆ ಕೈಕಾಲುಗಳು ಒಮ್ಮೆಲೇ ಸೆಟೆಯಲು ಹತ್ತಿದವು. ಮುಖಮುಚ್ಚಿಕೊಂಡು ಸೀತಮ್ಮ ಕುಸಿದು ಕುಳಿತರು.

ಬೆಳಕು ಹರಿದಾಗ ಮನೆಯವರಿಗೆ ಕಾಫಿ ಕೊಡಲು ಗಾದೆ ಗೂಬೆ ಮನೆಯಲ್ಲೇ ಇರಲಿಲ್ಲ.

ಸುಕನ್ಯಾ ಕನಾರಳ್ಳಿ
ಕೇರಾಫ್ ಅರುಣ ಕಾಳಹಸ್ತಿ, ಡಿ೧೯ ಪೂರ್ವ, ಟ್ರಿನಿಟಿ ವುಡ್ಸ್, ಸರ್ಜಾಪುರ ರಸ್ತೆ, ಅಂಬಲೀಪುರ, ಬೆಂಗಳೂರು - ೫೬೦ ೦೩೫

# ನನ್ನ ಪ್ರೀತಿಯ ರೀತಿ

ಚೆತ್ರ ಸಿಂಗಿ ಚೆದ್ವ ಕಾಟಿ। ಬದ್ವ ಕಾಟಿ ಬಡಿವಾರ ಮಾಡಿ
ಕದ್ದು ಹೋಗುವಧ್ಯಾಕ ನೀ। ನನ್ನ ಮುಂದೂ ॥ಪ॥

ಚೆದ್ವಿ ನಿನ್ನ ಚಲುವಿಕೆ ನೋಡಿ। ಗದ್ದಲ ಬಾಳ ಹಿಡದೈತಿ
ಶುದ್ದಾಂ ನಿನ್ನ ಆ। ಸೂರ್ಯನ ಹೊಳಪ

ನಿಂಬಿ ಹಣ್ಣಿನಂತ ಹುಡಿಗಿ। ರಂಬಿ ಆಗಿದ್ದೆನ ಹಿಂದ
ಸಾಂಭ ನಾಚುತಾನ ನಿನ್ನ। ನಡಿಗಿ ನೋಡಿ

ಏನ ತಿಳಪ ನಿನ್ನ ಹೊಳಪ। ಚಂದುನ ಬೇಳಕ
ನಿನ್ನ ನೋಡಿ ಸೋಗಸಿಲ್ಲ। ಕೇಳ ಮನಕ

ಕಾಂತಿ ನನ್ನ ಮಾತ ಕೇಳೆ। ಎಂಥವಂತ ಬೈಬೇಡ
ಹೌದ ಅಲ್ಲ ಒಂದ ಮಾತ। ಹೇಳವಾಡ

ಕಾಡತ್ತಿತ್ತು ಕನಸೊಂದು। ನೋಡತ್ತಿತ್ತು ಮನಸೊಂದು
ಎದ್ದ ನೋಡತೀನಿ ಗ್ವಾಡಿ। ತಲಿಗಿ ಬಡಿದಂಗ

ಎಚ್. ಬಿ. ನಡುವಿನ ಕೇರಿ
ಸಂಶೋಧನಾ ವಿದ್ಯಾರ್ಥಿ, ಜಾನಪದ ಅಧ್ಯಯನ ವಿಭಾಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩



# ನಾಸ್ತಿಕ ದರ್ಶನಗಳು ಒಂದು ಸಾಮಾನ್ಯ ಅವಲೋಕನ

ಭಾರತೀಯ ದರ್ಶನ ಶಾಸ್ತ್ರದ ಚರಿತ್ರೆಯುದ್ದಕ್ಕೂ ವಿವಿಧ ಭಾವನೆಗಳ, ವಿವಿಧ ಪಂಥಗಳ ಅಸ್ತಿತ್ವ, ಸಹಬಾಳ್ವೆ, ಸಂಘರ್ಷಗಳನ್ನು ಕಾಣುತ್ತೇವೆ. ಇದರ ಮೌಲಿಕ ಉಲ್ಲೇಖಗಳು ವೇದಗಳಲ್ಲೂ ಇತರ ಪ್ರಾಚೀನ ಶಾಸ್ತ್ರರಚನೆಗಳಲ್ಲೂ ಇವೆ. ಆಸ್ತಿಕ ನಾಸ್ತಿಕಗಳೆರಡೂ ಪರಸ್ಪರ ಪ್ರಸಕ್ತಿಯಿಂದ ಬಂದುದರಿಂದ ಮಾನವನಷ್ಟೇ ಎರಡೂ ಪ್ರಾಚೀನ. ವೈದಿಕ–ಅವೈದಿಕ, ಆಸ್ತಿಕ–ನಾಸ್ತಿಕ, ಸೇಶ್ವರ–ನಿರೀಶ್ವರ ದರ್ಶನಗಳ ಬೆಳವಣಿಗೆಯು, ಒಂದನ್ನೊಂದು ವಿರೋಧಿಸಿ, ಖಂಡಿಸುತ್ತ ಆಗಿರುವುದಷ್ಟೇ ಅಲ್ಲ, ಅವು ಪರಸ್ಪರರ ಪ್ರಭಾವಕ್ಕೆ ಒಳಗಾಗಿವೆ. ಆ ಸಂಘರ್ಷಗಳಿಂದಲೇ ಒಂದೊಂದು ದರ್ಶನದಲ್ಲೂ, ಒಟ್ಟು ದರ್ಶನಗಳಲ್ಲೂ ಹೊಸ ಹೊಸ ಅಭಿಪ್ರಾಯಗಳು ರೂಪ ತಾಳಿವೆ. ಯಾವುದೇ ಮುಖಾಮುಖಿಯೂ ಸಂಘರ್ಷವೂ, ಸಂವಾದವಾಗಿ ಸಮನ್ವಯಗಳನ್ನೂ, ನವೀನ ಯುಕ್ತಿಗಳನ್ನೂ, ಪರಿಷ್ಕಾರಗಳನ್ನೂ ಉಂಟುಮಾಡುತ್ತದೆ.

ಡಾ|| ಎಂ. ಪ್ರಭಾಕರ ಜೋಶಿ

ಜಗತ್ತು ಮತ್ತು ಜೀವಿಗಳ ಇರುವಿಕೆ, ಅದರ ಕಾರಣ, ನಮ್ಮ ಬದುಕಿನ ಸ್ವರೂಪ ಗೊತ್ತುಗುರಿ, ನಾವು ಬದುಕನ್ನು ನೋಡಬೇಕಾದ ರೀತಿ, ಆಚಾರ ವ್ಯವಹಾರ ನಿಯಮ, ವ್ಯಕ್ತಿಗತ ಮತ್ತು ಸಾಮಾಜಿಕ ಕರ್ತವ್ಯದೃಷ್ಟಿ, ದೇವರ ಅಸ್ತಿತ್ವ ಅಥವಾ ನಾಸ್ತಿತ್ವ, ದೇವ-ಜೀವ-ಜಗತ್ತುಗಳ ಸಂಬಂಧ, ಧಾರ್ಮಿಕತಾ ಸ್ವರೂಪ ಮೊದಲಾದ ಅನೇಕ ವಿಚಾರಗಳಲ್ಲಿ ಮಾನವರಿಗೆ ಮೂಡಿದ ಪ್ರಶ್ನೆ, ಜಿಜ್ಞಾಸೆಗಳ ಉತ್ತರಗಳನ್ನು ತತ್ತ್ವಶಾಸ್ತ್ರ ಅಥವಾ ದರ್ಶನ ವೆನ್ನುವರು. ಇವು ದೇಶ ಕಾಲಾನುಗುಣವಾಗಿ ವಿಪುಲವೂ ವಿಸ್ತಾರವೂ ಆಗಿವೆ. ಭಾರತ ದೇಶದ ದರ್ಶನಶಾಸ್ತ್ರಪರಂಪರೆಯು ಬಹು ಪ್ರಾಚೀನವಾಗಿದ್ದು ವೈವಿಧ್ಯಮಯವೂ, ವಿಸ್ತಾರಗಳಿಂದ ಕೂಡಿದುದೂ ಆಗಿದೆ. ಅದು ಈಗಲೂ ವಿವಿಧ ಮುಖಗಳಲ್ಲಿ ಬೆಳೆಯುತ್ತಿದೆ. ಮತ (ರಿಲೀಜನ್) ಮತ್ತು ತತ್ತ್ವಶಾಸ್ತ್ರ (ಫಿಲಾಸಫಿ) ಬೇರೆ ಬೇರೆ ಆದರೂ, ಅವು ನಿಕಟ ಸಂಬಂಧಿಗಳು. ಭಾರತದಲ್ಲಿ ಪ್ರಾಯಃ ಹೆಚ್ಚಿನ ದರ್ಶನಗಳು ಇವೆರಡರ ಸಂಯುಕ್ತ ರೂಪವಾಗಿರುವುದೇ ಹೆಚ್ಚು.

### ಆಸ್ತಿಕ–ನಾಸ್ತಿಕ

ಸಾಮಾನ್ಯ ಆಸಕ್ತರಾಗಲಿ, ತಜ್ಞರಾಗಲಿ ದಾರ್ಶನಿಕ ತತ್ತ್ವ ವಿಚಾರದಲ್ಲಿ ಮಾತಾಡುವಾಗ ಆಸ್ತಿಕ-ನಾಸ್ತಿಕ ಎಂದು ಎರಡು ವಿಭಾಗವಾಗಿ ಬಳಸುವುದು ಜಗತ್ತಿನಾದ್ಯಂತ ರೂಢವಾದ ಕ್ರಮ. ಆದರೆ ನಾವು ಬಳಸುವಷ್ಟು ಸುಲಭವಾಗಿ ಆ ಶಬ್ದಗಳ ಅರ್ಥ – ವ್ಯಾಪ್ತಿ ಸ್ಪಷ್ಟವಿಲ್ಲ. ಯಾವ ಆಸ್ತಿಕ, ಯಾವ ನಾಸ್ತಿಕ, ಹಾಗೆಂದರೇನು ಎಂದೆಲ್ಲಾ ಕೇಳಬೇಕಾಗುತ್ತದೆ.

ಇದೆ = 'ಅಸ್ತಿ' ಎಂಬುದರಿಂದ ಆಸ್ತಿಕ. ನಾಸ್ತಿ = ಇಲ್ಲ, ಎಂಬುದರಿಂದ ನಾಸ್ತಿಕ. ಏನು ಇದೆ ? ಏನು ಇಲ್ಲ? ದೇವರಿದ್ದಾನೆ ಎಂಬುದನ್ನು ನಂಬುವವರು ಆಸ್ತಿಕರು. ಇಲ್ಲವೆಂಬುವರು ನಾಸ್ತಿಕರು – ಇದು ಸಾಮಾನ್ಯ ಜನಪ್ರಿಯ ಸೂತ್ರ. ಆದರೆ ದೇವರನ್ನು ಒಪ್ಪಿದರೂ, ಧಾರ್ಮಿಕವಾದ ವಿಚಾರಗಳಲ್ಲಿ ಬೇರೆ ಅಭಿಪ್ರಾಯ ಇದ್ದವನನ್ನೂ ನಾಸ್ತಿಕನೆಂದುದುಂಟು. ಕಡು ವೈಷ್ಣವನಿಗೆ, ಶೈವನು ನಾಸ್ತಿಕ. ಕಡು ಶೈವನಿಗೆ ವೈಷ್ಣವನು ನಾಸ್ತಿಕ. ಕಾರಣ – 'ನೀನು ಪೂಜಿಸುವ ದೇವರು ದೇವರಲ್ಲ, ತಪ್ಪು ದೇವರು' ಎಂದು ಪರಸ್ಪರ ಆಕ್ಷೇಪ. ಯೂರೋಪಿನ ಪ್ರಸಿದ್ಧ ಚಿಂತಕ, ಸ್ಪಿನೋಜಾ ಒಂದು ಬಗೆಯ 'ಅದ್ವೈತ' ಸಿದ್ಧಾಂತಿ. 'ದೇವೋನ್ಮತ್ತ' (God intoxicated) ಎಂಬಷ್ಟು ವಿಶ್ವದೇವೈಕ್ಯವಾದಿ ಅವನು. ಆದರೆ, ಅಂದಿನ ಅಲ್ಲಿಯ ಕ್ರಿಶ್ಚಿಯನ್ ಮತವ್ಯವಸ್ಥೆ ಅವನನ್ನು ಭ್ರಾಂತನೆಂದೂ, ನಾಸ್ತಿಕನೆಂದೂ ಹೇಳಿತು !

ನಾಸ್ತಿಕ-ಆಸ್ತಿಕ ಎರಡೂ ಅಲ್ಲದ ಒಂದು ಪಂಥವೂ ಉಂಟು. ಅದೇ ಅಜ್ಞೇಯವಾದ, ಅನಾಸ್ತಿಕತೆ. 'ನೀವು ಹೇಳುವ ದೇವರು, ಪರಲೋಕ ಇತ್ಯಾದಿ ಉಂಟೋ ಇಲ್ಲವೋ ನನಗೆ ಗೊತ್ತಿಲ್ಲ, ನೀವೂ ನೋಡಲಿಲ್ಲ. ತಿಳಿಯಲೂ ಅಸಾಧ್ಯ. ಹಾಗಾಗಿ ಮಧ್ಯಸ್ಥವಾಗಿರುವುದು ಸೂಕ್ತ.' – ಇದೇ ಅಜ್ಞೇಯವಾದ. ಇರಲಿ.

ನಮ್ಮ ಪರಂಪರೆಯಲ್ಲೂ ಆಸ್ತಿಕ-ನಾಸ್ತಿಕವೆಂಬ ಪದಗಳಿಗೆ ಬೇರೆ ಬೇರೆ ಅರ್ಥಗಳುಂಟು.

''ನಾಸ್ತಿಕೋ ವೇದನಿಂದಕಃ'' – ಎಂಬುದು ಸ್ಮೃತಿಕಾರ ಮನುವಿನ ಮಾತು. ವೇದವನ್ನು ನಿರಾಕರಿಸುವವನು (ದೇವರನ್ನು ನಿರಾಕರಿಸುವವನು ಅಲ್ಲ) ನಾಸ್ತಿಕ. ಈ ಪ್ರಕಾರ, ಚಾರ್ವಾಕ, ಬೌದ್ಧ, ಜೈನ ದರ್ಶನಗಳೂ ಅಥವಾ ವೇದವನ್ನು ಒಪ್ಪದ ಇತರ ಮಾರ್ಗಗಳೂ ನಾಸ್ತಿಕ.

ದೇವರನ್ನು ಒಪ್ಪದವನು ನಾಸ್ತಿಕ – ಇದೊಂದು ಅರ್ಥ. ಇದರ ಪ್ರಕಾರ ಚಾರ್ವಾಕ, ಬೌದ್ಧ, ಜೈನರು ಮಾತ್ರ ನಾಸ್ತಿಕರಲ್ಲ. ಪರಮವೈದಿಕರಾದ ಮೀಮಾಂಸಕರೂ ನಾಸ್ತಿಕರೇ ! ವೇದ ಪ್ರಾಮಾಣ್ಯಕ್ಕೆ ಬೆಲೆ ಕೊಡುತ್ತಾರೆಂದು ಹೇಳಲಾದ ಸಾಂಖ್ಯ, ವೈಶೇಷಿಕ ದಾರ್ಶನಿಕರೂ ನಾಸ್ತಿಕರೇ. ಇವರು ವೇದಕ್ಕೆ ಕೊಡುವ ಸ್ಥಾನದಲ್ಲೂ, ಪ್ರಾಶಸ್ತ್ಯದಲ್ಲೂ ಸೂಕ್ಷ್ಮವಾದ ವ್ಯತ್ಯಾಸಗಳೂ ಅಭಿಪ್ರಾಯಭೇದಗಳೂ ಇವೆ.

ವೇದವಾದಿಗಳ ಪ್ರಕಾರ – ನೀವು ವೇದವನ್ನು ಪ್ರಮಾಣ ಎಂದು ಒಪ್ಪಿದರೆ ಸಾಕು ನೀವು ಆಸ್ತಿಕರು. ನೀವು ದೇವರನ್ನು ಒಪ್ಪದಿದ್ದರೂ ಸರಿ, ವೇದಕ್ಕೆ ಔಪಚಾರಿಕ ಗೌರವ ಕೊಟ್ಟರೂ ಸರಿಯೇ. ದೇವವಾದಿಗಳ ಪ್ರಕಾರ ನೀವು ದೇವರನ್ನು ಒಪ್ಪಿದರೆ ಆಸ್ತಿಕ, ಒಪ್ಪದಿದ್ದರೆ ನಾಸ್ತಿಕ. ಮತವಾದಿಗಳ ಪ್ರಕಾರ – ನೀವು ಅವರು ಹೇಳುವ ದೇವರನ್ನು ಒಪ್ಪಿದರೆ ಆಸ್ತಿಕ, ಇಲ್ಲವಾದರೆ ನಾಸ್ತಿಕ. ಅಥವಾ ತಪ್ಪು ದಾರಿಯಲ್ಲಿರುವ ಆಸ್ತಿಕ. ಅರ್ಥಾತ್ ಬೇರೆ ದೇವರನ್ನು ಶ್ರೇಷ್ಠ ಎನ್ನುವ ಮೂಲಕ ದೇವರನ್ನು ತಪ್ಪಾಗಿ ಗ್ರಹಿಸಿದವರು. ಹಾಗೆಯೇ ಪಾಪಪುಣ್ಯ-ಪರಲೋಕಗಳನ್ನು, ಆರಾಧನೆ, ಅಹಿಂಸಾದಿ ವ್ರತಗಳನ್ನು ಒಪ್ಪಿದ್ದರೂ ಜೈನ, ಬೌದ್ಧಾದಿಗಳು ವೈದಿಕರ ದೃಷ್ಟಿಯಲ್ಲಿ ನಾಸ್ತಿಕರು.

ವಿಶ್ವವೂ, ದೇವತತ್ತ್ವ (ಬ್ರಹ್ಮವೂ) ಎಲ್ಲ ಒಂದೇ ಎಂದ 'ಮಾಯಾವಾದಿ. ಏಕವಾದಿ' ಅಥವಾ ಬ್ರಹ್ಮವಾದಿ ಶಂಕರರನ್ನು. ದ್ವೈತವಾದಿಗಳು 'ಪ್ರಚ್ಛನ್ನ ಬೌದ್ಧ' ಎಂದುದುಂಟು. ಎಂದರೆ 'ನಿನ್ನ ಈ ಬ್ರಹ್ಮವಾದವೂ ಬೌದ್ಧರಂತೆಯೇ ನಾಸ್ತಿಕ, ಶೂನ್ಯವಾದ

ಮಾರುವೇಷದ ಬೌದ್ಧನೇ ನೀನು' ಎಂಬ ಆಕ್ಷೇಪ – ಹೀಗಿದೆ ಆಸ್ತಿಕ್ಯ ನಾಸ್ತಿಕ್ಯಗಳ ವಿಭಾಗದ ವಿಚಿತ್ರ ಶಾಸ್ತ್ರಮಾಯೆ !

**ಸೇಶ್ವರ – ನಿರೀಶ್ವರ**

ಇದಕ್ಕಿಂತ ಭಿನ್ನವಾದುದು ಮತ್ತು ಹೆಚ್ಚು ಸ್ಪಷ್ಟವಾದದ್ದು – ದೇವರನ್ನು ಆಧರಿಸಿದ ದ್ವಿಭಾಗ. ದ್ವಿಭಾಗ ಎಂದರೆ ದೇವರು ಎಂಬುದನ್ನು ಇದೆಯೆಂದೊಪ್ಪಿದವನು – ಇಲ್ಲ ಅನ್ನುವವನು ಎಂಬ ವಿಭಾಗ. ಇದನ್ನು ಆಸ್ತಿಕ-ನಾಸ್ತಿಕ ಎಂದು ಕರೆಯುತ್ತಾರಾದರೂ ಸೇಶ್ವರ – ನಿರೀಶ್ವರ ಎಂದು ಹೇಳುವುದು ಹೆಚ್ಚು ಸೂಕ್ತ. ಇಲ್ಲಿ 'ಈಶ್ವರ' ಎಂದರೆ ಸಾಮಾನ್ಯ ಅರ್ಥದಲ್ಲಿ ಜಗತ್ತಿನ ಒಡೆಯ, ಕಾರಣರೂಪೀ ದೇವರು, ತತ್ತ್ವವೆಂದು ಅರ್ಥ.

ಇಲ್ಲೂ ಕೂಡ ಸಮಸ್ಯೆಗಳಿವೆ. ಈಶ್ವರ ಅಥವಾ ದೇವರು ಎಂದರೇನು ಎಂಬ ಪ್ರಶ್ನೆ ಬರುತ್ತದೆ. ದೇವರ ಕಲ್ಪನೆಯಲ್ಲಿ ಅಪಾರ ವೈವಿಧ್ಯವಿದೆ. ಯಾವ ದೇವರು ? ಯಾರ ದೇವರು ? ಎಂತಹ ದೇವರು ? ಇದರಲ್ಲಿ ನಾನಾರೀತಿಯ ದೃಷ್ಟಿಗಳೂ ಇವೆ.

ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳನ್ನು ಮಾಡುವ, ಅನುಗ್ರಹ-ನಿಗ್ರಹ ಸಾಮರ್ಥ್ಯಗಳುಳ್ಳ, ಜಗತ್ತಿನ ಆಡಳಿತವನ್ನು ನಿರ್ವಹಿಸುವ ವಸ್ತುವನ್ನು, ದೇವರೆಂದು ನಾವು ಸಾಮಾನ್ಯವಾಗಿ ಹೇಳುತ್ತೇವಷ್ಟೆ? ಇಲ್ಲಿ ದೇವರೆಂಬುದು ಅವನೊ, ಅವಳೊ ? ಅದೊ ? ಅದು ವ್ಯಕ್ತಿಯೊ ? ಶಕ್ತಿಯೊ ? ಅದಕ್ಕೆ ಆಕಾರವುಂಟೆ (ಸಾಕಾರ) ? ಇಲ್ಲವೆ (ನಿರಾಕಾರ) ? ಅದರ ಗುಣಗಳಾವುವು ? ಇದರಲ್ಲೆಲ್ಲಾ ಹಲವು ಅಭಿಮತಗಳಿವೆ. ಸೃಷ್ಟಿ ಮಾತ್ರ ದೇವರ ಕೆಲಸ. ಆಡಳಿತ ದೇವರಿಗೆ ಹೆಚ್ಚುವರಿ ಕೆಲಸ. ಅವನು ಕೇವಲ ಆರಂಭಶಕ್ತಿ ಮಾತ್ರ ಎಂಬುದೊಂದು ಅಭಿಪ್ರಾಯ. ವೈಶೇಷಿಕ ದರ್ಶನವು ಈ ಅಭಿಪ್ರಾಯದಲ್ಲಿದೆ. ದೇವರಿದ್ದರೂ ಅವನು ಜೀವಿಗಳ ಕರ್ಮಗಳ ವಿತರಕನು ಮಾತ್ರ. ಆತನು ಜಗತ್ತಿನ ಆಗುಹೋಗುಗಳಲ್ಲಿ ಹಸ್ತಕ್ಷೇಪ ಮಾಡುವುದಿಲ್ಲ ಎನ್ನುವ ಮತವೂ ಉಂಟು. ದೇವರು ಸರ್ವಶಕ್ತ, ಬೇಕಿದ್ದರೆ ಏನನ್ನೂ ಮಾಡಬಲ್ಲ, ತನ್ನಿಚ್ಛೆಯಂತೆ ನಿಗ್ರಹ – ಅನುಗ್ರಹ ಮಾಡಬಲ್ಲ.

'ಕರ್ತುಂ, ಅಕರ್ತುಂ, ಅನ್ಯಥಾಕರ್ತುಂ, ಸಮರ್ಥಃ' ಎಂಬುದು ಇನ್ನೊಂದು ಮತ.

ಅಂತೂ ಯಾವುದೋ ರೂಪದಲ್ಲಿ ದೇವರುಂಟು ಎಂದರೆ ಸೇಶ್ವರವಾದ, ಇಲ್ಲವೆಂದರೆ ನಿರೀಶ್ವರವಾದವಾಯಿತು.

ಈ ಪ್ರಕಾರ ಗೆರೆ ಎಳೆದರೆ ಪ್ರಾಚೀನ ಸಾಂಖ್ಯ, ಮೂಲನ್ಯಾಯ, ವೈಶೇಷಿಕ, ಪ್ರಾಚೀನ ವೈದಿಕ ಮೀಮಾಂಸಾ ಮತ – ಇವುಗಳೆಲ್ಲ ನಿರೀಶ್ವರವಾದಿಗಳು. ವೈದಿಕರಾಗಿ ಇವರು ಆಸ್ತಿಕರು. ಬೌದ್ಧ, ಜೈನರು, ನಿರೀಶ್ವರರು, ಅವೈದಿಕರು. ಹೀಗಾಗಿ ಒಂದು ಕ್ರಮದಿಂದ ಒಂದು ಕಡೆ ಬರುವ ದರ್ಶನ, ಇನ್ನೊಂದು ರೀತಿಯಲ್ಲಿ ಬೇರೆ ಕಡೆಗೆ ಸೇರುತ್ತದೆ.

ಜಗತ್ತು, ಜೀವ, ದೇವ ಎಂಬುದೆಲ್ಲ ಬೇರೆ ಬೇರೆ ಅಲ್ಲ, ಎಲ್ಲ ಒಂದೇ. ಇರುವುದೊಂದೇ ಬ್ರಹ್ಮ, ಕಾಣುವುದು ಹಲವು, ಎಂಬ ಅದ್ವೈತ ಮಾಯಾವಾದವು ಒಂದು ಬಗೆಯಿಂದ ಸೇಶ್ವರ- ನಿರೀಶ್ವರಗಳ ವಿಚಿತ್ರವಾದ ಸಮನ್ವಯವೆಂದೂ ಹೇಳಬಹುದು.

*ಯೋ ವೇದಾದೌ ಸ್ವರಃ ಪ್ರೋಕ್ತಃ ವೇದಾಂತೇ ಚ ಸುನಿಶ್ಚಿತಃ (ಪ್ರತಿಷ್ಠಿತಃ)*
*ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥*

ಎಂಬಲ್ಲಿ ಇದೇ ಬಗೆಯ ತಾತ್ತ್ವಿಕ ಅಭಿನ್ನತೆಯನ್ನು ಕಾಣಬಹುದು.

**ಪೂರ್ಣ ನಾಸ್ತಿಕ – ಚಾರ್ವಾಕ**

ಆಸ್ತಿಕ-ನಾಸ್ತಿಕ, ಸೇಶ್ವರ-ನಿರೀಶ್ವರ ಎಂಬ ಎರಡೂ ನೆಲೆಗಳಲ್ಲಿ, ವೇದ, ದೇವರು, ಪಾಪ-ಪುಣ್ಯ, ಪುನರ್ಜನ್ಮ, ಪರಲೋಕ, ಪೂಜೆ, ಆರಾಧನೆಗಳನ್ನು ಪೂರ್ಣವಾಗಿ ನಿರಾಕರಿಸುವ ದಿಟ್ಟತನದ ನಿಲುಮೆಯುಳ್ಳ ಚಾರ್ವಾಕ ದರ್ಶನವು ಪೂರ್ಣ ಅರ್ಥದಲ್ಲಿ ನಾಸ್ತಿಕ ನಿರೀಶ್ವರ ದರ್ಶನ. ಆಚಾರ್ಯ ಬೃಹಸ್ಪತಿಯಿಂದ ಸ್ಥಾಪಿತವಾದ, ಚಾರುವಾಕರೆಂಬವರಿಂದ ಪ್ರಚಾರ ಮಾಡಲ್ಪಟ್ಟ ಈ ಮಾರ್ಗವು ಚಾರುವಾಕ್ = ಸುಂದರವಾದ ಮಾತು, ಆಕರ್ಷಕವೆಂಬುದರಿಂದಲೂ, ದೇವರು, ಪಾಪಪುಣ್ಯಾದಿಗಳನ್ನು ಚರ್ವಣಗೈದು ಪುಡಿ ಮಾಡಿದ್ದರಿಂದಲೂ ಚಾರ್ವಾಕ. ಲೋಕವನ್ನೇ ಮುಖ್ಯವಾಗಿರಿಸಿ ಲೋಕಪ್ರಸಿದ್ಧವಾದುದರಿಂದ ಲೋಕಾಯತ. ಹೀಗೆಂದು ಒಂದು ವಿವರಣೆ ಇದೆ.

ಚಾರ್ವಾಕರ ಪ್ರಕಾರ ಭೂಮಿ, ಗಾಳಿ, ನೀರು, ತೇಜಸ್ಸು ಇವು ನಾಲ್ಕೇ ತತ್ತ್ವಗಳಿಂದ ಜಗತ್ತು ತಾನಾಗಿದೆ. ಅದಕ್ಕಾವ ಸೃಷ್ಟಿಕರ್ತನೂ ಇಲ್ಲ, ಪಾಲಕನೂ ಇಲ್ಲ. ಭೌತವಸ್ತುಗಳ ವಿಭಿನ್ನ ಮಿಲನ ಸಮ್ಮಿಶ್ರಣಗಳ ಫಲವೇ ಜಗತ್ತಿನ ಅಸಂಖ್ಯ ಜೀವ, ಅಜೀವ ವಸ್ತುಗಳ ರಾಶಿ. ರಾಜನೇ ದೇವರು; ಮರಣವೇ ಜೀವಿಗಳ ಕೊನೆ.

ಭಸ್ಮೀಭೂತಸ್ಯ ದೇಹಸ್ಯ ಪುನರಾಗಮನಂ ಕುತಃ ? ಸತ್ತು ಭಸ್ಮವಾದವನು ಮತ್ತೆ ಹುಟ್ಟುವನೆ ? ಪಾಪಪುಣ್ಯಗಳೆಂಬುದು ಬರಿ ಸುಳ್ಳು. ವೇದಗಳು ನಿರರ್ಥಕ. ಉಪಕಾರ, ದಯೆ, ದಾನ, ದಾಕ್ಷಿಣ್ಯಗಳು ಸಹಕಾರಕ್ಕಾಗಿರುವ ಮೌಲ್ಯಗಳು; ಸಾಮಾಜಿಕ ವಿಚಾರಗಳು. ಅವುಗಳನ್ನು ಪಾಪಪುಣ್ಯಕಾರಕವೆನ್ನುವುದು ದಾರಿದ್ರ್ಯ. ಯಜ್ಞ ಯಾಗ ಪೂಜೆಗಳೆಲ್ಲ ಅನರ್ಥ ಮತ್ತು ಅಪವ್ಯಯ. ಮತಾಚಾರಗಳು ವಂಚನೆ. ಮಾನವನು ತಾನೂ ಬದುಕಿ, ಉಳಿದವರನ್ನು ಸುಖವಾಗಿರಿಸಿ ಹೊಂದಿಬಾಳುವುದು ಪರಮಮೌಲ್ಯ. ಇಲ್ಲದ ಜನ್ಮಾಂತರ, ಸ್ವರ್ಗ, ನರಕ, ಕರ್ಮ, ದೇವರುಗಳನ್ನು ಕಟ್ಟಿಕೊಂಡು ವ್ಯಥೆಪಡುವುದು ಮೌಢ್ಯ. ಯಜ್ಞಪಶುವಿಗೆ ಮೋಕ್ಷವಿರುವುದಾದರೆ, ಯಜಮಾನನು ತನ್ನವರನ್ನೇ ಕೊಲ್ಲಬಹುದಲ್ಲವೇ ? ಮೋಕ್ಷವೆಂಬ ಆದರ್ಶ ಅಪ್ರಸ್ತುತ.

ಪ್ರತ್ಯಕ್ಷ, ಎಂದರೆ ನಮ್ಮ ಇಂದ್ರಿಯಗಳಿಗೆ ಗೋಚರವಾಗಬಲ್ಲದ್ದು ಸತ್ಯ. ಪ್ರತ್ಯಕ್ಷಕ್ಕೆ ಸಂವಾದಿಯಾಗಬಲ್ಲ ಅನುಮಾನ(ತರ್ಕ)ವೂ ಸತ್ಯವಾದೀತು. ಶಾಸ್ತ್ರ, ತಿಳಿದವರ ಮಾತು ಎಂಬ ಆಪ್ತವಾಕ್ಯವು ಹೇಳುವವನ ಯೋಗ್ಯತೆಯ ಮೇಲೆ ಇರುತ್ತದೆ. ಶಾಸ್ತ್ರಗಳು ಲೋಕದಲ್ಲಿ ಇದ್ದುದನ್ನೇ ಹೇಳಿದರೆ ವಿಶೇಷವಿಲ್ಲ. ಇಲ್ಲದ್ದನ್ನೂ, ಕಾಣದ್ದನ್ನೂ ಹೇಳಿದರೆ ಹೇಗೂ ಬೆಲೆಯಿಲ್ಲ – ಇದು ಚಾರ್ವಾಕ ಮತದ ಸಾರ.

ಚಾರ್ವಾಕ ಮತವು ವೈಜ್ಞಾನಿಕ ಮನೋಧರ್ಮ, ಲೋಕಾನುಗ್ರಹದೃಷ್ಟಿ, ಜೀವನಪ್ರೀತಿ, ಮಾನವೋನ್ನತಿಗಳನ್ನು ಧ್ಯೇಯಗಳಾಗಿ ಹೊಂದಿರುವ ದರ್ಶನ. ಆಸ್ತಿಕದರ್ಶನಗಳು ಚಾರ್ವಾಕವನ್ನು ಬಲವಾಗಿ ನಿರಾಕರಿಸಿದರೂ, ಅದರ ಮೌಲ್ಯಗಳನ್ನೆಲ್ಲ ಅಲ್ಲಗಳೆದಿಲ್ಲ. ಪ್ರಕೃತಿವಾದ, ನಿಯತಿವಾದ, ಅಕ್ರಿಯಾವಾದ, ಸಂದೇಹವಾದ, ಅಣುವಾದ, ಆಕಸ್ಮಿಕತಾವಾದ, ಯಾದೃಚ್ಛಿಕತಾವಾದ – ಮುಂತಾದ ಪ್ರಭೇದಗಳು ಲೋಕಾಯತದ ವಿವಿಧ ಮುಖಗಳು.

ಅಸ್ತಿ-ನಾಸ್ತಿ ಭಾವನೆಗಳು ಬಹು ಪ್ರಾಚೀನವಾದುದರಿಂದ, ಆಸ್ತಿಕ, ನಾಸ್ತಿಕ ದೃಷ್ಟಿಗಳೂ ಮಾನವನಷ್ಟೇ ಪ್ರಾಚೀನ. ಆಸ್ತಿಕರಲ್ಲಿ ನಾಸ್ತಿಕ ಭಾವಗಳೂ, ನಾಸ್ತಿಕರಲ್ಲಿ ಆಸ್ತಿಕ್ಯವೂ ಕಾಣುವುದುಂಟು. ಚಾರ್ವಾಕ ಮತದ ಅನೇಕ ಅಂಶಗಳಿಗೆ, ಸಾಂಖ್ಯ, ವೈಶೇಷಿಕ, ಮೀಮಾಂಸಕ ಮತಗಳಲ್ಲಿ ಪ್ರಾಧಾನ್ಯವುಂಟು.

**ಕರ್ಮವಾದ**

ದೇವರ ಅಸ್ತಿತ್ವವನ್ನು ನಿರಾಕರಿಸುವಲ್ಲಿ ವೈದಿಕ ಆಚಾರ್ಯರಲ್ಲಿ ಅಗ್ರಪಂಕ್ತಿಯವರೆನಿಸಿರುವ ಶಬರ, ಕುಮಾರಿಲ, ಪ್ರಭಾಕರರು, ಚಾರ್ವಾಕರಂತಹದೇ ತರ್ಕಗಳನ್ನು ಮುಂದೊಡ್ಡಿದ್ದಾರೆಂಬುದು ಗಮನಾರ್ಹ. ವೇದದಲ್ಲಿ ಕಾಣಬರುವ ದೇವ, ದೇವತೆಗಳ ವಿಚಾರವು ಕೇವಲ ಯಜ್ಞಪ್ರಕ್ರಿಯೆಗೆ ಸಂಬಂಧಿಸಿದ ತತ್ತ್ವವಿಸ್ತಾರವೆಂದೂ, ಉಪನಿಷತ್‌ಗಳ 'ಬ್ರಹ್ಮ' ವಿಚಾರವು ಕರ್ಮಮಹಿಮೆಯನ್ನು ಪ್ರಶಂಸಿಸುವುದೆಂದೂ ಮೀಮಾಂಸಾ ಮತದ ಆಶಯ.

'ಕೇವಲ ಕರ್ಮವಾದ'ವೆಂದರೆ – ಪಾಪಪುಣ್ಯಗಳೆಂಬ ಕರ್ಮಫಲಗಳಿಂದ ಜೀವರುಗಳ ಸಕಲ ಉತ್ಕರ್ಷ, ಅಪಕರ್ಷ, ಉದ್ಧಾರ, ಪತನಗಳು ಆಗುತ್ತವೆ; ಕರ್ಮವೇ ನಿರ್ವಾಹಕ; ಆದುದರಿಂದ ದೇವರೆಂಬ ಇನ್ನೊಂದು ವಸ್ತು ಬೇಡ ಎಂಬ ಅಭಿಪ್ರಾಯ. ಈ ವಾದವು ಜನ್ಮಾಂತರ, ಪಾಪಪುಣ್ಯ, ಪುನರ್ಜನ್ಮಗಳನ್ನು ಒಪ್ಪುತ್ತದೆ. ದೇವರನ್ನು ನಿರಾಕರಿಸುತ್ತದೆ. ದೇವರು ಕರ್ಮದಂತೆ ಫಲ ಕೊಡುವುದಾದರೆ, ಅವನಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಅವನು ಬರಿಯ ವಿತರಕನಾಗುತ್ತಾನೆ ಹೊರತು, ದೇವರಾಗುವುದಿಲ್ಲ ಎಂದು ಇವರ ವಾದ. ಅಲ್ಲದೆ, ದೇವರ ಇರವನ್ನು ಒಪ್ಪಿಕೊಂಡಲ್ಲಿ ಜಗತ್ತಿನಲ್ಲಿರುವ ಕೆಡುಕುಗಳನ್ನು ಸರಿಯಾಗಿ ವಿವರಿಸಲು ಆಗುವುದಿಲ್ಲ ಎಂದು ಇವರ ತರ್ಕ. ದೇವರೆಂಬ ಸರ್ವಶಕ್ತನಿದ್ದರೆ ಕರ್ಮಕ್ಕೂ, ಕರ್ಮದ ಮಹಿಮೆಯನ್ನು ಒಪ್ಪಿದರೆ ದೇವರ ಮಹಿಮೆಗೂ ಬಾಧಕವಾಗಿ ಪರಸ್ಪರ ವಿರೋಧವಾಗುವುದೆಂದು ತಾತ್ಪರ್ಯ. ಆದುದರಿಂದಲೇ, ಪ್ರಾಚೀನ ಮೀಮಾಂಸಕರನ್ನು ಅರ್ಧ ಲೋಕಾಯತಿಕರೆನ್ನುವುದುಂಟು.

**ಜೈನದರ್ಶನ**

ಪ್ರಾಚೀನನಾದ ಋಷಭನಿಂದ ತೊಡಗಿ ಭಗವಾನ್ ಮಹಾವೀರರ ತನಕ ಇಪ್ಪತ್ತನಾಲ್ಕು ತೀರ್ಥಂಕರರೆಂಬ ಮಹಾನ್ ವಿರಾಗಿಗಳಿಂದ ಉಪದಿಷ್ಟವಾದ ಮತದರ್ಶನವು ಜೈನವೆಂದು ಪ್ರಸಿದ್ಧ. 'ಜಿನ' ಎಂದರೆ ಇಂದ್ರಿಯಗಳನ್ನು ಗೆದ್ದವನು. ಅದರಿಂದ ಅಹಿಂಸೆ, ಸದಾಚಾರ, ಕರ್ಮವಾದಗಳು ಜೈನದರ್ಶನದ ಹೆಗ್ಗುರುತುಗಳು. ಈ ದರ್ಶನವು ಪ್ರಾಯಃ ಸನಾತನ ಆರ್ಷ ಮತದ ಪ್ರಾಚೀನವಾದ ಶಾಖೆಯಾಗಿರಬಹುದು. ಇದನ್ನು ಶ್ರಮಣಪಂಥವೆಂದೂ ಹೇಳುವರು. ಈ ಪಂಥವೇ ಎರಡಾಗಿ – ಜೈನ, ಬೌದ್ಧವೆಂಬ ರೂಪಗಳನ್ನು ತಾಳಿರಬಹುದು. ಪಾರ್ಶ್ವನಾಥ, ಮಹಾವೀರರಿಂದ ಜೈನ (ಆರ್ಹತ) ಮತವು ಪ್ರಕರ್ಷಕ್ಕೆ ಬಂದಿತು.

ಜಗತ್ತು ಜೀವ-ಅಜೀವವೆಂಬುದಾಗಿದೆ. ಭೌತವಸ್ತುಗಳೆಲ್ಲವೂ ಪುದ್ಗಲಗಳೆಂಬ ಸೂಕ್ಷ್ಮ ಅಣುಗಳಿಂದಾಗಿವೆ. ಭೌತವೆಲ್ಲ ಜೀವಮಯವೇ. ವಿಕಾಸದ ವಿವಿಧ ಸ್ಥಿತಿಗಳಲ್ಲಿರುವ ಜೀವಗಳಿಂದ ಜಗತ್ತು ತುಂಬಿದೆ. ಆಕಾಶ, ಕಾಲ, ಧರ್ಮ (ಚಲನೆ), ಅಧರ್ಮ (ಜಡತೆ, ಸ್ಥಿರತೆ) ಇವು ಇನ್ನುಳಿದ ತತ್ತ್ವಗಳು.

ಜೀವಾತ್ಮನ ಸ್ಥಿತಿಗತಿಗಳಿಗೆ, ಬಂಧಮೋಕ್ಷಗಳಿಗೆ ಕರ್ಮವೆಂಬ ಪಾಪಪುಣ್ಯಗಳೇ




**ಹೂ** ನಗೆಯ ಬೀರುತ್ತ
ಹಸಿವನ್ನು ಮರೆಯುತ್ತ
ಬದುಕಿನಂಗಳದಲ್ಲಿ ಬಳುಕುತ್ತ ಬಂದಳೊ...
ಪುಟ್ಟ ಹೆಜ್ಜೆಯ ದಿಟ್ಟ ಹುಡುಗಿ

ಕಹಿಯನ್ನು ಮರೆಯುತ್ತ
ಸವಿಯನ್ನು ಅರಸುತ್ತ
ನೆಲೆಯಿಲ್ಲದವಳಾದರೂ
ನಲಿಯುತ್ತ ನಡೆದಳೊ...
ಪುಟ್ಟ ಹೆಜ್ಜೆಯ ದಿಟ್ಟ ಹುಡುಗಿ

ಸಾಲು ಸಾಲಾಗಿ ಬಂದ ಸೋಲುಗಳ ಕಂಡು
ಬೆದರದೆ-ಹೆದರದೆ-ಹಿಂಜರಿಯದೆ
ಸೆಡ್ಡು ಹೊಡೆದು ಮುಂದುವರಿದಳೊ...
ಪುಟ್ಟ ಹೆಜ್ಜೆಯ ದಿಟ್ಟ ಹುಡುಗಿ

ಬರಿಗಾಲಲ್ಲಿ ಮುರಿದ ಮುಳ್ಳನ್ನು ಕಿತ್ತು
ಬಿರಿದ ನೋವುಗಳ ಹೊರೆಯನ್ನು ಹೊತ್ತು
ಬಿರಬಿರನೆ ನಡೆಯುತ್ತ ಸಾಗಿ ಹೋಗಿ
ಬರಿದಾದ ಬಾಳನ್ನು ಅಪ್ಪಿಕೊಂಡಳೊ...
ಪುಟ್ಟ ಹೆಜ್ಜೆಯ ದಿಟ್ಟ ಹುಡುಗಿ

ಅಳು ಅರಣ್ಯರೋದನವಾದಾಗ
ಬಾಳು ಕಾಡು ಬೆಳದಿಂಗಳಾದಾಗ
ಆದರ್ಶದುರುಳಿಗೆ ಕೊರಳು ಕೊಟ್ಟು
ನಸುನಗುತ ನಿದ್ರೆ ಹೋದಳೊ...
ಪುಟ್ಟ ಹೆಜ್ಜೆಯ ದಿಟ್ಟ ಹುಡುಗಿ

**ಕುಸುಮ ನಸೋಜಾ ಕರಾಳೆ,** ಉಪನ್ಯಾಸಕಿ, ಪ್ರಾಣಿಶಾಸ್ತ್ರ, ಕರ್ನಾಟಕ ಸೈನ್ಸ್ ಕಾಲೇಜ್, ಧಾರವಾಡ

ಕಾರಣ. ಇದೂ ಕೂಡ ಭೌತವಸ್ತು. ಇದು ಸೂಕ್ಷ್ಮ ಅಣುಗಳಾಗಿ ಜೀವವನ್ನು ಆವರಿಸುತ್ತದೆ. ಕರ್ಮದ ಫಲವು ಜೀವದೊಳಗೆ 'ಆಸ್ರವ'ವಾಗಿ ಹರಿದು, 'ಬಂಧ'ಕ್ಕೆ (ಬಂಧನಕ್ಕೆ) ಕಾರಣವಾಗುತ್ತದೆ. ಅದನ್ನು ಮೊದಲು ತಡೆಯುವುದು 'ಸಂವರ'. ಆ ಬಳಿಕ ಸದಾಚಾರದಿಂದ ಕರ್ಮದ ಅಣುಗಳನ್ನು ಹೊರಗೆ ಹಾಕುವುದು 'ನಿರ್ಜರ'. ಆಗ ತಾನೇ ತಾನಾಗಿ, ಖಾಲಿಯಾದ ಸೋರೆ ಬುರುಡೆಯು ತನ್ನಷ್ಟಕ್ಕೆ ನೀರಲ್ಲಿ ತೇಲುವಂತೆ ಜೀವವು ಹಗುರವಾಗಿ, ಮೇಲಕ್ಕೇರಿ ಮುಕ್ತವಾಗುವುದು. ಹೀಗೆ ಕರ್ಮವನ್ನು ಭೌತವಸ್ತುವಾಗಿ ವಿವರಿಸಿರುವುದು ಜೈನತತ್ತ್ವದ ವೈಶಿಷ್ಟ್ಯ. ಪ್ರತೀ ಜೀವಕ್ಕೂ ಅನಂತ ಸಾಮರ್ಥ್ಯವಿದೆ, ಅದನ್ನು ವಿಕಾಸಪಡಿಸುವುದು ಅವನ ಹೊಣೆ.

ಸತ್ಯದ ಸ್ವರೂಪವು ಜಟಿಲವೂ, ಬಹುಮುಖಿಯೂ ಆಗಿದೆ. ಆದುದರಿಂದ ಜೈನ ತಾತ್ತ್ವಿಕರು 'ಸ್ಯಾದ್ವಾದ'ವನ್ನು (ಸ್ಯಾತ್ = ಇರಬಹುದು, ಹೇಗೋ ಇದೆ) ಎಂಬುದನ್ನು ಪ್ರತಿಪಾದಿಸುತ್ತಾರೆ. ಇದೇ ಅನೇಕಾಂತವಾದ. ಸತ್ಯದ ಒಂದೇ ಮುಖಕ್ಕೆ ಒತ್ತುಕೊಡುವ ಏಕಾಂತಿಕವಾದಕ್ಕೆ ಭಿನ್ನವಾದುದು ಅನೇಕಾಂತ. ಇದರ ಪ್ರಯೋಗರೂಪವೇ ಸಪ್ತಭಂಗೀ ನ್ಯಾಯ. ಇದೆ, ಇಲ್ಲ ಎಂದು ಒತ್ತಿಹೇಳದೆ, ಹಾಗೂ ಸರಿ, ಹೀಗೂ ಸರಿ ಎಂದು ಉದಾರ ದೃಷ್ಟಿಯಿಂದ ನಿರ್ಣಯಿಸುವುದು ಈ ವಾದದ ಉದ್ದೇಶ. ಇದು ತಾತ್ತ್ವಿಕ ಅಹಿಂಸೆಯೂ ಹೌದು.

ಅಹಿಂಸೆ ಮತ್ತು ಕರ್ಮಸಿದ್ಧಾಂತಗಳು ಜೈನದರ್ಶನದ ಕೇಂದ್ರೀಯ ವಿಷಯಗಳು. ಸದಾಚಾರ, ಅಹಿಂಸೆಗಳಿಂದ ಇಂದ್ರಿಯಗಳನ್ನು ಜಯಿಸಿ, ಆತ್ಮಶುದ್ಧಿಮಾಡಿ ಮೋಕ್ಷವನ್ನು ಹೊಂದಬಹುದು. ದೇವರೆಂಬುದು ಬೇರೆ ಇಲ್ಲ. ಜೀವಾತ್ಮರೊಬ್ಬೊಬ್ಬರೂ ಪರಮಾತ್ಮರಾಗಬಹುದು. ಅರ್ಹತ ತೀರ್ಥಂಕರರಾದರೂ, ಅವರು ಮಾರ್ಗದರ್ಶಕರೆ ಹೊರತು ನಿಗ್ರಹಾನುಗ್ರಹ ಸಮರ್ಥರಾದ ಈಶ್ವರರಲ್ಲ.

'ರತ್ನತ್ರಯ' ಎಂಬ ಮೂರು ಬೆಳಕುಗಳಿಂದ ಜೀವನು ತನ್ನನ್ನು ಉದ್ಧರಿಸಿಕೊಳ್ಳಬೇಕು. ಸಮ್ಯಗ್‌ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ್ಯಗಳು ಮೂರು ರತ್ನಗಳು. ಜೈನಶಾಸ್ತ್ರದಲ್ಲಿ ನಂಬುಗೆ, ಅವುಗಳ ಜ್ಞಾನ ಮತ್ತು ಬದುಕಿನಲ್ಲಿ ಅನುಸರಣೆ ಇವೇ ಆ ಮೂರು. ಶೀಲ-ಪ್ರಜ್ಞಾ-ಸಮಾಧಿ ಎಂಬ ಬೌದ್ಧರ ತ್ರಿರತ್ನ ವಿಚಾರವೂ ರತ್ನತ್ರಯಕ್ಕೆ ಸಂವಾದಿ.

ಜೈನದರ್ಶನದಲ್ಲಿ– ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ ಎಂಬ ಐದು ವ್ರತಗಳಿವೆ. ಇವು ಯೋಗಿಗಳಿಗೆ ಕಠಿಣರೂಪದಲ್ಲೂ, ಸಾಮಾನ್ಯರಿಗೆ ತುಸು ಪರಿಷ್ಕೃತವಾಗಿಯೂ ಇವೆ. ಇವುಗಳಿಂದ ಗುಣ ಸ್ಥಾನಗಳನ್ನು ಸಾಧಿಸುತ್ತ, ಎಂಟು ಬಗೆಯ ಕರ್ಮಗಳ ನೂರನಲ್ವತ್ತೆಂಟು ವಿಧಗಳನ್ನು ಖಂಡಿಸಿ, ನಿರ್ಜರಗೊಳಿಸಿ, ಮೋಕ್ಷವನ್ನು ಹೊಂದುವುದು. ದಿಗಂಬರತ್ವವೆಂಬ ನಗ್ನತೆಯು ಜೈನಾಚಾರದಲ್ಲಿ ಉನ್ನತ ಆದರ್ಶವಾಗಿದ್ದು, ಅಪರಿಗ್ರಹ ಅರ್ಥಾತ್ ಭೋಗವನ್ನು ಸ್ವೀಕರಿಸದಿರುವುದರ ಪರಾಕಾಷ್ಠೆಯಾಗಿದೆ.

ನಿರೀಶ್ವರವಾಗಿದ್ದು, ಜೀವಾತ್ಮನಿಗೆ ಅವನವನ ಕರ್ಮದ ಹೊಣೆಗಾರಿಕೆ ನೀಡುವ ಜೈನ ದರ್ಶನವು ಬಹುತ್ವವಾದಿಯೂ, ಉದಾರವೂ ಆದ ತಾತ್ತ್ವಿಕ ದೃಷ್ಟಿ ಹೊಂದಿದ ಅನೇಕಾಂತ.

*ಅನೇಕಾಂತಂ ಜಗತ್ಸರ್ವಂ ಹೇರಂಬನರಸಿಂಹವತ್ ॥*

ಜಗತ್ತೆಲ್ಲ ಗಣಪತಿ, ನರಸಿಂಹರಂತೆ, ವಿಭಿನ್ನ, ವಿರುದ್ಧ, ಅಂಶಗಳ ಸಮನ್ವಯವಾಗಿದೆ.

ಪಶುಹಿಂಸೆಯ ಕಾರಣದಿಂದ ಯಜ್ಞಯಾಗಗಳಿಗೆ ಜೈನವು ವಿರುದ್ಧ. ಸಕಲ ಲೋಕ ಕಾರುಣ್ಯ, ಲೋಕೋದ್ಧಾರ, ಸರ್ವವು ಜೀವಮಯವೆಂಬ ದೃಷ್ಟಿ, ಅಹಿಂಸೆ, ಅಪರಿಗ್ರಹಗಳಲ್ಲಿ ತೀವ್ರ ನಿಷ್ಠೆಗಳಿಂದ ಜೈನದರ್ಶನವು ಭಾರತೀಯ ತಾತ್ತ್ವಿಕ ಕ್ಷೇತ್ರದಲ್ಲಿ ಕ್ರಾಂತಿಯನ್ನು ಉಂಟುಮಾಡಿತು. ಸಸ್ಯಾಹಾರದ ಆದರ್ಶ, ಪಶುಹಿಂಸೆ ನಿಲ್ಲಿಸಿದುದು, ಅನೇಕಾಂತ ಚಿಂತನೆಗಳು ಜೈನರ ಕೊಡುಗೆಗಳು. ಸಂನ್ಯಾಸ ಪದ್ಧತಿ ಮತ್ತು ಮೂರ್ತಿಪೂಜಾದಿ ಆಲಯ ವ್ಯವಸ್ಥೆಗಳಿಗೂ ಬಹುಶಃ ಜೈನರು ಆರಂಭಿಕರು. ಆಯುರ್ವೇದ, ವ್ಯಾಕರಣ, ಜ್ಯೋತಿಷ, ಭಾಷೆ, ಸಾಹಿತ್ಯಗಳ ಅಭಿವೃದ್ಧಿಯಲ್ಲಿ ಜೈನರು ಒಂದು ಚಳವಳಿಯಂತಹ ದೊಡ್ಡ ಕೊಡುಗೆ ನೀಡಿದ್ದಾರೆ. ಆಚಾರಾಂಗದಲ್ಲಿ ತೀವ್ರವಾದಿಯೂ, ವೈಚಾರಿಕವಾಗಿ ಬಹುವಾದಿ-ಉದಾರವಾದಿಯೂ ಆಗಿರುವ ಅರ್ಹತ ಪಂಥವು, ದಾರ್ಶನಿಕ ಪಥದರ್ಶಿಯಾಗಿ, ವೇಗೋತ್ಕರ್ಷಕವಾಗಿ ಕೆಲಸಮಾಡಿದೆ.

**ಬೌದ್ಧದರ್ಶನ**

ಭಗವಾನ್ ಗೌತಮಬುದ್ಧನಿಂದ ಸ್ಥಾಪಿತವಾದ, ಎಂದರೆ ಪರಿಷ್ಕೃತವಾಗಿ ಪುನರುಜ್ಜೀವಿಸಲ್ಪಟ್ಟ ದರ್ಶನವು ಬೌದ್ಧ ಅಥವಾ ಸೌಗತ ದರ್ಶನ. ಇದು ಶ್ರಮಣಪಂಥದ ಒಂದು ಶಾಖೆ. ಪ್ರಾಯಶಃ, ಉಪನಿಷತ್ತುಗಳ ಮೂಲವೂ ಬೌದ್ಧದರ್ಶನದ ಮೂಲವೂ ಒಂದೇ ಎನ್ನಬಹುದು. ಕರುಣೆ, ಶಾಂತಿ, ಅಹಿಂಸೆ, ಸದಾಚಾರಗಳು ಇದರ ಜೀವಾಳ.

ದುಃಖಮಯವಾದ ಪ್ರಪಂಚದಲ್ಲಿ ಶಾಂತಿಯನ್ನು, ಜೀವರಿಗೆ ಮೋಕ್ಷವನ್ನು ಪಡೆಯಲು ಆಗತ್ಯವಾದ ಆಚಾರವನ್ನು ಉಪದೇಶಿಸುವುದು ಬುದ್ಧನ ಮುಖ್ಯ ಉದ್ದೇಶ.

ನೈತಿಕವಿಚಾರವು ಇಲ್ಲಿ ಮುಖ್ಯ. ದಾರ್ಶನಿಕ ಚರ್ಚೆಗಳು ಅಷ್ಟು ಮುಖ್ಯವಲ್ಲ. ಆದರೂ ಬುದ್ಧೋತ್ತರ ಕಾಲದಲ್ಲಿ ಅದು ವಿಸ್ತಾರವಾಗಿ, ವೈವಿಧ್ಯಪೂರ್ಣವಾದ ದರ್ಶನವಾಗಿ ಬೆಳೆಯಿತು. ಒಂದು ಕಾಲದ ಅಧ್ಯಯನ, ಚಿಂತನ, ಚರ್ಚೆಗಳ ಫಲವಾಗಿ ಬುದ್ಧನು ನಾಲ್ಕು ಆರ್ಯಸತ್ಯಗಳನ್ನು ಕಂಡುಕೊಂಡುದು ಹೀಗೆ.

**ದುಃಖಮ್** – ಜೀವನವು ದುಃಖಮಯವೆಂಬುದು ನಿರಾಕರಿಸಲಾಗದ ಸತ್ಯ.

**ದುಃಖಸಮುದಯ** – ದುಃಖಕ್ಕೆ ಕಾರಣಗಳಿವೆ. ಅವು ಸರಪಣಿಯಾಗಿದ್ದು ಒಂದಕ್ಕೊಂದು ಬೆಸೆದಿವೆ. ಇವು ಒಂದಕ್ಕೊಂದು ಕಾರಣವಾಗಿ ಹನ್ನೆರಡು ಬಗೆ: ಜರಾಮರಣ, ಜಾತಿ (ಜನನ), ಭವ, ಉಪಾದಾನ (ಆಸಕ್ತಿ), ತೃಷ್ಣಾ (ಆಸೆ), ವೇದನಾ, ಸ್ಪರ್ಶ (ಸಂಪರ್ಕ), ಷಡಾಯತನ (ಶರೀರ ಮನಸ್ಸು ಇತ್ಯಾದಿ), ನಾಮರೂಪ, ವಿಜ್ಞಾನ (ಚೈತನ್ಯ), ಸಂಸ್ಕಾರ, ಅವಿದ್ಯಾ (ಅಜ್ಞಾನ). ಇದೇ ನಿದಾನ ಅಥವಾ ಕಾರಣದ ವಿಶ್ಲೇಷಣೆಯ ಹನ್ನೆರಡು ಅಂಶಗಳ ಮೊತ್ತ.

**ದುಃಖ ನಿರೋಧ** – ದುಃಖವನ್ನು ನಿರೋಧಿಸಲು ಸಾಧ್ಯ. ಆ ದುಃಖದ ನಾಶವೂ ಸಾಧ್ಯವೆಂಬ ಭರವಸೆ.

**ಮಾರ್ಗ** – (ದುಃಖ ನಿರೋಧಗಾಮಿನೀ ಪ್ರತಿಪತ್) – ದುಃಖ ನಿವಾರಣೆಗೆ ದಾರಿಗಳಿವೆ. ಅತಿಕಠಿನವೂ ಅಲ್ಲದ, ಸಡಿಲವೂ ಅಲ್ಲದ ಮಧ್ಯಮ ಮಾರ್ಗದಲ್ಲಿ ಎಂಟು ಮೆಟ್ಟಿಲುಗಳಿವೆ. ಅವೇ ಆರ್ಯ ಅಷ್ಟಾಂಗಿಕ. ಸಮ್ಯಕ್ ಜ್ಞಾನ, ಸಮ್ಯಕ್ ವಚನ, ಕರ್ಮಾಂತ, ಆಜೀವ (ನ್ಯಾಯವಾದ ಜೀವನೋಪಾಯ), ವ್ಯಾಯಾಮ (ಸತತ ಪ್ರಯತ್ನ), ಸ್ಮೃತಿ (ಯೋಗ್ಯ ಚಿಂತನ), ಸಮಾಧಿ (ರಾಗದ್ವೇಷರಹಿತ ಚಿತ್ತ ಏಕಾಗ್ರತೆ) ಇವುಗಳಿಂದ ಚೇತನವು ಶುದ್ಧವಾಗಿ ನಿರ್ವಾಣವೆಂಬ ಮೋಕ್ಷಪ್ರಾಪ್ತಿ. ಈ ವಾದವನ್ನೇ ಸಂಗ್ರಹವಾಗಿ ಶೀಲ, ಪ್ರಜ್ಞಾ, ಸಮಾಧಿ ಎಂದು 'ತ್ರಿರತ್ನ'ವಾಗಿಯೂ ಹೇಳಿದ್ದಾರೆ.

ಈ ನಾಲ್ಕು ಆರ್ಯಸತ್ಯಗಳ ಕಲ್ಪನೆಯು ಆಯುರ್ವೇದದ ರೋಗ, ರೋಗದ ಮೂಲ, ರೋಗನಿದಾನ, ರೋಗನಿವಾರಕ (ಭೇಷಜ) – ಇವಕ್ಕೆ ಸಂವಾದಿಯಾಗಿದೆ. ಆದುದರಿಂದಲೇ ಬುದ್ಧನನ್ನು ಮಹಾಭಿಷಕ್ (ವೈದ್ಯ) ಎನ್ನಲಾಗಿದೆ.

ಬುದ್ಧನ ಉಪದೇಶಗಳನ್ನು ಆತನ ಬಳಿಕ ಶಿಷ್ಯರು ಸಂಗ್ರಹಿಸಿ ಮೂರು ವಿಭಾಗಗಳನ್ನಾಗಿ ಮಾಡಿದರು. ಅದೇ ತ್ರಿಪಿಟಕ. ಅವು ಪಾಲಿ ಭಾಷೆಯಲ್ಲಿವೆ. ಸುತ್ತಪಿಟಕ (ಸೂತ್ರಪಿಟಕ), ವಿನಯಪಿಟಕ (ಆಚಾರ ವಿವೇಚನೆ), ಅಭಿಧಮ್ಮ ಪಿಟಕ (ಅಭಿಧರ್ಮ = ದಾರ್ಶನಿಕ ವಿಚಾರ) ಹೀಗೆ ಮೂರು. ಇವುಗಳನ್ನಾಧರಿಸಿ ವಿಸ್ತಾರವಾದ ಗ್ರಂಥರಾಶಿ ಬೆಳೆದಿದೆ. ಚೀನಾ, ಜಪಾನ್, ಶ್ರೀಲಂಕಾ ದೇಶಗಳಲ್ಲೂ ದೂರಪ್ರಾಚ್ಯದಲ್ಲೂ ಬೌದ್ಧ ಧರ್ಮವು ವಿಸ್ತರಿಸಿ, ಅಲ್ಲಿಯೂ ಬಹಳಷ್ಟು ಸಾಹಿತ್ಯ ನಿರ್ಮಾಣವಾಗಿದೆ. ಬೌದ್ಧದರ್ಶನವು ಅಸಂಗ, ವಸುಬಂಧು, ನಾಗಾರ್ಜುನ ಮೊದಲಾದ ಮಹಾನ್ ತಾರ್ಕಿಕರನ್ನೂ ನೀಡಿದೆ.

**ಮೂರು ಹಂತಗಳು**

ಬುದ್ಧನು ತನ್ನ ಪೂರ್ವಾಚಾರ್ಯರಿಂದಲೂ (ಕಪಿಲ, ಕನಕ, ಕ್ರಕುಚಂದ ಮೊದಲಾದವರಿಂದ) ತನ್ನ ಸಮಕಾಲೀನರಿಂದಲೂ ಅಧ್ಯಯನ ಮಾಡಿ ತಿಳಿದು ಬೋಧಿಸಿದ ಹಂತದಲ್ಲಿ ಪ್ರಾಯಃ ಬೌದ್ಧಮತದ ನೈತಿಕ ಉಪದೇಶ ಪ್ರಧಾನ. 'ಲೋಕವು ದುಃಖಮಯ, ಕ್ಷಣಿಕ, ಶೂನ್ಯಕ್ಕೆ ಸಮಾನ. ಆದುದರಿಂದ ಸದಾಚಾರ, ಕಾರುಣ್ಯಗಳು ಮುಖ್ಯ' ಎಂಬುದು ಈ ಹಂತ. ಆ ಬಳಿಕ ಬುದ್ಧನ ಉಪದೇಶಗಳ ವ್ಯವಸ್ಥಿತವಾದ ಸಂಗ್ರಹ ಮತ್ತು ವ್ಯಾಖ್ಯಾನ ಎರಡನೆಯದು. ಆ ಬಳಿಕ ವಿವಿಧ ಪಂಥಗಳು ಉದಯ, ದಾರ್ಶನಿಕರ ಚರ್ಚೆ ಖಂಡನೆ ಮಂಡನೆಗಳು ಮೂರನೆಯ ಹಂತ. ಈ ಹಂತಕ್ಕೆ ಬರುವಾಗ, ಒಂದು ರೀತಿಯಲ್ಲಿ ಬೌದ್ಧ ದರ್ಶನವು ಬುದ್ಧನ ಸರಳವಾದ ಮೂಲ ಉಪದೇಶದಿಂದ 'ಬಹುದೂರ ಸರಿದಿತ್ತು', 'ಅಸ್ತಿ-ನಾಸ್ತಿ'ಗಳ ಮಧ್ಯದ ಸಮನ್ವಯದ ಬುದ್ಧನ ಚಿಂತನೆ ಜಗತ್ತನ್ನೇ 'ನಾಸ್ತಿ' ಎನ್ನುವಲ್ಲಿಗೆ ತಲುಪಿತ್ತು. ದೇವರ ಅಸ್ತಿತ್ವವನ್ನೂ, ಪೂಜೆಭಜನೆಗಳನ್ನೂ ನಿರಾಕರಿಸಿದ್ದ ಬುದ್ಧನು ದೇವರಾಗಿ ಪೂಜೆಗೊಳ್ಳುವಲ್ಲಿಗೆ ಬದಲಾಗಿತ್ತು. ಇದರಿಂದ ಬೌದ್ಧಧರ್ಮ- ದರ್ಶನದ ಇತಿಹಾಸದಲ್ಲಿ ದಾರ್ಶನಿಕವಾಗಿಯೂ ಹಲವು ವಿಚಿತ್ರ ಅಭಿಪ್ರಾಯಗಳು ಮೂಡಿದವು.

ಮುಂದೆ ಬೌದ್ಧದರ್ಶನವು ಹಲವು ಶಾಖೆಗಳಾಗಿ ಒಡೆಯಿತು. ಒಂದು ಮುಖ್ಯ ವಿಭಾಗ – ಹೀನಯಾನ ಮತ್ತು ಮಹಾಯಾನ. ಹೀನಯಾನವು ವೈಯಕ್ತಿಕ ಮೋಕ್ಷ ಮತ್ತು ಜ್ಞಾನಮಾರ್ಗದ ಆದರ್ಶವನ್ನು ಹೊಂದಿದೆ. ಮಹಾಯಾನವು ಸಾಮೂಹಿಕ ಉದ್ಧಾರ ಮುಕ್ತಿಗಳನ್ನೂ ಪ್ರವೃತ್ತಿ ಮಾರ್ಗವನ್ನೂ ಆದರ್ಶವಾಗಿಸಿದೆ. ಮಹಾಯಾನದಲ್ಲಿ ಭಕ್ತಿ, ಬುದ್ಧನ ಮೂರ್ತಿಯ ಪೂಜೆ, ದೇವತೆಗಳ ಪೂಜೆ ಇತ್ಯಾದಿ ಮತಾಚಾರಗಳಿವೆ. ಇದು ಬೌದ್ಧೇತರ ಮತಗಳ ಪ್ರಭಾವವೆಂಬುದು ಸ್ಪಷ್ಟ. ವಜ್ರಯಾನವೆಂಬ ಇನ್ನೊಂದು ಪಂಥವು ಮಂತ್ರ, ತಂತ್ರ, ಹಟಯೋಗಗಳನ್ನು ಅಳವಡಿಸಿತು.

ದಾರ್ಶನಿಕವಾಗಿ ಬೌದ್ಧದರ್ಶನವು ನಾಲ್ಕು ಪಂಥಗಳಾಗಿದೆ: ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ ಮತ್ತು ಮಾಧ್ಯಮಿಕ. ವೈಭಾಷಿಕವೆಂದರೆ ಅಭಿಧರ್ಮ, ವಿಭಾಷಾ ಎಂಬುದನ್ನು ಆಧರಿಸಿದ್ದು. ಸೌತ್ರಾಂತಿಕವೆಂದರೆ ಸೂತ್ರದ ಅಂತ (ಸಿದ್ಧಾಂತ)ವನ್ನು ಆಧರಿಸಿದ್ದು. ಇವೆರಡೂ ಬಾಹ್ಯವಸ್ತುವೊಂದು ಇದೆ ಎಂದು ಒಪ್ಪುತ್ತವೆ. ಜಗತ್ತು ಕೇವಲ ಮಿಥ್ಯೆ ಎನ್ನುವುದಿಲ್ಲ.

ಯೋಗಾಚಾರವೆಂಬುದು ವಿಜ್ಞಾನವಾದ. ಬುದ್ಧನು ಉಪದೇಶಿಸಿದ ಸತ್ಯವನ್ನು ಯೋಗದ ಮೂಲಕ ಪಡೆಯಬಹುದು. ಮತ್ತು ಕ್ಷಣಿಕವಾದ ಜ್ಞಾನಗಳ ಪರಂಪರೆಯೆಂಬ 'ವಿಜ್ಞಾನ' (ಚಿತ್ತ)ವನ್ನು ಒಪ್ಪುವುದರಿಂದ 'ಯೋಗಾಚಾರ', ವಿಜ್ಞಾನವಾದ ಅನಿಸಿದೆ. ಬಾಹ್ಯವಸ್ತುಗಳನ್ನೂ ಒಳಗಿನ ಚಿತ್ತವೆಂಬ ವಿಜ್ಞಾನವನ್ನೂ ನಿರಾಕರಿಸುವುದರಿಂದ ಮಾಧ್ಯಮಿಕ ಪಂಥವು ಶೂನ್ಯವೇ ಸತ್ಯವೆಂದು ಪ್ರತಿಪಾದಿಸಿ, ಶೂನ್ಯವಾದವೆನಿಸಿದೆ. ಇವು ನಾಲ್ಕೂ ಬೌದ್ಧದರ್ಶನಗಳೇ ಆದರೂ, ಇವುಗಳೊಳಗೆ ಗಹನವಾದ ಮತಭೇದಗಳಿವೆ; ಮೂಲವಿಷಯಗಳು ಸಮಾನವಾಗಿವೆ.

**ನೈರಾತ್ಮ್ಯವಾದ, ಸಂತಾನವಾದ, ಮೋಕ್ಷ**

ಬೌದ್ಧದರ್ಶನದ ಒಂದು ಮುಖ್ಯ ಭಾವನೆಯೆಂದರೆ ನೈರಾತ್ಮ್ಯ – 'ಆತ್ಮನೆಂಬುದಿಲ್ಲ' ಎಂಬ ವಿಚಾರ. ನಮ್ಮ ಆತ್ಮವೆಂಬುದು ಮಾನಸಿಕ ಪ್ರವೃತ್ತಿಗಳ ಗುಂಪು ಅಥವಾ ಸಂಘಾತ. ಪ್ರವೃತ್ತಿಗಳೇ ಆತ್ಮನಂತಿವೆ. ಆದರೆ ನಿಜವಾಗಿ ಆತ್ಮವೆಂಬುದಿಲ್ಲ. ಹೊರಗಿನ ಭೌತವಸ್ತುಗಳಾದರೂ ಹಾಗೆಯೇ; ಸಂತಾನ ಅಥವಾ ಪರಂಪರೆಯಾಗಿ, ಪ್ರವಾಹವಾಗಿರುವಂತೆ ಕಾಣುವುವು, ಅಷ್ಟೆ. ಇದಕ್ಕೆ ಪ್ರಸಿದ್ಧವಾದ ಉದಾಹರಣೆಗಳು ಎರಡು. ಉರಿಯುತ್ತಿರುವ ದೀಪ, ಮತ್ತು ಜಲಪ್ರವಾಹ. ಇವು ನಿಜಕ್ಕೂ 'ಒಂದು ದೀಪ', 'ಒಂದು ಪ್ರವಾಹ'ವಲ್ಲ. ಅವು ಕ್ಷಣಕ್ಷಣಕ್ಕೆ ಬದಲಾಗುತ್ತವೆ, ಆದರೆ ಒಂದೇ ಆಗಿರುವಂತೆ ಭಾಸ(ಭ್ರಾಂತಿ)ವಾಗುತ್ತವೆ, ಅಷ್ಟೆ. ಆದುದರಿಂದ –

'ಒಂದೇ ತೊರೆಯಲ್ಲಿ ಎರಡು ಬಾರಿ ಕೈತೊಳೆಯಲು ಸಾಧ್ಯವಿಲ್ಲ.'

ಮಾತ್ರವಲ್ಲ,

'ಒಂದೇ ತೊರೆಯಲ್ಲಿ ಅದೇ ಕೈಯನ್ನು ಎರಡು ಬಾರಿ ತೊಳೆಯಲು ಸಾಧ್ಯವಿಲ್ಲ.'

ಎಲ್ಲವೂ ಕ್ಷಣಿಕ, ಸಂತಾನ, ಸತತ ಪರಿವರ್ತನಶೀಲ. ಶಾಶ್ವತ ಯಾವುದೂ ಇಲ್ಲ. ಇದರಲ್ಲೂ ಒಂದು ವೈಜ್ಞಾನಿಕ ಸತ್ಯವಿರುವುದನ್ನು ಅಲ್ಲಗಳೆಯಲಾಗದು.

ಹಾಗಾದರೆ ಇಲ್ಲದ ಆತ್ಮಕ್ಕೆ ಮೋಕ್ಷ ಹೇಗೆ ಮತ್ತು ಏಕೆ? ಕರ್ಮಬಂಧನ, ಪುನರ್ಜನ್ಮ ಹೇಗೆ? ಎಂದರೆ – ಹಾಗಲ್ಲ. ಕರ್ಮಗಳೂ, ಪಾಪಪುಣ್ಯಗಳೂ ಪ್ರವಾಹರೂಪವಾಗಿ ಸಂಸ್ಕಾರವಾಗಿ ಮುಂದುವರಿಯುತ್ತವೆ! ಪುನರ್ಜನ್ಮವೂ ಪ್ರವಾಹವೇ. ಮರಣ- ಜನನಗಳೂ ಒಟ್ಟಿನಲ್ಲಿ ಕ್ಷಣಕ್ಷಣಕ್ಕೂ ಆಗುತ್ತಿರುತ್ತವೆ. ಕರ್ಮವು ಸ್ವಶಕ್ತಿಯಿಂದಲೇ ಕೆಲಸಮಾಡುತ್ತದೆ. ನಿರ್ವಾಣ ಅಥವಾ ಮೋಕ್ಷವು ಎಲ್ಲ ದುಃಖಗಳೂ ಅಡಗುವ ಸ್ಥಿತಿ. ದೀಪವು ಆರಿಹೋಗುವ ಹಂತ. ಅದೇ ಪರಮಾನಂದವೆಂದು ಒಂದು ಅಭಿಪ್ರಾಯ. ಅಂತಹವನೇ ಅರ್ಹತ. ಪೂರ್ಣಶಾಂತ.

**ದೀಪವೂ ಇಲ್ಲ ಎಣ್ಣೆಯೂ ಇಲ್ಲ ಬತ್ತಿಯೂ ಇಲ್ಲ, ಇಲ್ಲವೆಂಬುದೂ ಇಲ್ಲ!**

ಸಕಲವೂ ವಿಲಯ. ಅದೇ ಪರಮಶೂನ್ಯತಾ. ಅದೇ ದೃಢವಾದ ವಜ್ರ. 'ಶೂನ್ಯತಾ ವಜ್ರಮುಚ್ಯತೇ'. ಇದನ್ನು ಪಡೆಯಲು ಅಹಿಂಸೆ, ಸದಾಚಾರ, ಜ್ಞಾನಗಳು ಸಾಕು. ಯಜ್ಞ, ವೇದಗಳು, ದೇವರು ಬೇಕಿಲ್ಲ.

ಮಾಧ್ಯಮಿಕರ ಪ್ರಕಾರ ಸಕಲವೂ ಶೂನ್ಯ; ಇಲ್ಲವೇ ಇಲ್ಲ. ಶೂನ್ಯತೆಯೇ ಅದ್ವೈತ. ಇದು ಶೂನ್ಯಾದ್ವೈತವಾದ. ಪಾರಮಾರ್ಥಿಕವು ಹೀಗಿದ್ದರೂ, ಲೋಕವು ಸಂವೃತಿ ಸತ್ಯ. ಸತ್ಯದಂತೆ ಕಾಣುವ ಮಾಯೆ ಅಥವಾ ಅವಿದ್ಯೆಯ ಫಲ ಅಥವಾ ವಿಜ್ಞಾನವಾದಿ ಬೌದ್ಧರ ಪ್ರಕಾರ ಅನುಭವವು ಪರಿನಿಷ್ಪನ್ನ, ಪರಿಕಲ್ಪಿತ, ಪರತಂತ್ರ ಎಂದು. ಪರಿನಿಷ್ಪನ್ನವು ಪರಮಸತ್ಯ. ಉಳಿದೆರಡು ಮಿಥ್ಯೆ; ಅಜ್ಞಾನದಿಂದಾಗಿ ಇಲ್ಲದೆ ಇರುವಂತೆ ಕಾಣುವ ಆವರಣದ ಫಲ.

**ಅದ್ವೈತ ವೇದಾಂತ - ಬೌದ್ಧದರ್ಶನ**

ಮೇಲೆ ಹೇಳಿದ ವಿಜ್ಞಾನವಾದ, ಶೂನ್ಯವಾದಗಳಿಗೂ ಶಂಕರಾಚಾರ್ಯ ಪ್ರಣೀತ ಮಾಯಾವಾದ ಅದ್ವೈತಕ್ಕೂ ನೇರ ಸಾಮ್ಯಗಳಿವೆ. ಶಂಕರರ ಪರಮಗುರು ಗೌಡಪಾದಾಚಾರ್ಯರು ಬೌದ್ಧರೇ ಆಗಿದ್ದವರಂತೆ. ಶಂಕರರ ಮೇಲೆ ಬೌದ್ಧವಾದಗಳ ಪ್ರಭಾವವು ಸಂಭಾವ್ಯವೇ. ಅಂತೆಯೇ ಉಪನಿಷತ್ತುಗಳ ಪ್ರೇರಣೆ ಬೌದ್ಧವಾದಗಳ ಹಿಂದೆ ಇದೆ. ಬುದ್ಧನಿಗೆ ಅದ್ವಯವಾದಿ ಎಂಬ ವಿಶೇಷಣವು ಪ್ರಸಿದ್ಧವಾದುದು.

ಬೌದ್ಧ ದರ್ಶನದ ವಿಜ್ಞಪ್ತಿ, ಆಲಯವಿಜ್ಞಾನ, ಪಾರಮಾರ್ಥಿಕ ಸತ್ಯ ಸಂವೃತಿ, ಸತ್ಯ, ಅವಿದ್ಯೆ, ಕೇವಲವಾಗಿರುವಿಕೆ, ಇವುಗಳೂ ಅದ್ವೈತದ ಬ್ರಹ್ಮ, ಆತ್ಮ, ಪಾರಮಾರ್ಥಿಕ ಸತ್ಯ,



# ಹಿರಿಯ ಛಾಯಾಗ್ರಾಹಕ

# ಡಿ. ಬಿ. ಶಿರವಾಳಕರ

ದಿವಾಕರ ಬಿ. ಶಿರವಾಳಕರ ಅವರು ತಂದೆಯಿಂದ ಛಾಯಾಚಿತ್ರಣವನ್ನು ಕಲಿತು ಕಪ್ಪು ಬಿಳುಪು, ವರ್ಣಚಿತ್ರ, ನೆರಳು ಬೆಳಕಿನ ಜೊತೆ ಬೆರೆತು ಲೆಕ್ಕವಿಲ್ಲದಷ್ಟು ಕಲಾತ್ಮಕ ಚಿತ್ರಗಳನ್ನು ಸೆರೆಹಿಡಿದಿದ್ದಾರೆ. ಅವರು ೧೯೬೫ರಲ್ಲಿ ಆರ್ಟ್ ಫೋಟೋ ಸ್ಟುಡಿಯೋ ಪ್ರಾರಂಭಿಸಿದರು.

ಗುಲಬರ್ಗಾ ಜಿಲ್ಲೆಯ ಅಪೂರ್ವ ಐತಿಹಾಸಿಕ ಸ್ಮಾರಕಗಳ ಛಾಯಾಚಿತ್ರ ಸೆರೆಹಿಡಿದಿದ್ದಾರೆ. ಆಂಧ್ರ, ಮಹಾರಾಷ್ಟ್ರ, ಅಮೆರಿಕಾ ಮುಂತಾದ ಕಡೆ ಪ್ರವಾಸ ಮಾಡಿದಾಗ ಕ್ಯಾಮರಾ ಕಣ್ಣಿನಿಂದ ಕ್ಲಿಕ್ಕಿಸಿದ ಛಾಯಾಚಿತ್ರಗಳಿಂದಾಗಿ ಅವರು ಜನರಿಗೆ ಚಿರಪರಿಚಿತರಾಗಿದ್ದಾರೆ.



ಗುಲ್ಬರ್ಗಾ ಕೆರೆಯ ಸಂಜೆ ದೃಶ್ಯ



ಶ್ರೀ ರೇವಣಸಿದ್ಧೇಶ್ವರ ಗುಡಿಯ ವಿಹಂಗಮ ನೋಟ, ರಟಕಲ್, ಗುಲ್ಬರ್ಗಾ



ಎಂ. ಎಸ್. ಕೆ. ಮಿಲ್ಸ್ ಸ್ಥಾಪನೆ : ೧೮೮೪. ಮಿಲ್‌ನ ಒಂದು ನೆನಪು, ಗುಲ್ಬರ್ಗಾ



ಸಂಜೆಯ ವೃಕ್ಷ, ಕೆರೆಯ ಹತ್ತಿರ, ಗುಲ್ಬರ್ಗಾ



ಗುಲ್ಬರ್ಗಾ ವಿಕಾಸ ಭವನದ ಕಮಾನು

## ಹೊಸ ಓದು



### ಚುಕ್ಕಿಚಂದ್ರಮ (ಕವನ ಸಂಕಲನ)

ಎಸ್. ಮಂಜುನಾಥ

**ಪುಟ : XX+೫೦** **ಬೆಲೆ : ರೂ. ೪೦**

**ಸಂಸ್ಕೃತಿ ಪ್ರಕಾಶನ**, ಸುಭಾಷ್ ಭರಣಿ ಸಾಂಸ್ಕೃತಿಕ ವೇದಿಕೆ (ರಿ), ನಂ. ೨, ಪಿಡಬ್ಲ್ಯೂಡಿ ಕ್ವಾರ್ಟರ್ಸ್, ಬಳ್ಳಾರಿ

ಇರುಳಿನಲ್ಲಿ ಕಂಗೊಳಿಸುವ ಅಸಂಖ್ಯ ತಾರೆಗಳು, ಉಲ್ಕೆಗಳು, ಧೂಮಕೇತುಗಳು, ಹಾಲ್ಬೆಳಕಿನ ಚೆಂದಿರ, ಕೌತುಕದ ಚಲನೆಯ ಕುಜಗ್ರಹ, ಗ್ರಹಗಳ ದೊಡ್ಡಣ್ಣ ಗುರುಗ್ರಹ, ರಾತ್ರಿಯ ರಾಣಿ ಶನಿಗ್ರಹ, ದೂರದರ್ಶಕದಿಂದ ಮಾತ್ರ ನೋಡಬಹುದಾದ ಯುರೇನಸ್, ಸಮುದ್ರರಾಜ ನೆಪ್ಚೂನ್, ಪುಟಾಣಿ ಪ್ಲೂಟೋ, ಭುವಿಗೆ ಜೀವಧಾರೆಯಾದ ರವಿ, ಬೆಳ್ಳಿ ಚುಕ್ಕಿ, ಕ್ಷುದ್ರ ಗ್ರಹಗಳು, ಶನಿಯ ಸೊಬಗಿನ ಉಂಗುರ, ಗುರುವಿನ ಹದಿನೇಳು ಚಂದ್ರರು – ಮನುಷ್ಯನನ್ನು ಅನಾದಿಕಾಲದಿಂದಲೂ ಬೆರಗುಗೊಳಿಸುತ್ತಿರುವ ಈ ಆಕಾಶ ಕಾಯಗಳು ಇಲ್ಲಿಯ ಪದ್ಯಗಳ ವಸ್ತು. ತೆಳು ಹಾಸ್ಯ ಮಿಶ್ರಿತ ಪದ್ಯಗಳು, ಸುನೀತಗಳು ಆಕಾಶ ಕಾಯಗಳ ಬಗ್ಗೆ ಪ್ರಚಲಿತವಿರುವ ಮೂಢನಂಬಿಕೆಗಳನ್ನು ತೊಡೆದುಹಾಕುತ್ತವೆ. ಮಕ್ಕಳಲ್ಲಿ ಅಂತರಿಕ್ಷ ಕಾಯಗಳ ಕುರಿತು ಅಚ್ಚರಿ, ಕುತೂಹಲ ಮೂಡಿಸಿ, ಅವುಗಳ ಗುಣಸ್ವಭಾವಗಳನ್ನು ಪರಿಚಯಿಸುತ್ತವೆ. ಮಕ್ಕಳು ಕಲಿತು, ಹಾಡಿಕೊಳ್ಳುವಂತೆ ಪದ್ಯಗಳು ಸರಳವಾಗಿವೆ. ಖಗೋಳ ವಿಜ್ಞಾನವನ್ನು ಜನಪ್ರಿಯಗೊಳಿಸುವಲ್ಲಿ ಈ ಸಂಕಲನ ಒಂದು ಶ್ಲಾಘನೀಯ ಪ್ರಯತ್ನ.

### ಸ್ಪಂದನ (ವಿಮರ್ಶಾ ಸಂಕಲನ)

ಡಾ|| ವಿಜಯಾ ಸುಬ್ಬರಾಜ್

**ಪುಟ : xiv+೧೫೮** **ಬೆಲೆ : ರೂ. ೧೪೦**

**ಸಿವಿಜಿ ಪಬ್ಲಿಕೇಷನ್ಸ್**, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್, ಬೆಂಗಳೂರು - ೩

ಬಸವಣ್ಣನವರ ಜಾತಿ, ಕುಲಚಿಂತನೆ; ವೀರಶೈವ ಧರ್ಮದಲ್ಲಿ ಗುರು ಪರಿಕಲ್ಪನೆ ಮತ್ತು ಸ್ತ್ರೀವಾದ ಕುರಿತಂತೆ ಮೂರು ವೈಚಾರಿಕ ಲೇಖನಗಳು ಹಾಗೂ ಜಿ. ವಿ. ಐಯ್ಯರ್ ನಿರೂಪಣೆಯ 'ರಾಮಾಯಣ', ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟರ 'ಊರ್ವಶಿ', ಗೌರೀಶ ಕಾಯ್ಕಿಣಿ ಅವರ ಗೀತನಾಟಕಗಳು, ಎಸ್. ಎಲ್. ಭೈರಪ್ಪನವರ 'ಗೃಹಭಂಗ', ಯು. ಆರ್. ಅನಂತಮೂರ್ತಿ ಅವರ 'ಭವ' ಮತ್ತು 'ದಿವ್ಯ' ಕಾದಂಬರಿಗಳು, ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಮುಂತಾದ ಹತ್ತು ವಿಮರ್ಶಾ ಲೇಖನಗಳಿವೆ. ಇಲ್ಲಿಯ ಹದಿಮೂರು ಲೇಖನಗಳೂ 'ವಿಚಾರ ಸಂಕಿರಣ' ಅಭಿನಂದನಾ ಗ್ರಂಥಗಳಿಗೆ ಸಿದ್ಧಪಡಿಸಿದವು. ಪ್ರತಿಯೊಂದು ಕೃತಿಯ ಓದಿಗೆ ಅಗತ್ಯವಾದ ಭಾವಸ್ಥಿತಿಯನ್ನು ಪಡೆದುಕೊಳ್ಳಲು ಲೇಖಕಿ ಪ್ರಯತ್ನಿಸಿದ್ದಾರೆ. ಕುವೆಂಪು, ಅನಂತಮೂರ್ತಿ, ಭೈರಪ್ಪನವರಂಥ ಬಹುಚರ್ಚಿತ ಲೇಖಕರ ಬಗ್ಗೆ ಬರೆಯುವಾಗಲೂ ಇದುವರೆಗೆ ನಡೆದಿರುವ ವಿಮರ್ಶೆಯನ್ನು ಪುನರುಚ್ಚರಿಸದೆ ಹೊಸದಾಗಿ ಓದಿ ತಮ್ಮ ಅಭಿಪ್ರಾಯವನ್ನು, ತಮ್ಮಲ್ಲಿ ಮೂಡಿದ ಭಾವನೆಗಳನ್ನು ವಿಚಾರಗಳ, ಭಾಷೆಯ ಬಲೆಯಲ್ಲಿ ಹಿಡಿದಿಟ್ಟಿದ್ದಾರೆ.



### ಕಾಲೋಚಿತ (ಸಂಪಾದಕೀಯ ಲೇಖನಗಳು)

ವಿಷ್ಣು ನಾಯ್ಕ

**ಪುಟ : ೨೭೦** **ಬೆಲೆ : ರೂ. ೧೭೫**

**ವಿಷ್ಣು ನಾಯ್ಕ**, 'ಪರಿಮಳ', ಅಂಬಾರಕೊಡ್ಲ ಅಂಕೋಲಾ (ಉತ್ತರ ಕನ್ನಡ ಜಿಲ್ಲೆ)

'ಸಕಾಲಿಕ' ಸಾಪ್ತಾಹಿಕದ ಸಂಪಾದಕರಾಗಿದ್ದ ಸುಮಾರು ಮೂರು ವರ್ಷಗಳ ಕಾಲಾವಧಿಯಲ್ಲಿ ಲೇಖಕರು ಬರೆದ ಸಂಪಾದಕೀಯ ಲೇಖನಗಳ ಸಂಕಲನವಿದು. ರಾಜಕೀಯ, ಸಾಮಾಜಿಕ ಸಮಸ್ಯೆಗಳು, ಶಿಕ್ಷಣ ಕ್ಷೇತ್ರ, ಪ್ರಪಂಚದಾದ್ಯಂತ ಪಸರಿಸಿರುವ ಯುದ್ಧ ಭೀತಿ, ಪರಿಸರ ಮಾಲಿನ್ಯ, ಆರ್ಥಿಕ ನೀತಿ, ದುರ್ಬಲ ವರ್ಗದವರ ಅಳಲು, ಕೋಮುವಾದ, ನಕ್ಸಲ್‌ವಾದ – ಹೀಗೆ ಜನಸಾಮಾನ್ಯರ ಜೀವನದ ಮೇಲೆ ಗಂಭೀರ ಪ್ರಭಾವ ಬೀರುವ ಸಂಗತಿಗಳು ಇಲ್ಲಿ ಚರ್ಚಿತವಾಗಿರುವ ವಿಷಯಗಳು. ಓದುಗರಲ್ಲಿ ಚಿಂತನೆಗೆ ಸ್ಫೂರ್ತಿಯಾಗುವ, ಜಾಗೃತಿ ಮೂಡಿಸುವ – ಮದುವೆಯೆಂಬ ದುಂದು ವೆಚ್ಚ, ಆ ಮಗುವಿನ ಬೆಲೆ ಕಟ್ಟಬಲ್ಲಿರಾ ? ಸಮಾರಂಭಗಳ ಶಿಷ್ಟಾಚಾರದ ಬಗ್ಗೆ ಒಂದಿಷ್ಟು, ಮಂದಿಗಿಂತ ಮಂದಿರ ಮುಖ್ಯವಾಗಬೇಕೆ ? – ಲೇಖನಗಳು ಇಲ್ಲಿವೆ.

### ಮೈಸೂರು ಮಹಾರಾಜ ಕಾಲೇಜು (ಅಭಿನವ ಚಾತುರ್ಮಾಸಿಕ)

ಪ್ರ.ಸಂ : ನ. ರವಿಕುಮಾರ

**ಪುಟ : ೨೭೦** **ಬೆಲೆ : ರೂ. ೨೦೦**

**ಅಭಿನವ**, ೧೭/೧೮-೨, ಮೊದಲನೆಯ ಮುಖ್ಯ ರಸ್ತೆ ಮಾರೇನಹಳ್ಳಿ, ವಿಜಯನಗರ, ಬೆಂಗಳೂರು - ೪೦

ಸೆಪ್ಟೆಂಬರ್ ೨೦೦೬ – ಜನವರಿ ೨೦೦೭ರ ಸಂಚಿಕೆಯ ವಿಷಯ ಮೈಸೂರು ಮಹಾರಾಜ ಕಾಲೇಜು. ಈ ಸಂಚಿಕೆಯಲ್ಲಿ ಪು.ತಿ.ನ., ಕುವೆಂಪು, ಬಿ.ಎಂ.ಶ್ರೀ., ಮಾಸ್ತಿ ವೆಂಕಟೇಶ ಅಯ್ಯಂಗಾರ್, ಎ. ಎನ್. ಮೂರ್ತಿರಾವ್, ವೀಣಾ ದೊರೆಸ್ವಾಮಿ ಅಯ್ಯಂಗಾರ್, ಜಿ. ವೆಂಕಟಸುಬ್ಬಯ್ಯನವರು – ಹೀಗೆ ಅನೇಕ ಹಿರಿಯರು ಮಹಾರಾಜ ಕಾಲೇಜು ಜೊತೆಗಿನ ತಮ್ಮ ಒಡನಾಟ, ಅನುಭವ ಕುರಿತು ಬರೆದ ಸ್ವಾರಸ್ಯಕರ ಲೇಖನಗಳಿವೆ. ಕಲಾವಿದರು, ಸಾಹಿತಿಗಳು, ಪತ್ರಕರ್ತರು, ರಾಜಕಾರಣಿಗಳು, ಚಿಂತಕರು, ನ್ಯಾಯಾಧೀಶರು ಹಾಗೂ ಶ್ರೇಷ್ಠ ಅಧ್ಯಾಪಕರನ್ನು ರೂಪಿಸಿ ಆ ಮೂಲಕ ರಾಷ್ಟ್ರದ ಬೆಳವಣಿಗೆಯಲ್ಲಿ ಮೈಸೂರು ಮಹಾರಾಜ ಕಾಲೇಜು ಬಹುಮುಖ್ಯ ಪಾತ್ರ ವಹಿಸಿದೆ. ಇಂತಹ ಕಾಲೇಜು ಮತ್ತು ಅದರಿಂದ ಮೂಡಿದ ಅಭಿಜ್ಞರನ್ನು ಪರಿಚಯಿಸಿಕೊಳ್ಳಲು ಇದು ಉತ್ತಮ ಸಂಚಿಕೆಯಾಗಿದೆ. ನಿವೃತ್ತ ಕನ್ನಡ ಪ್ರಾಧ್ಯಾಪಕರು, ಸಾಹಿತಿ ಹಾಗೂ ಹಲವಾರು ಗೌರವ, ಬಹುಮಾನಗಳಿಂದ ಪುರಸ್ಕೃತರಾದ, ಪ್ರಸ್ತುತ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾಗಿ, ಇನ್ನೂ ಅನೇಕ ಜವಾಬ್ದಾರಿಯ ಚಟುವಟಿಕೆಗಳಲ್ಲಿ ತೊಡಗಿಕೊಂಡಿರುವ ಜಿ. ಶ್ರೀನಿವಾಸರಾಜು ಅವರ ಗೌರವಾರ್ಥ ಈ ಸಂಚಿಕೆಯನ್ನು ಹೊರತರಲಾಗಿದೆ. ಅವರ ಪರಿಚಯ ಮಾಡಿಕೊಡುವ ಲೇಖನಗಳೂ ಇಲ್ಲಿವೆ. ಪುಸ್ತಕದ ಕಡೆಯಲ್ಲಿ ಕಾಲೇಜಿನ ಸುವರ್ಣ ದಿನಗಳನ್ನು ನೆನಪಿಸುವ ಹಲವು ಛಾಯಾಚಿತ್ರಗಳಿವೆ.

### ಸಫಾರಿ ಎಂಬ ಲಕ್ಷುರಿ (ಪ್ರವಾಸ ಕಥನ)

ಡಾ|| ಬಿ. ಎಸ್. ಶೈಲಜಾ

**ಪುಟ : ೧೨೦** **ಬೆಲೆ : ರೂ. ೭೦**

**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೧

ಲೇಖಕರು ಬೆಂಗಳೂರಿನ ಜವಾಹರಲಾಲ್ ನೆಹರೂ ತಾರಾಲಯದ ಶೈಕ್ಷಣಿಕ ಕಾರ್ಯಕ್ರಮಗಳ ನಿರ್ವಾಹಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಬೋಧನೆ, ಸಂಶೋಧನೆಯ ಜೊತೆಗೆ ಖಗೋಳ ವಿಜ್ಞಾನದ ಪುಸ್ತಕಗಳನ್ನೂ ರಚಿಸುತ್ತಾ ಬಂದಿದ್ದಾರೆ. ಖಗೋಳ ವಿಜ್ಞಾನ ಕುರಿತ ಎರಡು ಗೋಷ್ಠಿಗಳಲ್ಲಿ ಪಾಲ್ಗೊಳ್ಳಲು ದಕ್ಷಿಣ ಆಫ್ರಿಕಾಗೆ ಹೋದ ಸಂದರ್ಭದಲ್ಲಿ ಪ್ರಖ್ಯಾತ ಕ್ರೂಗರ್ ನ್ಯಾಷನಲ್ ಪಾರ್ಕ್ ಮೂಲಕ ಹಾದುಹೋದ ಪೂರ್ಣ ಸೂರ್ಯಗ್ರಹಣವನ್ನೂ ನೋಡುವ ಸದವಕಾಶ ಲೇಖಕಿಯವರಿಗೆ ಒದಗುತ್ತದೆ. ಈ ಸೂರ್ಯಗ್ರಹಣ ಮತ್ತು ಸಫಾರಿಯ ವೀಕ್ಷಣೆಯ ಅನುಭವವೇ ಈ ಪ್ರವಾಸ ಕಥನ. ಹೊರಡಲು ಮಾಡಿಕೊಂಡ ತಯಾರಿ, ವಿಮಾನ ನಿಲ್ದಾಣದಲ್ಲಿ ಕಂಡ ನವವಧುವನ್ನು ಪರದೇಶಕ್ಕೆ ಬೀಳ್ಕೊಡಲು ಬಂದ ತಂಡಗಳ ಕಣ್ಣೀರು, ಆಲಿಂಗನದಿಂದ ಆರಂಭವಾಗುವ ಕಥನ ಜೋಹಾನ್ಸ್‌ಬರ್ಗ್‌ನ ತಾರಾಲಯ, ಗಾಂಧೀಜಿಯವರು ಕೆಲಸ ಮಾಡಿದ ಜೋಹಾನ್ಸ್‌ಬರ್ಗ್ ಮತ್ತು ಪ್ರಿಟೋರಿಯ, ಕೇಪ್‌ಟೌನಿನ ಸುಂದರ ಕಡಲತೀರಗಳು, ಕ್ರೂಗರ್ ನ್ಯಾಷನಲ್ ಪಾರ್ಕ್, ಖಗೋಳ ವಿಜ್ಞಾನಗೋಷ್ಠಿಗಳಿಗೆಲ್ಲ ಓದುಗರನ್ನು ಕೊಂಡೊಯ್ಯುತ್ತದೆ. ಅಲ್ಲಿ ಭೆಟ್ಟಿಯಾದ ವಿಜ್ಞಾನಿಗಳು, ವಿದ್ಯಾರ್ಥಿಗಳು, ಪ್ರವಾಸಿಗರು, ಜನಸಾಮಾನ್ಯರು, ಅವರ ಸಂಪ್ರದಾಯ, ಶಿಷ್ಟಾಚಾರ, ನಂಬುಗೆಗಳು, ಪ್ರಾಣಿಗಳ ಬಗೆಗಿನ ಕಾಳಜಿ, ಅಲ್ಲಿಯ ನಿಯಮ, ಹೆಜ್ಜೆಹೆಜ್ಜೆಗೂ ಕಂಡ ಅಚ್ಚುಕಟ್ಟುತನ, ಶ್ರದ್ಧೆ, ಪ್ರಾಣಿಪಕ್ಷಿಗಳು, ಸೂರ್ಯಗ್ರಹಣದ ಬಗೆಗೆ ಪ್ರಚಲಿತವಿರುವ ಕಥೆಗಳು, ಅಲ್ಲಿ ತಾವು ಕಂಡ ಭಾರತೀಯತೆ. ಇವೆಲ್ಲ ಸೂಕ್ಷ್ಮಾತಿಸೂಕ್ಷ್ಮ ವಿಷಯಗಳ ಮನಮುಟ್ಟುವ ಚಿತ್ರಣ ಇಲ್ಲಿದೆ. ಭಾಷೆ, ಶೈಲಿಯಲ್ಲಿನ ಸರಳತೆ, ಪ್ರವಾಸದ ಎಲ್ಲ ಆಯಾಮಗಳನ್ನೂ ಚಿತ್ರಿಸಿರುವ ಈ ಕಥನ ಲೇಖಕಿಯ ಸಂವೇದನಾಶೀಲತೆಗೆ ಕೈಗನ್ನಡಿಯಾಗಿದೆ. ಪುಟಪುಟದಲ್ಲಿಯೂ ಇರುವ ಅಂದವಾದ ಚಿತ್ರಗಳು, ಚಿತ್ರಗಳ ಶೀರ್ಷಿಕೆ, ಸುಂದರ ವಿನ್ಯಾಸ ಓದುಗರ ಮನ ಸೂರೆಗೊಳಿಸುತ್ತವೆ.

– **ಸಹನ**, ನಂ. ೩, 'ಕೆರಮನೆ' ಅಪಾರ್ಟ್‌ಮೆಂಟ್
'ದೇವರಕೆರೆ' ಎಕ್ಸ್‌ಟೆನ್ಶನ್, ಇಸ್ರೋ ಲೇಔಟ್, ಬೆಂಗಳೂರು - ೫೬೦ ೦೭೮

ವ್ಯಾವಹಾರಿಕ ಸತ್ಯ, ಪ್ರಾತಿಭಾಸಿಕ ಸತ್ಯ, ಮಾಯೆ, ಬ್ರಹ್ಮಸಾಕ್ಷಾತ್ಕಾರ ಅರ್ಥಾತ್ ಏಕತ್ವ ಅನುಭವ – ಇವುಗಳೂ ಒಂದೇ ಎಂಬಷ್ಟು ನಿಕಟವಾಗಿವೆ. ಇದರಿಂದಲೇ ಶಂಕರರನ್ನು 'ಪ್ರಚ್ಛನ್ನ ಬೌದ್ಧ' ಎಂದು ಬೇರೆ ವೇದಾಂತಿಗಳು ಆಕ್ಷೇಪಿಸಿರುವುದು ಸಹಜ. ಆದರೆ ಶೂನ್ಯ ವಾದವನ್ನು ಶಂಕರರು ಬಲವಾಗಿ ಖಂಡಿಸಿರುವರು. ಅದ್ವೈತದಲ್ಲಾದರೂ 'ಬ್ರಹ್ಮ'ಕ್ಕೆ ಪ್ರಾಧಾನ್ಯವೇ ಹೊರತು, ಭಕ್ತಿಗೊಲಿವ ಭಗವಂತನಿಗಲ್ಲ. ಜ್ಞಾನವೇ ಮೋಕ್ಷಕ್ಕೆ ಮಾರ್ಗ. ಭಕ್ತಿ ಆರಾಧನೆಗಳು ಕೆಳಗಿನ ಮೆಟ್ಟಿಲುಗಳು. ಇದೊಂದು ಬಗೆಯ ಸಮನ್ವಯದ ರೀತಿ.

ದೇವರಿಗಿರುವ ಸ್ಥಾನವನ್ನು ಜೈನದರ್ಶನವು ಕರ್ಮಕ್ಕೆ ನೀಡುತ್ತದೆ. ಹೀಗೆ ಮೀಮಾಂಸಾ ದರ್ಶನದೊಂದಿಗೆ ಅದಕ್ಕೆ ಸಾಮ್ಯವಿದೆ. ಹಾಗೆಯೇ, ವೇದಾಂತಿಗಳು ಬ್ರಹ್ಮ ಮತ್ತು ಜೀವರಿಗೆ ಹೇಳುವ ಸ್ವಭಾವಗಳನ್ನು ಬೌದ್ಧರು ವಿಜ್ಞಪ್ತಿಮಾತ್ರ ಮತ್ತು ಆಲಯ ವಿಜ್ಞಾನಕ್ಕೆ ಹೇಳುತ್ತಾರೆ. ವಿಜ್ಞಾನವಾದ ಮತ್ತು ಅದ್ವೈತಗಳು ಬಹಳ ಹತ್ತಿರದಲ್ಲಿರುವ ದರ್ಶನಗಳು. ಕಾರಣ – ಅವೆರಡೂ ಭಾವನಾವಾದಿ ದರ್ಶನಗಳು. ಬೌದ್ಧ ದರ್ಶನಗಳು ಭಾರತೀಯ ಚಿಂತನೆಗೂ, ಧಾರ್ಮಿಕ-ಸಾಮಾಜಿಕ ಸುಧಾರಣೆಗೂ ದೊಡ್ಡ ಕೊಡುಗೆ ನೀಡಿವೆ. ಭಾಷೆ, ಸಾಹಿತ್ಯಗಳಿಗೂ ಬೌದ್ಧರ ಕೊಡುಗೆ ವಿಶೇಷವಾದುದು.

**ಈಶ್ವರ ವಿಚಾರ ಚರ್ಚೆ**

ಜಗತ್ತಿನ ಕಾರಣ, ಧಾರಣ ಶಕ್ತಿಯೆಂದು ಈಶ್ವರ (ದೇವರೆಂಬ) ತತ್ತ್ವವನ್ನು ದರ್ಶನ ಶಾಸ್ತ್ರಗಳು ವಿಂಗಡಿಸಿ ಚರ್ಚಿಸುತ್ತವೆ. ಭಾರತೀಯ ದರ್ಶನದಲ್ಲೂ ದೇವರ ಅಸ್ತಿತ್ವದ ಸಮರ್ಥನೆ ಮತ್ತು ನಿರಾಕರಣೆ ಬಹಳಷ್ಟು ಇದೆ. ಆದರೆ ಗಮನಾರ್ಹವಾದ ಸಂಗತಿ ಯೆಂದರೆ, ಭಾರತೀಯ ದರ್ಶನದ ಕ್ಷೇತ್ರದಲ್ಲಿ ದೇವರ ಬಗೆಗಿನ ಚರ್ಚೆ ಅಷ್ಟು ಮುಖ್ಯವಾದುದಲ್ಲ. ವೇದವು ಪ್ರಮಾಣವೆ, ಅಲ್ಲವೇ ? ಜ್ಞಾನ ಮುಖ್ಯವೋ, ಕರ್ಮವು ಮುಖ್ಯವೋ ? ಪ್ರಮಾಣಗಳ ಬಲಾಬಲ ಏನು ? ಜಗತ್ತಿನ ಇರವಿನ ಸ್ವರೂಪವೇನು ? ಈ ಮೊದಲಾದ ಚರ್ಚೆಗಳಿಗೆ ಹೆಚ್ಚು ಪ್ರಾಧಾನ್ಯ ಸಂದಿದೆ. ಕಡು ವೈದಿಕರಾಗಿ ಪರಮ ವೇದ ನಿಷ್ಠರಾದ ಮೀಮಾಂಸಕರು, ನಿರೀಶ್ವರವಾದಿಗಳೆಂಬುದು ವಿಚಿತ್ರವಾದರೂ ನಿಜ. ಮಂತ್ರಗಳು, ಯಜ್ಞಗಳು ಸ್ವಯಂಶಕ್ತಿಯುಳ್ಳವು, ಅದರ ಫಲವು ದೇವತೆಗಳಿಂದ ಬರುವುದಿಲ್ಲ ಎಂಬ ನಿಲುವು ಮೀಮಾಂಸಾದರ್ಶನದ್ದು. ಇದೊಂದು ತರಹದ 'ಮತಾಚಾರ ಶಕ್ತಿವಾದ'. ಆಸ್ತಿಕವೆನಿಸಿದ ದರ್ಶನಗಳೊಳಗೂ, ನಾಸ್ತಿಕರೆನಿಸಿದ ಚಾರ್ವಾಕ, ಬೌದ್ಧ, ಜೈನರೊಳಗೂ ತೀವ್ರ ಭಿನ್ನಾಭಿಪ್ರಾಯಗಳಿದ್ದುವು. ಹೀಗೆ ಸ್ವಪಕ್ಷ, ಪ್ರತಿಪಕ್ಷಗಳೊಂದಿಗೆ ಪ್ರತಿಯೊಂದು ದರ್ಶನ ಮಾರ್ಗವೂ ಚರ್ಚಿಸುತ್ತ, ವಿರೋಧಿಸುತ್ತ, ಪ್ರಭಾವವನ್ನು ಸ್ವೀಕರಿಸುತ್ತ ಸಾಗುತ್ತಿತ್ತು.

ಸಾಮಾನ್ಯ ಮಟ್ಟದಲ್ಲಿ ದರ್ಶನಗಳ ಕುರಿತು ಎಷ್ಟು ಸರಳೀಕೃತ ತಿಳಿವು, ಅಜ್ಞತೆ ಇರುತ್ತದೆ ಎಂಬುದಕ್ಕೊಂದು ಉದಾಹರಣೆ : ಸಂಪ್ರದಾಯದಲ್ಲಿ ಚಾರ್ವಾಕ, ಜೈನ, ಬೌದ್ಧ ಮೂರನ್ನೂ ಸೇರಿಸಿ 'ಬೌದ್ಧ' ಎಂದೇ ಹೇಳುವುದು. 'ವೇದವಿರೋಧಿ' ಎಂಬುದನ್ನೆ ಇಲ್ಲಿ ಮುಖ್ಯವಾಗಿಸಿದೆ. ಪುರಾಣದ ಬುದ್ಧನಂತೂ ಬತ್ತಲೆ, ದಿಗಂಬರ. ಬತ್ತಲೆನಿಂತ ಬೌದ್ಧನಿಗೆ ಎಂದೇ ದಾಸರ ಪದ ! ಬೌದ್ಧ – ಜೈನವನ್ನು ಇದರಲ್ಲಿ ಒಂದಾಗಿ ಮಾಡಿದ್ದು ಕಾಣಬರುತ್ತದೆ. 'ಬೌದ್ಧ' ಎಂಬುದು ಕೆಲವೊಮ್ಮೆ ನಿಂದೆಯಾಗಿಯೂ ಬಳಕೆಯಾಗಿದೆ. ವೇದಪ್ರಾಮಾಣ್ಯ ವಿರೋಧವೊಂದೇ ಬೌದ್ಧರನ್ನು ವಿರೋಧಿಸಲು ಕಾರಣವೆನ್ನಲು ಸಾಧ್ಯವಿಲ್ಲ. ಬೇರೊಂದು ಮುಖ್ಯ ಕಾರಣವೂ ಇದೆ.

**ಶೂನ್ಯವಾದ**

ಶೂನ್ಯವಾದವೆಂಬ ಸರ್ವವಿನಾಶವಾದವು ಮಾಧ್ಯಮಿಕ ಬೌದ್ಧಮತದ ನಿಲುಮೆ. ಇದು ದಾರ್ಶನಿಕವಾಗಿ ದೊಡ್ಡ ಲೋಪ. 'ಜಗತ್ತು ಕ್ಷಣಿಕ, ಶೂನ್ಯ' ಎಂದು ಬುದ್ಧನು ಹೇಳಿದ. ನೈತಿಕ ಉಪದೇಶವನ್ನು ದಾರ್ಶನಿಕವಾಗಿ ತರ್ಕದಿಂದ ಸ್ಥಾಪಿಸುವ ಅತಿರೇಕವೆ ಇದಕ್ಕೆ ಕಾರಣ. ಶೂನ್ಯವಾದವನ್ನು ದಾರ್ಶನಿಕವಾಗಿ ಗಂಭೀರವಾಗಿ ಪರಿಗಣಿಸಲು ಸಾಧ್ಯವಿಲ್ಲ. ಶೂನ್ಯವಾದವು ಖಂಡನೆಗೂ ಅನರ್ಹ ಎಂದು ಶಂಕರಾಚಾರ್ಯರು ಹೇಳಿರುವುದು ಇದಕ್ಕಾಗಿಯೆ. ಸ್ವತಃ ಅವೈದಿಕರಾದ ಜೈನರೂ ಶೂನ್ಯವಾದವನ್ನು ತೀವ್ರವಾಗಿ ವಿರೋಧಿಸಿದ್ದಾರೆ. ಬೌದ್ಧರಲ್ಲೇ ಸರ್ವಾಸ್ತಿವಾದಿಗಳೂ, ಕೇವಲ ಚೈತನ್ಯವಾದಿಗಳಾದ ಯೋಗಾಚಾರ ಬೌದ್ಧರೂ ಖಂಡಿಸಿದ್ದಾರೆ. ಬೌದ್ಧಮತವೆಲ್ಲವೂ ಶೂನ್ಯವಾದವಲ್ಲ. ಆದರೆ ಅದು ನಾಗಾರ್ಜುನ, ಚಂದ್ರಕೀರ್ತಿ ಮೊದಲಾದವರಿಂದ ಪ್ರತಿಷ್ಠೆಗೆ ಬಂದು ಅದೇ ಮುಖ್ಯವೆನ್ನಿಸಿತು. ಸರ್ವವೂ ಶೂನ್ಯವಾದರೆ

## Statement about ownership and other particulars about newspaper

FORM IV

| | | |
|---|---|---|
| 1. Place of publication | : | Bangalore |
| 2. Periodicity of its publication | : | Monthly |
| 3. Printer's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 4. Publisher's Name | : | R. S. Rajaram |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 5. Editor's Name | : | G. Ramakrishna |
| Nationality | : | Indian |
| Address | : | Navakarnataka Publications (P) Ltd. Embassy Centre Crescent Road, P. B. No. 5159 Bangalore - 560 001 |
| 6. Name and address of individuals who own the newspaper and partners and shareholders holding more than one percent of the total capital | : | Navakarnataka Publications (P) Ltd., Embassy Centre Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

Sd/-
R. S. Rajaram
Publisher

Date : 28-2-2007


ಚರ್ಚೆ ಹೇಗೆ ? ಮೋಕ್ಷವೇಕೆ ? ಯಾರಿಗೆ ? ಇತ್ಯಾದಿ ಪ್ರಶ್ನೆ ಬರುತ್ತವೆ.

ಆದರೆ ಶೂನ್ಯವೆಂದರೆ ಅಶಾಶ್ವತವೆಂದೂ, ಸಾಪೇಕ್ಷವೆಂದೂ ತಮ್ಮ ಅರ್ಥ ಹೊರತು ಇಲ್ಲವೇ ಇಲ್ಲದ್ದು ಎಂಬುದಲ್ಲ; ಅನಿರ್ವಚನೀಯ ಮಾತ್ರ ಎಂಬ ಶೂನ್ಯವಾದಿಗಳ ಸಮರ್ಥನೆ. ಹಾಗಿದ್ದರೆ, ಅದು ಅದ್ವೈತದ ನಿಲುಮೆಗೆ ಹತ್ತಿರವಾಗುತ್ತದೆ. ಅಜಾತಿವಾದ (ಜಗತ್ತು ಹುಟ್ಟಲೇ ಇಲ್ಲ)ವೆಂಬ ಶೂನ್ಯವಾದಿ ತರ್ಕವನ್ನು ಅದ್ವೈತಾಚಾರ್ಯರಾದ ಗೌಡಪಾದರೂ ಬಳಸಿದ್ದಾರೆ.

''ಶೂನ್ಯವಾದದ ಬದಲು ಬೌದ್ಧರು ಬ್ರಹ್ಮವನ್ನು ಹೇಳಿದ್ದಾದರೆ ನಮಗೂ ಅವರಿಗೂ ಭೇದವಿಲ್ಲ. ಆ ತತ್ತ್ವವು ಶೂನ್ಯವೆಂದುದೇ ಅವರ ದೋಷ'' ಎಂಬುದು ಅದ್ವೈತಿಗಳ ನಿಲುವಾದರೆ ''ಅದ್ವೈತವೇದಾಂತಿಗಳದು ಸ್ವಲ್ಪವೇ ತಪ್ಪು. ಬ್ರಹ್ಮವನ್ನವರು ನಿತ್ಯ ಎಂದಿದ್ದಾರೆ. ಇಲ್ಲವಾದರೆ ಅವರದೂ ಶೂನ್ಯವಾದವೇ'' ಎಂದು ಮಾಧ್ಯಮಿಕರ ನಿಲುವು. (ತೇಷಾಂ ಅಲ್ಪಾಪರಾಧಂ ತು ದರ್ಶನಂ ನಿತ್ಯತೋಕ್ತಿತಃ – ತತ್ತ್ವಸಂಗ್ರಹ). ಆದುದರಿಂದ ಶೂನ್ಯಾದ್ವೈತಕ್ಕೂ, ಬ್ರಹ್ಮಾದ್ವೈತಕ್ಕೂ ವಿಚಿತ್ರ ಸಾಮ್ಯವೂ, ವಿರೋಧವೂ ಇದೆ. ವೇದ ದರ್ಶನ ವೇದಾಂತಗಳಲ್ಲೂ ಹೀಗಿದೆ.

### ಚಾರ್ವಾಕ-ಜೈನ-ಬೌದ್ಧ

ಈ ಮೂರು ಅಥವಾ ಬೌದ್ಧವನ್ನು ನಾಲ್ಕಾಗಿ ಭಾವಿಸಿದಾಗ ಆರು (೨+೪) ದರ್ಶನಗಳು, ಆರು ವೈದಿಕ ದರ್ಶನಗಳೂ ಪ್ರತಿಪಕ್ಷಗಳು. ವೇದವನ್ನು ಒಪ್ಪದಿರುವಿಕೆ, ಯಜ್ಞಗಳಿಗೆ, ಮುಖ್ಯವಾಗಿ ಪಶುಬಲಿಗೆ ವಿರೋಧ, ಎಂಬುದಷ್ಟೆ ಈ ಮೂರು ದರ್ಶನಗಳ ಸಮಾನ ಅಂಶ. ಉಳಿದಂತೆ, ತೀವ್ರ ವಿರೋಧಗಳೂ ಚರ್ಚೆಗಳೂ ಇವೆ. ಚಾರ್ವಾಕವನ್ನು ಜೈನರೂ, ಬೌದ್ಧರೂ ಖಂಡಿಸಿದ್ದಾರೆ. ಜೈನ-ಬೌದ್ಧ ದಾರ್ಶನಿಕ ವ್ಯತ್ಯಾಸವು ಪ್ರಸಿದ್ಧವಾದುದು. ಕೆಲವೊಮ್ಮೆ ವೈದಿಕ ಅವೈದಿಕಗಳೊಳಗೆ ಇರುವುದಕ್ಕಿಂತ ಹೆಚ್ಚು ಭಿನ್ನಾಭಿಪ್ರಾಯಗಳನ್ನು, ವೈದಿಕ-ವೈದಿಕರಲ್ಲಿ, ಅವೈದಿಕ-ಅವೈದಿಕರಲ್ಲಿ ಕಾಣುತ್ತೇವೆ. ಹಾಗಾಗಿ ದಾರ್ಶನಿಕ ಪ್ರಭೇದಗಳು ಅನಂತ ಮತ್ತು ವಿಚಿತ್ರ. ಸರಳವಾದ ವರ್ಗೀಕರಣಕ್ಕೆ ಅವು ಸಿಗುವುದಿಲ್ಲ.

### ಸಂಘರ್ಷ – ಸಂಘಟ್ಟನ – ಸಮ್ಮಿಶ್ರಣ

ಭಾರತೀಯ ದರ್ಶನ ಶಾಸ್ತ್ರದ ಚರಿತ್ರೆಯುದ್ದಕ್ಕೂ ವಿವಿಧ ಭಾವನೆಗಳ, ವಿವಿಧ ಪಂಥಗಳ ಅಸ್ತಿತ್ವ, ಸಹಬಾಳ್ವೆ, ಸಂಘರ್ಷಗಳನ್ನು ಕಾಣುತ್ತೇವೆ. ಇದರ ಮೌಲಿಕ ಉಲ್ಲೇಖಗಳು ವೇದಗಳಲ್ಲೂ ಇತರ ಪ್ರಾಚೀನ ಶಾಸ್ತ್ರರಚನೆಗಳಲ್ಲೂ ಇವೆ. ಆಸ್ತಿಕ ನಾಸ್ತಿಕಗಳೆರಡೂ ಪರಸ್ಪರ ಪ್ರಸಕ್ತಿಯಿಂದ ಬಂದುದರಿಂದ ಮಾನವನಷ್ಟೇ ಎರಡೂ ಪ್ರಾಚೀನ. ವೈದಿಕ-ಅವೈದಿಕ, ಆಸ್ತಿಕ-ನಾಸ್ತಿಕ, ಸೇಶ್ವರ-ನಿರೀಶ್ವರ ದರ್ಶನಗಳ ಬೆಳವಣಿಗೆಯು, ಒಂದನ್ನೊಂದು ವಿರೋಧಿಸಿ, ಖಂಡಿಸುತ್ತ ಆಗಿರುವುದಷ್ಟೇ ಅಲ್ಲ, ಅವು ಪರಸ್ಪರರ ಪ್ರಭಾವಕ್ಕೆ ಒಳಗಾಗಿವೆ. ಆ ಸಂಘರ್ಷಗಳಿಂದಲೇ ಒಂದೊಂದು ದರ್ಶನದಲ್ಲೂ, ಒಟ್ಟು ದರ್ಶನಗಳಲ್ಲೂ ಹೊಸ ಹೊಸ ಅಭಿಪ್ರಾಯಗಳು ರೂಪ ತಾಳಿವೆ. ಯಾವುದೇ ಮುಖಾಮುಖಿಯೂ ಸಂಘರ್ಷವೂ, ಸಂವಾದವಾಗಿ ಸಮನ್ವಯಗಳನ್ನೂ, ನವೀನ ಯುಕ್ತಿಗಳನ್ನೂ, ಪರಿಷ್ಕಾರಗಳನ್ನೂ ಉಂಟುಮಾಡುತ್ತದೆ.

'ಶಮಾರ್ಥಂ ಸರ್ವಶಾಸ್ತ್ರಾಣಿ' ಎಂಬಂತೆ ಎಲ್ಲ ಶಾಸ್ತ್ರಗಳು ಶಾಂತಿಗಾಗಿ ಶಮನಕ್ಕಾಗಿ ಇವೆ. ಅತಿವಾದಗಳೂ ಶಾಂತಿಗಾಗಿಯೇ ಬಂದಿರುತ್ತವೆ.

*ಮಹತಾಮಪಿ ಕೇಷಾಂಚಿತ್ ಅತಿವಾದಾಃ ಪೃಥಗ್ವಿಧಾಃ ।*
*ತತ್ತದರ್ಥಪ್ರಶಂಸಾದಿ ತತ್ಪರತ್ವಾದಬಾಧಿತಾಃ ॥* (ಕುಮಾರಿಲ ಭಟ್ಟ)

ಮಹಾತ್ಮರಾದವರೂ ಕೂಡ ಕೆಲವೊಮ್ಮೆ ಬೇರೆ ಬೇರೆ ಅತಿವಾದಗಳನ್ನು ಮಾಡುತ್ತಾರೆ. ಅದು ಆ ವಿಷಯಗಳನ್ನು ಒತ್ತಿಹೇಳುವುದಕ್ಕೆ, ಪ್ರಶಂಸೆಗಾಗಿ ಹೊರತು ಇತರ ವಾದಗಳಿಗೆ ನಿಷೇಧವಾಗಿ ಅಲ್ಲ ಅಥವಾ ತಪ್ಪುಗ್ರಹಿಕೆಯಾಗಿಯೂ ಅಲ್ಲ.

*ಶ್ರೋತವ್ಯಃ ಸೌಗತೋ ಧರ್ಮಃ ಕರ್ತವ್ಯಃ (ಮಂತವ್ಯಃ) ಪುನರಾರ್ಹತಃ ।*
*ವೈದಿಕೋ ವ್ಯವಹರ್ತವ್ಯಃ ಧ್ಯಾತವ್ಯಃ ಪರಮಃ ಶಿವಃ ॥*

(ಸಾಂಪ್ರದಾಯಿಕ ಶ್ಲೋಕ; ಸಮನ್ವಯ ಸೂಚಕ)

ಎಂದೂ ಒಂದು ಸಾಮಂಜಸ್ಯ ಮಾರ್ಗವಿದೆ. ಇದರ ಪ್ರಕಾರ ಬುದ್ಧನ ಧರ್ಮವನ್ನು ಕೇಳಿ ಮನಸ್ಸನ್ನು ಸಂಸ್ಕಾರ ಮಾಡಿಕೊಂಡು, ಜೈನಮತದಂತೆ ಅಹಿಂಸಾಚರಣೆ ಮಾಡಿ, ವೈದಿಕದಲ್ಲಿ ವ್ಯವಹರಿಸಿ, ಪರತತ್ತ್ವವನ್ನು ಧ್ಯಾನಿಸಬೇಕು !

*ತೀರ್ಥಕ್ರಿಯಾವ್ಯಸನಿನಃ ಸ್ವಮನೀಷಿಕಾಭಿಃ*
*ಉತ್ಪ್ರೇಕ್ಷ್ಯ ತತ್ತ್ವಮಿತಿ ಯತ್ ಯದಮೀ ವದಂತಿ ।*
*ತತ್ತತ್ತ್ವಮೇವ ಭವಿತೋಽಸ್ತಿ ನ ಕಿಂಚಿದನ್ಯತ್*
*ಸಂಜ್ಞಾಸು ಕೇವಲಮಯಂ ವಿದುಷಾಂ ವಿವಾದಃ ॥* (ಆಚಾರ್ಯ ಅಭಿನವಗುಪ್ತ)

ಮಹಾತ್ಮರು ಸದಿಚ್ಛೆಯಿಂದಲೇ ತತ್ತ್ವವನ್ನು ಒಂದೊಂದು ವಿಧವಾಗಿ ಉತ್ಪ್ರೇಕ್ಷಿಸಿ ವಿಶೇಷಿಸಿ ಹೇಳಿರುವರು. ಅದು ಒಂದೇ ತತ್ತ್ವ, ಬೇರೆಯಲ್ಲ. ವಿದ್ವಾಂಸರಿಗೆ ಹೆಸರಿನಲ್ಲಿ ಮಾತ್ರ ವಿವಾದ, ಅಷ್ಟೆ!

ಮತಕ್ಕಿಂತ ಮತಿಯು ದೊಡ್ಡದೆಂದು ಶ್ರೀಮದ್ಭಾಗವತವು ಹೇಳಿದರೆ, ಪ್ರಾಮಾಣಿಕ ಶುದ್ಧಾಂತಃಕರಣನಾದ ನಾಸ್ತಿಕನು ಪ್ರಶಂಸಾರ್ಹ ಎಂಬ ವಿಷ್ಣುಪುರಾಣದ ಮಾತು ಗಮನಾರ್ಹ.


**ಡಾ|| ಎಂ. ಪ್ರಭಾಕರ ಜೋಶಿ**
ನಂ. ಎನ್-೩, ಪೀಸ್ ಲ್ಯಾಂಡ್, ಪಿಂಟೋ ಲೇನ್, ಮಂಗಳೂರು - ೫೭೫ ೦೦೪

# ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆ ಮಾಡಬೇಕಾದುದೇನು ?



ಡಾ|| ಮಹಾಬಲೇಶ್ವರ ರಾವ್

**ಕ**ರ್ನಾಟಕದ ಎಲ್ಲ ಶಾಲೆಗಳಲ್ಲಿ ಒಂದನೆಯ ತರಗತಿಯಿಂದ ಇಂಗ್ಲಿಷ್ ಭಾಷೆಯನ್ನು ಕಡ್ಡಾಯವಾಗಿ ಕಲಿಸಬೇಕೇ ಬೇಡವೇ ಎಂಬ ವಿಷಯದ ಬಗ್ಗೆ ಕಳೆದ ಎರಡು ವರ್ಷಗಳಿಂದ ವ್ಯಾಪಕ ಚರ್ಚೆ ನಡೆಯುತ್ತಲೇ ಇದೆ. ಈ ವಾದಗಳನ್ನು ಕ್ರೋಡೀಕರಿಸಿ ಹೀಗೆ ಹೇಳಬಹುದು :

೧. ಒಂದನೆಯ ತರಗತಿಯಿಂದ ಕನ್ನಡದ ಜೊತೆಗೆ ಇಂಗ್ಲಿಷ್ ಕಲಿಸುವುದು ಮಗುವಿನ ಪಾಲಿಗೆ ಹೊರೆ. ಇದರಿಂದ ಕನ್ನಡದ ಸಂಸ್ಕೃತಿಗೆ ಬಾಧಕ. ಆದುದರಿಂದ ಇಂಗ್ಲಿಷ್ ಕಲಿಸಬೇಡಿ. ಈಗಿರುವ ವ್ಯವಸ್ಥೆ ಸರಿಯಾಗಿದೆ.

೨. ಮಗು ಕನ್ನಡವನ್ನು ತಕ್ಕಮಟ್ಟಿಗೆ ಓದಲು ಬರೆಯಲು ಆರಂಭಮಾಡಿದ ಮೇಲೆ ಎರಡನೆಯ ಭಾಷೆಯನ್ನು ಪರಿಚಯಿಸಬಹುದು. ಒಮ್ಮೆಲೆ ಎರಡು ಭಾಷೆಗಳನ್ನು ಪರಿಚಯಿಸುವುದು ಸರಿಯಲ್ಲ. ಇಂಗ್ಲಿಷ್‌ಅನ್ನು ಕಲಿಸಲೇಬೇಕೆಂದಿದ್ದರೆ ಮೂರನೆಯ ತರಗತಿಯಿಂದ ಕಲಿಸಬಹುದು.

೩. ಕನ್ನಡ ಮಾಧ್ಯಮ ಶಾಲೆಗಳು ಅವಸಾನದ ಅಂಚಿನಲ್ಲಿವೆ. ಅವು ಬದುಕಿ ಉಳಿಯಬೇಕಾದರೆ ಮತ್ತು ಕನ್ನಡ ಉಳಿಯಬೇಕೆಂದಿದ್ದರೆ ಇಂಗ್ಲಿಷ್‌ಅನ್ನು ಒಂದನೆಯ ತರಗತಿಯಿಂದ ಪರಿಚಯಿಸುವುದು ಸೂಕ್ತ. ಹೀಗೆ ಮಾಡಿದರೆ ಕನ್ನಡ ಮಾಧ್ಯಮ ಶಾಲೆಗಳು ಆಂಗ್ಲ ಮಾಧ್ಯಮ ಶಾಲೆಗಳಿಗೆ ತಕ್ಕಮಟ್ಟಿನ ಸ್ಪರ್ಧೆ ನೀಡಲು ಸಾಧ್ಯ.

೪. ಜಾಗತೀಕರಣದ ಸಂದರ್ಭದಲ್ಲಿ ದಲಿತರು ಹಾಗೂ ನಿಮ್ನ ವರ್ಗಗಳ ಮಕ್ಕಳಿಗೆ ಸಾಮಾಜಿಕ ಸಂಚಲನದ ದೃಷ್ಟಿಯಿಂದ ಇಂಗ್ಲಿಷ್ ಕಲಿಕೆ ಒಂದನೆಯ ತರಗತಿಯಿಂದಲೇ ಅನಿವಾರ್ಯ; ಸರಕಾರಿ ಶಾಲೆಗಳಲ್ಲಿ ಕಲಿಯುವ ದಲಿತ ಮಕ್ಕಳು ಆಂಗ್ಲ ಮಾಧ್ಯಮದ ಮಕ್ಕಳ ಜೊತೆ ಸ್ಪರ್ಧಿಸಲಾರರು. ಹೀಗಾಗಿ ಒಂದನೆಯ ತರಗತಿಯಿಂದ ಇಂಗ್ಲಿಷ್‌ಅನ್ನು ಕಡ್ಡಾಯವಾಗಿ ಸರಕಾರಿ ಶಾಲೆಗಳಲ್ಲಿ ಕಲಿಸಲೇಬೇಕು.

೫. ಸದ್ಯ ಶಾಲೆಗಳಲ್ಲಿನ ಇಂಗ್ಲಿಷ್ ಬೋಧನೆಯ ಮಟ್ಟ ತೀರ ಕಳಪೆ. ಇಂಗ್ಲಿಷ್ ಕಲಿಸುವ ಶಿಕ್ಷಕರಿಗೇ ಇಂಗ್ಲಿಷ್ ಮಾತನಾಡಲು ಬರುವುದಿಲ್ಲ. ಹೀಗಿರುವಾಗ ಒಂದನೆಯ ತರಗತಿಯಲ್ಲಿ ಇಂಗ್ಲಿಷ್‌ಅನ್ನು ಕಡ್ಡಾಯವಾಗಿ ಕಲಿಸುವುದು ಸ್ವಾಗತಾರ್ಹವಲ್ಲ.

ಈ ವಾದಗಳ ದೆಸೆಯಿಂದಾಗಿ ಕನ್ನಡ ಸಾಹಿತಿಗಳಲ್ಲಿ 'ಆಂಗ್ಲವಾದಿಗಳು' ಮತ್ತು 'ಕನ್ನಡ ವಾದಿಗಳು' ಎಂಬ ಬಣಗಳು ಹುಟ್ಟಿಕೊಂಡಿವೆ. ಇದು ೧೮೩೫ರಲ್ಲಿ ಲಾರ್ಡ್ ಮೆಕಾಲೆ ಪರಿಪತ್ರ ಪ್ರಕಟವಾಗುವ ಸಂದರ್ಭಕ್ಕೆ ನಮ್ಮನ್ನು ಕೊಂಡೊಯ್ಯುತ್ತದೆ.

ಈ ವಾದ ವಿವಾದಗಳ ಸಂದರ್ಭದಲ್ಲಿ ಕನ್ನಡದ ಬಗೆಗಿನ ಅಭಿಮಾನ, ಕನ್ನಡದ ಉಳಿವಿನ ಪ್ರಶ್ನೆ ಏನೇ ಇರಲಿ, ಶಿಕ್ಷಣತಜ್ಞರು ಭಾಷಾತಜ್ಞರು ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೆ ಯಾರೂ ಸರಿಯಾಗಿ ಕಿವಿ ಕೊಡುತ್ತಿಲ್ಲ. ಈ ನಡುವೆ ಮುಂದಿನ ವರ್ಷದಿಂದ ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆ ಎಂಬ ಘೋಷಣೆಯನ್ನು ಸರಕಾರ ಪ್ರಕಟಿಸಿದಂತಿದೆ. ತಜ್ಞರ, ಪರಿಣತರ ಸಲಹೆ ಪಡೆಯುತ್ತೇವೆ ಎಂಬ ಒಗ್ಗರಣೆ ಬೇರೆ. ಆಳುವ ಸರಕಾರಗಳಿಗೆ ವಿಷಯದ ವಿಸ್ತಾರ, ಹರಹು, ಗಹನತೆ, ಸಂಕೀರ್ಣತೆ, ಜಟಿಲತೆ ಇತ್ಯಾದಿ ಯಾವುದೂ ಮುಖ್ಯವಾಗುವುದಿಲ್ಲ. ದಡದ ಈ ತುದಿಯಲ್ಲಿ ಎಷ್ಟು ಮಂದಿ ಇದ್ದಾರೆ ? ಆ ತುದಿಯಲ್ಲಿ ಎಷ್ಟು ಮಂದಿ ಇದ್ದಾರೆ ? ಯಾರಿದ್ದಾರೆ ? ಯಾರಿಗೆ ಮಣೆ ಹಾಕಿದರೆ ಚುನಾವಣೆಯಲ್ಲಿ ಅಧಿಕ ಮತ ಬೀಳಬಹುದು ಎಂಬುದೇ ನಿತ್ಯದ ಗೊಟ್ಟಿ ಗುಣಿತ. ಹೀಗಾಗಿ ಈ ಒಂದು ವಿಷಯವನ್ನು ಹಿಗ್ಗಾಮುಗ್ಗಾ ಜಗ್ಗಾಡಿ ಬೀದಿರಂಪಮಾಡಿ ಫಲವಿಲ್ಲ. ಆಂಗ್ಲವಾದಿಗಳು ಮತ್ತು ಕನ್ನಡವಾದಿಗಳು ಸಂಗಮಿಸುವ ಬಿಂದು ಸದ್ಯಕ್ಕೆ ಗೋಚರಿಸುತ್ತಿಲ್ಲ. 'ಹಾವೂ ಸಾಯಬಾರದು, ಕೋಲೂ ಮುರಿಯಬಾರದು' ಎಂಬ ನೀತಿಯಿಂದ ಫಲವಿಲ್ಲ.

ಕೊನೆಗೂ ಒಂದನೆಯ ತರಗತಿಯಿಂದ ಇಂಗ್ಲಿಷ್‌ಅನ್ನು ಒಂದು ಭಾಷೆಯಾಗಿ ಕಲಿಸುವ ಸ್ಥಿತಿ ಸದ್ಯೋಭವಿಷ್ಯದಲ್ಲಿ ನಿರ್ಮಾಣವಾಗಿಯೇ ಆಗುತ್ತದೆ. ಇಂಥ ಸ್ಥಿತಿಯನ್ನು ಎದುರಿಸಲು ನಾವು ಹೇಗೆ ಸಜ್ಜಾಗಿದ್ದೇವೆ ? ಈಗಾಗಲೇ ಯಾವ ತಯಾರಿ ಶಾಲಾ ಹಂತದಲ್ಲಿ, ಶಿಕ್ಷಣ ಇಲಾಖೆಯ ಹಂತದಲ್ಲಿ ನಡೆದಿದೆ ? ನಾವು ಮಾಡಬೇಕಾದುದೇನು ?

''ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಸಲಿಕ್ಕೆ ಉಂಟಂತೆ'' ಎಂಬ ಉದ್ಗಾರಗಳನ್ನು ಬಿಟ್ಟರೆ ಶಾಲಾಹಂತದಲ್ಲಿ ಈವರೆಗೆ ಯಾವ ಸಿದ್ಧತೆಗಳೂ ಆದ ಹಾಗೆ ಕಂಡುಬರುತ್ತಿಲ್ಲ. ಕಲಿಸುವ ವಿಧಿ ವಿಧಾನಗಳು, ಶಿಕ್ಷಕರ ಹೆಚ್ಚಿದ ಜವಾಬ್ದಾರಿ, ಪಠ್ಯಕ್ರಮ ಇತ್ಯಾದಿಗಳ ಬಗ್ಗೆ ಶಿಕ್ಷಕರು ಚರ್ಚಿಸುತ್ತಿರುವುದು ಕೇಳಿಬರುತ್ತಿಲ್ಲ. 'ಶಿಕ್ಷಕರ ಸಬಲೀಕರಣ' ಎಂಬ ಘೋಷಣೆ ಕೇಳಿಬರುತ್ತಿದೆ; ಆದರೆ ಶಿಕ್ಷಕರು ಈ ವಿಷಯಗಳಲ್ಲಿ ಒಂದಿಷ್ಟೂ ತಲೆಕೆಡಿಸಿಕೊಂಡ ಹಾಗೆ ತೋರುವುದಿಲ್ಲ. ಹೇಗಿದ್ದರೂ ಗಂಗೋತ್ರಿಯಿಂದ ಗಂಗೆ ಧರಾತಳಕ್ಕೆ ಹರಿದು ಬರುವುದಲ್ಲವೇ ? ಅಲ್ಲಿಯ ತನಕ ಚೆಂಬು, ಬಿಂದಿಗೆ, ಹಿಡಿದು ಕಾಯಬಹುದಲ್ಲವೇ ? ಇಲಾಖೆ ಹೇಳಿದ್ದನ್ನು ಮಾಡಿದರೆ ಸರಿ !

ಸರಕಾರದ ಮಟ್ಟದಲ್ಲಿ ''ಒಂದನೆಯ ತರಗತಿಯಿಂದಲೇ ಇಂಗ್ಲಿಷ್, ಮುಂದಿನ ವರ್ಷದಿಂದಲೇ ಜಾರಿ'' ಎಂಬ ಹೇಳಿಕೆಗಳನ್ನು ನೀಡಲಾಗುತ್ತಿದೆ. ಆದರೆ ಈವರೆಗೆ

ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆ ಕಾರ್ಯಕ್ರಮ ಸರಕಾರದ ಮಹತ್ವಾಕಾಂಕ್ಷಿ ಕಾರ್ಯಕ್ರಮವಾಗಬೇಕು. ನಿಜವಾಗಿಯೂ ಉತ್ತಮ ಪರಿಣಾಮಗಳು ಮೂಡಿಬರಬೇಕು. ಹೇಗೋ ಕಾರ್ಯಕ್ರಮ ಅನುಷ್ಠಾನಗೊಳಿಸಿದರೆ, ಶಿಕ್ಷಕರು ಅಸಡ್ಡೆಮಾಡಿದರೆ ಅಥವಾ ಪರಿಣಾಮಹೀನರಾದರೆ ಕನ್ನಡ ಉಳಿಯುವ ಬದಲು ಅಳಿಯುತ್ತದೆ; ಇಂಗ್ಲಿಷ್‌ನ ಮಟ್ಟ ಕುಸಿಯುತ್ತದೆ. ಆಗ ಸರಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುವ ಮತ್ತು ಇಂಗ್ಲಿಷ್‌ಅನ್ನು ಮೊದಲ ತರಗತಿಯಿಂದಲೇ ಕಲಿಸಿ ಎಂದು ಆಗ್ರಹಿಸುವ ಮಂದಿ ಒಂದನೆಯ ತರಗತಿಯಿಂದಲೆ ಆಂಗ್ಲಮಾಧ್ಯಮ ಕಡ್ಡಾಯಗೊಳಿಸಿ ಎಂದು ಒತ್ತಾಯ ಹೇರುತ್ತಾರೆ. ಜನಾಭಿಪ್ರಾಯಗಳನ್ನು ನಂಬಿ ಜನಬೆಂಬಲದೊಂದಿಗೆ ಮುಂದುವರಿಯಬೇಕೆನ್ನುವ ಸರಕಾರ ಅದಕ್ಕೂ ಸೈ ಎಂದೀತು.

ಓಟು ಗಳಿಕೆಯ ರಾಜಕಾರಣಕ್ಕೆ ಭಾಷೆ ಯಾವುದಾದರೇನು ?!

ಶಿಕ್ಷಣ ಇಲಾಖೆಯಲ್ಲಿ ಭಾಷಾವೈಜ್ಞಾನಿಕ ನೆಲೆಯಲ್ಲಿ ಏನು ಕೆಲಸ ನಡೆದಿದೆ ? ಯಾವ ಪಠ್ಯ ಸಾಮಗ್ರಿ ಸಿದ್ಧಗೊಂಡಿದೆ ? ಸಿದ್ಧಪಡಿಸಿದ ತಜ್ಞರು ಯಾರು ? ಶಿಕ್ಷಕರ ತರಬೇತಿ ಸಲುವಾಗಿ ಏನು ಮಾಡಲಾಗುತ್ತಿದೆ ? ಶಿಕ್ಷಕರಿಗೆ ಈಗಾಗಲೇ ತರಬೇತಿ ಆರಂಭವಾಗಿದೆಯೇ ? ಆದರ ಭಾಷಾ ವೈಜ್ಞಾನಿಕ, ಮನೋವೈಜ್ಞಾನಿಕ ಹಾಗೂ ಶೈಕ್ಷಣಿಕ ತಳಹದಿಗಳೇನು ? ಈ ಬಗ್ಗೆ ಆಂಗ್ಲವಾದಿಗಳೂ ಸೇರಿದಂತೆ ಯಾರೂ ಸರಕಾರವನ್ನು ಪ್ರಶ್ನಿಸುತ್ತಿಲ್ಲ. ಸರಕಾರ ಕೂಡ ಈ ಬಗ್ಗೆ ಮೌನವಹಿಸಿದೆ. ಏಕೆಂದರೆ ಮಳೆಗಾಲ ಶುರುವಾಗಲು ಇನ್ನೂ ಆರು ತಿಂಗಳು ತಡವಿದೆ !

ನನ್ನ ದೃಷ್ಟಿಯಲ್ಲಿ ಸರಕಾರ, ಶಿಕ್ಷಣ ಇಲಾಖೆ ಮಾಡಬೇಕಾದ ಕೆಲಸಗಳು ಈ ಕೆಳಗಿನಂತಿವೆ.

೧. ಸರಕಾರ ಸಾಮಾಜಿಕ ಒತ್ತಡಗಳಿಗೆ ಮಣಿದು ಇಂಗ್ಲಿಷ್‌ಅನ್ನು ಒಂದನೆಯ ತರಗತಿಯಿಂದ ಕಡ್ಡಾಯ ಕಲಿಕೆಯ ವಿಷಯ ಎಂದು ಆಜ್ಞೆ ಹೊರಡಿಸಿದರೆ ಸಾಲದು. ಕನ್ನಡದ ನೆಲದಲ್ಲಿರುವ ಎಲ್ಲ ಬಗೆಯ ಶಾಲೆಗಳಲ್ಲಿ ರಾಜ್ಯಭಾಷೆಯೂ ಪ್ರಾದೇಶಿಕ ಭಾಷೆಯೂ ಆಡಳಿತ ಭಾಷೆಯೂ ಬಹುಜನರ ಮಾತೃಭಾಷೆಯೂ ಆದ ಕನ್ನಡವನ್ನು ಒಂದನೆಯ ತರಗತಿಯಿಂದಲೇ ಕಡ್ಡಾಯಗೊಳಿಸಿ ಕನ್ನಡಕ್ಕೆ ಅಗ್ರಮಣೆ ಹಾಕಬೇಕು. ಅಲ್ಪಸಂಖ್ಯಾತರ ಶಾಲೆ, ಅಂತರರಾಷ್ಟ್ರೀಯ ಶಾಲೆ, ಐಸಿಎಸ್‌ಸಿ. ಸಿಬಿಎಸ್‌ಇ ಎಂಬಿತ್ಯಾದಿಯಾದ ಯಾವ ರಿಯಾಯಿತಿಗಳನ್ನೂ ಸರಕಾರ ನೀಡಕೂಡದು. ಕಾನೂನಿನ ಸಮರವನ್ನು ನಡೆಸಬೇಕು.

ಸುದ್ದಿಚಿತ್ರ



ತಾರೀಖು ೧೭-೨-೦೭ರಂದು, ವನ್ಯಜೀವಿ–ಪರಿಸರ ಕುರಿತು ನವಕರ್ನಾಟಕ ಪ್ರಕಟಿಸಿರುವ 'ಹುಲಿಯ ಬದುಕು' (ಡಾ॥ ಕೆ. ಉಲ್ಲಾಸ ಕಾರಂತ; ಅನುವಾದ : ಡಾ॥ ಎಚ್. ಆರ್. ಕೃಷ್ಣಮೂರ್ತಿ), 'ಹುಲಿರಾಯನ ಆಕಾಶವಾಣಿ' (ಡಾ॥ ಕೆ. ಉಲ್ಲಾಸ ಕಾರಂತ; ನಿರೂಪಣೆ : ಟಿ. ಎಸ್. ಗೋಪಾಲ್) ಮತ್ತು 'ವನ್ಯಜೀವಿಗಳ ರಮ್ಯಲೋಕ' (ಸಂ : ಟಿ. ಎಸ್. ಗೋಪಾಲ್, ಸಂಜಯ ಗುಬ್ಬಿ, ಸುಮಂಗಲಾ ಎಸ್. ಮುಮ್ಮಿಗಟ್ಟಿ) – ಈ ಮೂರು ಕೃತಿಗಳ ಲೋಕಾರ್ಪಣೆ ಸಮಾರಂಭ ನಡೆಯಿತು.

ಡಾ॥ ಚಿರಂಜೀವ್ ಸಿಂಗ್ ಸಮಾರಂಭದ ಅಧ್ಯಕ್ಷತೆ ವಹಿಸಿ ಕೃತಿಗಳ ಅನಾವರಣ ಮಾಡಿದರು. ಶ್ರೀ ನಾಗೇಶ ಹೆಗಡೆ ಕೃತಿಗಳ ಪರಿಚಯ ಮಾಡಿಕೊಟ್ಟರು. ಡಾ॥ ಉಲ್ಲಾಸ ಕಾರಂತರು ವರ್ಣ ಪಾರದರ್ಶಿಕೆಗಳ ಪ್ರಾತ್ಯಕ್ಷಿಕೆ ನೀಡಿದರು ಹಾಗೂ ಸಂವಾದ ಕಾರ್ಯಕ್ರಮ ನಡೆಸಿಕೊಟ್ಟರು.

ಬೆಂಗಳೂರು ಆಕಾಶವಾಣಿ ಪ್ರಸ್ತುತಪಡಿಸಿದ 'ಹುಲಿರಾಯನ ಆಕಾಶವಾಣಿ' ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರಶ್ನೆಗಳಿಗೆ ಸರಿ ಉತ್ತರ ನೀಡಿದವರ ಪೈಕಿ ಬಹುಮಾನಿತರನ್ನು ಚೀಟಿ ಎತ್ತುವ ಮೂಲಕ ಆಯ್ಕೆಮಾಡುವ ಪ್ರಕ್ರಿಯೆಯಲ್ಲಿ ಪ್ರಸಾರ ಭಾರತಿಯ ಪ್ರಾಂತೀಯ ಡೈರೆಕ್ಟರ್ ಜನರಲ್ ಡಾ॥ ಎಚ್. ಆರ್. ಕೃಷ್ಣಮೂರ್ತಿ, ಬೆಂಗಳೂರು ಆಕಾಶವಾಣಿ ಕೇಂದ್ರದ ನಿರ್ದೇಶಕರಾದ ಶ್ರೀ ಎಸ್. ಎಸ್. ಹಿರೇಮಠ ಹಾಗೂ ಶ್ರೀ ನಾಗೇಶ ಹೆಗಡೆ ಭಾಗವಹಿಸಿದರು. ಆಯ್ಕೆಯಾದ ಇಪ್ಪತ್ತನಾಲ್ಕು ಮಂದಿ ವಿಜೇತರಿಗೆ ನವಕರ್ನಾಟಕದ ಅಭಿನಂದನೆಗಳು ಸಲ್ಲುತ್ತವೆ. ಇವರಿಗೆ ಪುಸ್ತಕ ಬಹುಮಾನ ನೀಡಲಾಗುತ್ತದೆ.

೨. ಕೇಂದ್ರೀಯ ಪಠ್ಯಕ್ರಮ ಹಾಗೂ ಅಲ್ಪಸಂಖ್ಯಾತರ ಶಾಲೆಗಳಲ್ಲಿ ಕನ್ನಡ ಕಲಿಸುವ ಶಿಕ್ಷಕರಿಗೆ ಕನ್ನಡ ಬೋಧನೆಗೆ ಸಂಬಂಧಪಟ್ಟಂತೆ ವಿಶೇಷ ತರಬೇತಿ ಶಿಬಿರಗಳನ್ನು ಹಮ್ಮಿಕೊಳ್ಳಬಹುದು.

೩. ಒಂದನೆಯ ತರಗತಿಯಿಂದ ಇಂಗ್ಲಿಷ್ ಎಂದೊಡನೆ ವರ್ಣಮಾಲಾ ಪದ್ಧತಿ, ಪದ-ಚಿತ್ರ ಪದ್ಧತಿ ಇತ್ಯಾದಿ ಯಾಗಿ ಓದು-ಬರೆಹ ಕಲಿಸಲು ಮುಂದಾಗಬಾರದು. ಅದನ್ನು ಎರಡನೆಯ ತರಗತಿಯಿಂದ ಆರಂಭಿಸಬಹುದು. ಮೊತ್ತಮೊದಲಿಗೆ ಮಕ್ಕಳು ಇಂಗ್ಲಿಷ್ ಭಾಷೆಯ ವಿವಿಧ ಧ್ವನಿಗಳನ್ನು, ಪದಗಳನ್ನು, ಪದ್ಯಗಳನ್ನು ಆಲಿಸುವ, ಪುನರುಚ್ಚರಿಸುವ ಕೆಲಸ ಆಗಬೇಕು. ಸರಳವಾದ ಶಿಶುಪ್ರಾಸಗಳು ಹಾಗೂ ಅಭಿನಯ ಗೀತೆಗಳನ್ನು ಬಳಸಬಹುದು. ಮೌಖಿಕ ಸಂವಹನ, ಅಥವಾ ಮಾತು – ಈ ಕೌಶಲಕ್ಕೆ ವಿಶೇಷ ಒತ್ತು ನೀಡಬೇಕು. ಹೀಗೆ ಮಾಡುವಾಗ ಪುಸ್ತಕದಲ್ಲಿ ಬರೆದುದನ್ನು ಓದಿಸುವುದು, ಉರು ಹೊಡೆಸುವುದು ಮಾಡಕೂಡದು. ಅದಕ್ಕೆ ಬದಲಾಗಿ ನಿತ್ಯಜೀವನದ ಸನ್ನಿವೇಶಗಳನ್ನು, ತರಗತಿಯ ಸನ್ನಿವೇಶಗಳನ್ನು ಬಳಸಿಕೊಳ್ಳಬೇಕು. ''ನಿನ್ನ ಹೆಸರೇನು ?'' ''ನಿನ್ನ ತಂದೆಯ ಹೆಸರೇನು ?'' ''ಮನೆ ಎಲ್ಲಿ?'' ''ಅಪ್ಪ ಮನೆಯಲ್ಲಿಲ್ಲ'' ''ನಾನು ಮಾರ್ಕೆಟ್‌ಗೆ ಹೋಗಿದ್ದೆ'' ಇತ್ಯಾದಿಯಾಗಿ ಸರಳ ಸಂಭಾಷಣೆಯ ಶಬ್ದಗಳನ್ನು ಅಭ್ಯಾಸಮಾಡಿಸಬೇಕು. ಈ ಹಿನ್ನೆಲೆಯಿಂಧ ಪಠ್ಯಕ್ರಮವನ್ನು ಇಲಾಖೆ ಪರಿಣತರ ಸಹಕಾರದಿಂದ ನಿರ್ಮಾಣ ಮಾಡಬೇಕು. ಪಠ್ಯಕ್ರಮದ ಚೌಕಟ್ಟನ್ನು ಆಧರಿಸಿ, ಮಕ್ಕಳ ಮಟ್ಟವನ್ನು ಲಕ್ಷ್ಯದಲ್ಲಿರಿಸಿಕೊಂಡು ಶಿಕ್ಷಕರು ಸೃಜನಶೀಲವಾಗಿ ಸನ್ನಿವೇಶಗಳನ್ನು ಸೃಷ್ಟಿಸಲು, ಬಳಸಿಕೊಳ್ಳಲು ಅವಕಾಶಗಳಿರಬೇಕು. ಭಾಷೆಯ ಕಲಿಕೆ-ಗಳಿಕೆ ಸಂಬಂಧದಲ್ಲಿ ರಾಚನಿಕ ದೃಷ್ಟಿಗಿಂತಲೂ ಸಂವಹನ ದೃಷ್ಟಿ ಹಾಗೂ ಸೃಜನಶೀಲ ಸಾಧ್ಯತೆಗಳಿಗೆ ಅಧಿಕ ಒತ್ತು ನೀಡಬೇಕು.

೪. ''ಒಂದನೆಯ ತರಗತಿಗೆ ಇಂಗ್ಲಿಷ್ ಕಲಿಸುವುದೇನು ಮಹಾ ? ಐದನೆಯ ತರಗತಿಗೆ ಇಂಗ್ಲಿಷ್ ಕಲಿಸುವ ಶಿಕ್ಷಕರಿದ್ದಾರಲ್ಲ. ಅವರೇ ಆ ಕೆಲಸ ಮಾಡುತ್ತಾರೆ'' ಎಂಬ ಉದ್ಗಾರಗಳು ಹೊರಹೊಮ್ಮಿವೆ. ಆದರೆ ಈಗಿನ ಐದನೆಯ ತರಗತಿಗೆ ದ್ವಿತೀಯ ಭಾಷೆಯಾಗಿ ಇಂಗ್ಲಿಷ್ ಓದಲು, ಬರೆಯಲು ಕಲಿಸುವುದೇ ಬೇರೆ; ಒಂದನೆಯ ತರಗತಿಯ ಪುಟ್ಟ ಮಕ್ಕಳಿಗೆ ಇಂಗ್ಲಿಷ್ ಮಾತನಾಡಲು ಸಂವಹನ ದೃಷ್ಟಿಯಿಂದ ಕಲಿಸುವುದೇ ಬೇರೆ. ಇದು ನೀರು ಕುಡಿದಷ್ಟು ಸುಲಭದ ಕೆಲಸವಲ್ಲ; ಬೇಕಾಬಿಟ್ಟಿಯಾಗಿ ಮಾಡಿದರೆ ಅಡಿಪಾಯವೇ ದುರ್ಬಲವಾದೀತು. ನಿಜವಾಗಿಯೂ ಒಂದನೆಯ ತರಗತಿಯಲ್ಲಿ ಚೆನ್ನಾಗಿ ಇಂಗ್ಲಿಷ್ ಕಲಿಸಬೇಕಾದರೆ ಪ್ರಾಥಮಿಕ ಶಾಲಾ ಶಿಕ್ಷಕರ ಇಂಗ್ಲಿಷ್ ಭಾಷಾಜ್ಞಾನ ವೃದ್ಧಿಗೊಳ್ಳಬೇಕು. ಅವರ ಇಂಗ್ಲಿಷ್ ಶಬ್ದಭಂಡಾರ ಸಮೃದ್ಧವಾಗಬೇಕು. ವಾಕ್ಯರಚನಾಕ್ರಮ ಪಳಗಬೇಕು. ಇಂಗ್ಲಿಷ್ ಮಾತನಾಡುವ ಕಲೆ ರೂಢಿಯಾಗಬೇಕು. ಸಂಭಾಷಣೆಗೆ ತಕ್ಕುದಾದ ಸನ್ನಿವೇಶ ಸೃಷ್ಟಿಯ ಕೌಶಲ ಮೂಡಿಬರಬೇಕು. ಸರಿಯಾದ ಉಚ್ಚಾರ ಕಂಠಗತವಾಗಬೇಕು. ಇದೆಲ್ಲದಕ್ಕೆ ಅವರಿಗೆ ಎರಡು-ಮೂರು ತಿಂಗಳುಗಳ ವ್ಯಾಪಕವಾದ ಪುನಶ್ಚೇತನ ಕಾರ್ಯಕ್ರಮಗಳನ್ನು ಸರಕಾರ ಹಮ್ಮಿಕೊಳ್ಳಬೇಕು. ಸಿ.ಐ.ಇ.ಎಫ್.ಎಲ್. ಹಾಗೂ ಆರ್.ಐ.ಇ. ಮತ್ತು ಡಿ.ಎಸ್.ಇ.ಆರ್.ಟಿ. ಮೊದಲಾದ ಸಂಸ್ಥೆಗಳು ಸೇರಿ ಶಿಕ್ಷಕರ ಪುನಶ್ಚೇತನಕ್ಕೆ ಅಗತ್ಯವಾದ ಪಠ್ಯಸಾಮಗ್ರಿ, ಅಭ್ಯಾಸ ಸಾಹಿತ್ಯ ಇತ್ಯಾದಿಗಳನ್ನು ಸಿದ್ಧಪಡಿಸಬೇಕು. ತರಬೇತಿಯ ಬಳಿಕ ಈ ಶಿಕ್ಷಕರು ಏನು ಮಾಡುತ್ತಿದ್ದಾರೆ ? ತಳಮಟ್ಟದಲ್ಲಿ ಉದ್ಭವಿಸುವ ಸಮಸ್ಯೆಗಳೇನು ? ಎಂಬುದನ್ನು ಕುರಿತು ಸಂಶೋಧನೆಗಳನ್ನು ಕೈಗೊಳ್ಳಬೇಕು.

ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆ ಕಾರ್ಯಕ್ರಮ ಸರಕಾರದ ಮಹತ್ವಾಕಾಂಕ್ಷಿ ಕಾರ್ಯಕ್ರಮವಾಗಬೇಕು. ನಿಜವಾಗಿಯೂ ಉತ್ತಮ ಪರಿಣಾಮಗಳು ಮೂಡಿಬರಬೇಕು. ಹೇಗೋ ಕಾರ್ಯಕ್ರಮ ಅನುಷ್ಠಾನಗೊಳಿಸಿದರೆ, ಶಿಕ್ಷಕರು ಅಸಡ್ಡೆಮಾಡಿದರೆ ಅಥವಾ ಪರಿಣಾಮಹೀನರಾದರೆ ಕನ್ನಡ ಉಳಿಯುವ ಬದಲು ಅಳಿಯುತ್ತದೆ; ಇಂಗ್ಲಿಷ್‌ನ ಮಟ್ಟ ಕುಸಿಯುತ್ತದೆ. ಆಗ ಸರಕಾರಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುವ ಮತ್ತು ಇಂಗ್ಲಿಷ್‌ಅನ್ನು ಮೊದಲ ತರಗತಿಯಿಂದಲೇ ಕಲಿಸಿ ಎಂದು ಆಗ್ರಹಿಸುವ ಮಂದಿ ಒಂದನೆಯ ತರಗತಿಯಿಂದಲೆ ಆಂಗ್ಲ ಮಾಧ್ಯಮ ಕಡ್ಡಾಯಗೊಳಿಸಿ ಎಂದು ಒತ್ತಾಯ ಹೇರುತ್ತಾರೆ. ಜನಾಭಿಪ್ರಾಯಗಳನ್ನು ನಂಬಿ ಜನಬೆಂಬಲದೊಂದಿಗೆ ಮುಂದುವರಿಯಬೇಕೆನ್ನುವ ಸರಕಾರ ಅದಕ್ಕೂ ಸೈ ಎಂದೀತು. ಓಟು ಗಳಿಕೆಯ ರಾಜಕಾರಣಕ್ಕೆ ಭಾಷೆ ಯಾವುದಾದರೇನು ?!

ಡಾ॥ ಮಹಾಬಲೇಶ್ವರ ರಾವ್
ಪ್ರಾಚಾರ್ಯರು, ಡಾ॥ ಟಿ.ಎಂ.ಎ.ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೨

(ಈ ನಾಟಕ ರಚನೆಯಲ್ಲಿ, ಕಾಶ್ಮೀರಿ ಜಾನಪದ ಕತೆ ಹಾಗೂ ರಸ್ಕಿನ್ ಬಾಂಡ್ ಅವರ ಸಣ್ಣಕತೆ – ಇವುಗಳಿಂದ ಪ್ರೇರಣೆ ಪಡೆದಿರುತ್ತೇನೆ).

**ಪಾತ್ರವರ್ಗ**

ಸೂತ್ರಧಾರ
ರಾಜ
ಮಂತ್ರಿಗಳು
ವಿದೂಷಕ
ಸೇವಕರು
ಮಣ್ಣಿನ ಕೆಲಸದವ
ಕಲ್ಲಿನ ಕೆಲಸದವ
ಗಾರೆಯ ಕೆಲಸದವ
ಮರದ ಕೆಲಸದವ
ವನದೇವತೆ
ಹಳ್ಳಿಯ ಜನರು

ನಾಟಕದ ಅವಧಿ – ೪೦ ನಿಮಿಷಗಳು

ಲಕ್ಷ್ಮೀನಾರಾಯಣ ಎಚ್. ವಿ.



# ದೇವದಾರು

(ಮಕ್ಕಳ ನಾಟಕ)

## ದೃಶ್ಯ-೧

(ಮಕ್ಕಳ ಗುಂಪೊಂದು ನಿಧಾನವಾಗಿ ಹೆಜ್ಜೆ ಹಾಕುತ್ತಾ, ರಂಗ ಪ್ರವೇಶ ಮಾಡುತ್ತದೆ; ಎಲ್ಲರೂ ಅರ್ಧಚಂದ್ರಾಕಾರವಾಗಿ ನಿಂತು ಪ್ರೇಕ್ಷಕರಿಗೆ ನಮಿಸುತ್ತಾ ಸುಶ್ರಾವ್ಯವಾಗಿ ಹಾಡುತ್ತಾರೆ.)

*ನಮೋ ನಟರಾಜ । ನಮೋ ಭರತ ಮುನಿ ತೇಜ ।*
*ನಮೋ ಕಾಶ್ಮೀರ ಪುರವಾಸ । ನಮೋ ಶ್ರೀಗಣೇಶ ॥*

**ಸೂತ್ರಧಾರ** : (ಮುಂದಕ್ಕೆ ಬಂದು) ಈ ಪ್ರಕಾರವಾಗಿ, ಕಾಶ್ಮೀರ ಪುರವಾಸಿಗಳಾದ ಗೌರೀಶ-ಗಣೇಶಾದಿಗಳಿಗೆ ನಮಿಸಿ, ಅವರಿಗೆ ಸರಿಸಮರಾದ ಸಭಾಸದರಿಗೂ ವಂದಿಸಿ –

**ಎಲ್ಲರೂ** : । ಮಾಡುವೆವು ನಾಟಕಾರಂಭ ।

**ಸೂತ್ರಧಾರ** : ಹುಡುಗರು ಆಡುತ್ತಿರುವ ಈ ಆಟವನ್ನು, ಹುಡುಗಾಟವೆಂದೇ ತಿಳಿದು, ತಪ್ಪುಗಳನ್ನು ತಾವೇ ತಿದ್ದಿಕೊಂಡು, ಹಾರೈಸುತ್ತೀರೆಂದು ನಂಬಿ –

**ಎಲ್ಲರೂ** : । ಮಾಡುವೆವು ನಾಟಕಾರಂಭ ।

(ಅವರಲ್ಲೊಬ್ಬನಿಗೆ ತಲೆಗೊಂದು ಸರಳವಾದ ಕಿರೀಟವನ್ನು ಇಡುತ್ತಾರೆ. ಭುಜದಿಂದ ಸೊಂಟಕ್ಕೆ ಸುತ್ತಲು ಜರಿ ಪಂಚೆಯನ್ನು ಕೊಡುತ್ತಾರೆ. ಈಗ ಅವನು ಗಾಂಭೀರ್ಯದಿಂದ ಒಡ್ಡೋಲಗದಲ್ಲಿದ್ದಾನೆ. ಮಂತ್ರಿಗಳಲ್ಲೊಬ್ಬ ಮುಂದೆ ಬಂದು ರಾಜನಿಗೆ ವಂದಿಸುತ್ತಾನೆ.)

**ಮಂತ್ರಿ** : ವೇದ ವೇದಾಂತ ವೇದ್ಯ, ಪುರಾಣ ಪುಣ್ಯ ಪುರುಷೋತ್ತಮ। ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ। ಭಾರತ ವರ್ಷಾಧೀಶ। ಕಾಶ್ಮೀರ ಪುರವಾಸಿ। ಶ್ರೀ ಶ್ರೀ ಶ್ರೀ ಗೌರೀಶ ವರ್ಮ ಮಹಾರಾಜರಿಗೆ –

**ಎಲ್ಲರೂ** : ಭೋ! ಪರಾಕ್ !! ಭೋ! ಪರಾಕ್ !!

**ರಾಜ** : ಸಭಾಸದರೆ, ನಾನು ಈಗ ಅತ್ಯಂತ ಆನಂದದಲ್ಲಿದ್ದೇನೆ; ಏಕೆಂದರೆ, ನೀವೆಲ್ಲರೂ ಆನಂದದಿಂದಿದ್ದೀರಿ. ಅಷ್ಟೇ ಅಲ್ಲ –

**ಒಬ್ಬ** : ಬ್ರಾಹ್ಮಣರು ಯಜ್ಞಾದಿಗಳನ್ನು ಮಾಡಿ, ದೇವತೆಗಳನ್ನು ಸಂತೃಪ್ತಗೊಳಿಸಿದ್ದಾರೆ.

**ಮತ್ತೊಬ್ಬ** : ವೈಶ್ಯರು, ದವಸ-ಧಾನ್ಯಗಳನ್ನು ನ್ಯಾಯ ಬೆಲೆಯಲ್ಲಿ ಮಾರಾಟ ಮಾಡುತ್ತಿದ್ದಾರೆ.

**ಒಬ್ಬ** : ಕ್ಷತ್ರಿಯರು, ಶತ್ರುಗಳನ್ನು ಸದೆಬಡಿದು, ಕಪ್ಪ-ಕಾಣಿಕೆಗಳಿಂದ ಅರಮನೆಯ ಬೊಕ್ಕಸವನ್ನು ತುಂಬಿದ್ದಾರೆ.

**ಮತ್ತೊಬ್ಬ** : ಒಕ್ಕಲಿಗ, ಬಡಗಿ, ಕುಂಬಾರ, ಕಮ್ಮಾರ, ಚಮ್ಮಾರ ಮುಂತಾದ ಕಸುಬುದಾರರು ತಮ್ಮ-ತಮ್ಮ ಕೆಲಸದಲ್ಲಿ ತೊಡಗಿದ್ದು, ನೆಮ್ಮದಿಯಿಂದಿದ್ದಾರೆ.

**ಮಂತ್ರಿ** : ಹೀಗೆ ಸುಭಿಕ್ಷೆಯಿಂದಿರುವ ದೇಶವನ್ನು ನೋಡಿ ನಮ್ಮ ಮಹಾರಾಜರಿಗೆ –

**ಎಲ್ಲರೂ** : ।ಆನಂದವೋ ಆನಂದ। ।ಆನಂದವೋ ಆನಂದ।

**ರಾಜ** : (ಮುಂದೆ ಬಂದು) ಸಭಾಸದರೆ, ಈಗ ನನಗೊಂದು ಬಯಕೆಯಾಗಿದೆ.

**ವಿದೂಷಕ** : (ಮನಸ್ಸಿನಲ್ಲಿ) ಅರಸರಿಗೆ ಬಯಕೆಯಾಗಿದೆ! ನನಗೇಕೋ ಭಯವಾಗಿದೆ!! (ಪ್ರಕಾಶ) ಪ್ರಭುಗಳೇ, ಬಯಕೆಯಾಗಿರುವುದು ತಮಗೋ ಅಥವಾ ರಾಣಿಯವರಿಗೋ ?

**ರಾಜ** : ನನಗೊಂದು ಆಸೆಯಾಗಿದೆ.

**ವಿದೂ** : (ಮನಸ್ಸಿನಲ್ಲಿ) ಸಧ್ಯ ! (ರಾಜನ ಮುಂದೆ ಮಂಡಿಯೂರಿ) ಪ್ರಭುಗಳೇ, ಅನುಗ್ರಹಿಸಿ.

**ಒಬ್ಬ** : ನಿಮ್ಮ ಆಸೆಯನ್ನು ನಮ್ಮ ಆಸೆಯಂತೆಯೇ ಈಡೇರಿಸುತ್ತೇವೆ.

**ಇನ್ನೊಬ್ಬ** : ಪ್ರಭುಗಳೆ, ನಿಮ್ಮ ಆಜ್ಞೆಗಾಗಿ ನಾವೆಲ್ಲರೂ ಕಾದಿದ್ದೇವೆ.

**ಎಲ್ಲರೂ** : ನಾವೆಲ್ಲರೂ ಕಾದಿದ್ದೇವೆ (ಎಲ್ಲರೂ ಮೊಣಕಾಲೂರಿದ್ದಾರೆ)

**ರಾಜ** : ಈ ಕಾಶ್ಮೀರ ಪುರಕ್ಕೊಂದು –

**ಒಬ್ಬ** : (ಎದ್ದುಬಂದು) ಅರಸಿಯೊಬ್ಬಳು ಬೇಕೇನು ಪ್ರಭು ?

**ಇನ್ನೊಬ್ಬ** : ಈಗಲೇ ಅರಸಿ ತರುತ್ತೇವೆ.

**ರಾಜ** : ಅಯ್ಯೋ ಅಂತಃಪುರದ ತುಂಬಾ ಅವರೇ ತುಂಬಿಹೋಗಿದ್ದಾರೆ.

**ಒಬ್ಬ** : ಹಾಗಾದರೆ, ಮುತ್ತು-ಮಾಣಿಕ್ಯ ? ವಜ್ರ-ವೈಡೂರ್ಯ ?

**ರಾಜ** : ಇಲ್ಲ, ನನ್ನ ಬೊಕ್ಕಸ ಉಕ್ಕಿ ಹರಿಯುತ್ತಿದೆ.

**ವಿದೂ** : ಹಂ ! ಗೊತ್ತಾಯಿತು !! ಕೇಸರೀಬಾತು !! (ನಗುತ್ತಾನೆ; ಬೇರೆಯವರು ನಗುವುದಿಲ್ಲ)

**ರಾಜ** : ಈ ಕಾಶ್ಮೀರ ಪುರಕ್ಕೊಂದು ಭವ್ಯವಾದ ಅರಮನೆ ಬೇಕಾಗಿಲ್ಲವೇ ?

**ಎಲ್ಲರೂ** : ಬೇಕು... ಬೇಕು. ಅರಸರು ಅಂದಮೇಲೆ ಅರಮನೆ ಬೇಕೇಬೇಕು.

**ವಿದೂ** : ಅರಸನಿಗೆ ಅರಮನೆ/ ಅರಸಿಗೆ ಅರಸನ ಮನೆ

**ಒಬ್ಬ** : ನಿನಗೆ ಸೆರೆಮನೆ.

**ವಿದೂ :** ನಿನ್ನ ಹೆಂಡತಿಗೆ ನೆರೆಮನೆ (ಎಲ್ಲರೂ ನಗುತ್ತಾರೆ)

**ರಾಜ :** ವಿದೂಷಕರೇ, ಗಂಭೀರ ಚರ್ಚೆ ನಡೆಯುವಾಗ ಹಾಸ್ಯ ಸಲ್ಲದು.

(ವಿದೂಷಕ, ತನ್ನ ಬಾಯಿ ಹಾಗೂ ಹಿಂದೆ ಮುಚ್ಚಿಕೊಂಡು ದೂರ ಹೋಗುತ್ತಾನೆ.)

**ರಾಜ :** ಕಾಶ್ಮೀರ ಪುರಕ್ಕೊಂದು ಅರಮನೆ ಬೇಕಾಗಿದೆ; ಭವ್ಯವಾದ ಅರಮನೆ! ಇಡೀ ಭರತ ಖಂಡದಲ್ಲಿ ಅಂಥ ಅರಮನೆ ಹಿಂದೆಂದೂ ಇದ್ದಿರಬಾರದು – ಮುಂದೂ ಇರಬಾರದು.

**ಒಬ್ಬ :** (ಮತ್ತೊಬ್ಬನನ್ನು ಮುಂದೆ ನಿಲ್ಲಿಸಿ) ಇವನು ಮಣ್ಣಿನ ಕೆಲಸದಲ್ಲಿ ಮಹಾ ನಿಪುಣ!

**ವಿದೂ :** (ಹಿಂದಿನಿಂದ) ಸುಮಾರು ಜನರನ್ನು ಮಣ್ಣು ಮಾಡಿದ್ದಾನೆ!

**ರಾಜ :** ನನಗೆ ಸಧ್ಯ ಇವನು ಬೇಡ.

**ಮತ್ತೊಬ್ಬ:** ಪ್ರಭುಗಳೇ, ನಾನು ಕಲ್ಲಿನ ಕೆಲಸದವನು; ಅನೇಕ ಗುಡಿ-ಗೋಪುರಗಳನ್ನು–

**ರಾಜ :** ಇಲ್ಲ. ನೀನೂ ನನಗೆ ಬೇಡ.

**ಇನ್ನೊಬ್ಬ:** ನಾನು ಗಾರೆ ಕೆಲಸದವನು; ನನ್ನ ಹತ್ತಿರ ೧೦ ಒರಳುಗಳು, ೨೦ ಎತ್ತುಗಳಿದ್ದಾವೆ.

**ರಾಜ :** ಓ ಕ್ಷಮಿಸಿ, ಇವರ್‍ಯಾರೂ ಈಗ ನನಗೆ ಬೇಕಾಗಿಲ್ಲ.

**ವಿದೂ :** ಓಯ್! ಆಚಾರ್ರು, ಏನು ಇಲ್ಲೇ ನಿಂತ್ರಲ್ಲ? ಬನ್ನಿ, ಬನ್ನಿ ಪರಿಚಯ ಮಾಡಿಸ್ತೀನಿ. ಪ್ರಭುಗಳೇ, ಇವರು ಶಿವಾಚಾರ್ರು ಅಂತ. ಮರವನ್ನು ಆರಿಸೋದರಿಂದ ಹಿಡಿದು, ಕಡಿದು ಕೆತ್ತಿ ಕಟ್ಟೋದರಲ್ಲಿ ಇವರು ಎತ್ತಿದ ಕೈ. (ಮನಸ್ಸಿನಲ್ಲಿ) ನಮ್ಮ ಕಾಶ್ಮೀರದ ಕಾಡುಗಳೆಲ್ಲಾ ಬೋಳಾಗಿದ್ದು ಇವರಿಂದಲೇ.

**ಒಬ್ಬ :** ಕೆತ್ತನೆಯ ಕೆಲಸದಲ್ಲಂತೂ ಇಡೀ ದೇಶದಲ್ಲಿ ಇವರನ್ನು ಮೀರಿಸೋರು ಇಲ್ಲ.

**ವಿದೂ :** ಮರದಲ್ಲಿ ಮದನಿಕೆಯರನ್ನು ಕೆತ್ತಾರೆ, ಎಷ್ಟು ನುಣ್ಣಗಿರುತ್ತೆ ಅಂದರೆ...

**ರಾಜ :** ಶಿವಾಚಾರ್ಯರೇ, ನೀವು ನನಗೆ ಬೇಕು.

**ಶಿವಾ :** ಪ್ರಭುಗಳೇ, ನಾನು ಧನ್ಯನಾದೆ! ತಮ್ಮ ಸೇವೆಗೆ ನಾನು ಸದಾ ಸಿದ್ಧ!

**ರಾಜ :** ನನ್ನ ಅರಮನೆ, ಸಂಪೂರ್ಣವಾಗಿ ವಿಶಿಷ್ಟ ವಾಗಿರಬೇಕು; ಇಂಥ ಅರಮನೆ, ಇಡೀ ಭಾರತ ದೇಶದಲ್ಲಿ ಎಲ್ಲೂ ಇರಬಾರದು.

**ಶಿವಾ :** ಆಗಬಹುದು ಪ್ರಭುಗಳೇ.

**ರಾಜ :** ನೋಡಿ, ಶಿವಾಚಾರ್ಯರೇ, ಇಡೀ ಭರತ ಖಂಡದಲ್ಲಿ ಎತ್ತರವಾದ ಪ್ರದೇಶ – ನನ್ನ ದೇಶ – ಕಾಶ್ಮೀರ ಪುರ! ಇಲ್ಲಿ ಅತ್ಯಂತ ಎತ್ತರವಾದ ಮರಗಳು ಅಂದರೆ, ದೇವದಾರು ಮರಗಳು. ದೇವಲೋಕಕ್ಕೂ ಭೂಮಿಗೂ ಚಾಚಿದ ದೈತ್ಯ ಏಣಿಗಳ ಹಾಗೆ ಅವು ಬೆಳೆದು ನಿಂತಿದ್ದಾವೆ. ಅಂಥ ಮರಗಳಲ್ಲಿ, ಅತ್ಯಂತ ಎತ್ತರವಾದ ಹಾಗೂ ದೊಡ್ಡದಾದ ಮರವನ್ನು ತಂದು ನನ್ನ ಅರಮನೆಯನ್ನು ಕಟ್ಟಬೇಕು.

**ಶಿವಾ :** ಪ್ರಭುಗಳೇ, ದೇವದಾರು ಮರಗಳು... ದೇವರ ಮರಗಳು ಅಂತಾರೆ; ಅದರಲ್ಲಿ ದೇವಾಲಯ ಗಳನ್ನು ಮಾತ್ರ ಕಟ್ಟುತ್ತಾರೆ.

**ರಾಜ :** ನನಗೆ ಅದು ಗೊತ್ತು. (ನಗು ಬೆರೆಸಿ) 'ರಾಜಾ ಪ್ರತ್ಯಕ್ಷ ದೇವತಾ!' ... ಅಂದಮೇಲೆ – ಅರಮನೆ ಎಂದರೆ, ದೇವರ ಮನೆಯೇ ತಾನೇ?

**ಶಿವಾ :** ಆದರೆ...

(ಜನರಲ್ಲೂ ಆತಂಕ-ಗಲಿಬಿಲಿ; ಇದನ್ನು ತಿಳಿದ ರಾಜ, ತುಸು ಮುನಿಸಿನಿಂದ –)

**ರಾಜ :** ಇದು ರಾಜಾಜ್ಞೆ, ಇನ್ನು ಆರು ತಿಂಗಳಲ್ಲಿ ಅರಮನೆ ನಿರ್ಮಾಣವಾಗಬೇಕು. ನೆನಪಿರಲಿ – ಇಡೀ ಹಿಮಾಲಯದಲ್ಲಿ ಅತ್ಯಂತ ಎತ್ತರವಾದ ದೇವದಾರು ಮರದಲ್ಲಿ ನನ್ನ ಅರಮನೆ ನಿರ್ಮಾಣವಾಗಬೇಕು. ಮಂತ್ರಿಗಳೇ, ಇದಕ್ಕೆ ಬೇಕಾದಷ್ಟು ಹಣವನ್ನು ಬೊಕ್ಕಸ ದಿಂದ ತೆಗೆದುಕೊಡಿ. ಕೆಲಸ ಕೂಡಲೇ ಪ್ರಾರಂಭವಾಗಲಿ. (ಹೋಗುತ್ತಾನೆ)

**ವಿದೂ :** ಆಚಾರ್ರೇ, ಬನ್ನಿ, ಬೇಜಾರ ಮಾಡ್ಕೊ ಬೇಡಿ, ನಿಮಗಿಂತ ಎತ್ತರವಾದ ಒಂದು ಮರ ತೋರಸ್ತೀನಿ – ಹೋಗಿ ನೇಣು ಹಾಕಿಕೊಳ್ಳಿ. ಬನ್ನಿ, ಹೋಗೋಣ. (ಹೋಗುತ್ತಾರೆ)

(ಇದ್ದಕ್ಕಿದ್ದಂತೆ ಜನರಲ್ಲಿ ಆತಂಕ, ಕಳವಳ ಕಾಣಿಸಿ ಕೊಳ್ಳುತ್ತದೆ; ಆದರೂ ಒಲ್ಲದ ಮನಸ್ಸಿನಿಂದ ಮರ ಹುಡುಕಲು ಪ್ರಾರಂಭಿಸುತ್ತಾರೆ; ಹಾಡು ನಡೆಯುತ್ತಿದ್ದಂತೆ ರಂಗದ ಮೇಲೆ, ಬೆಳೆದುನಿಂತ ಮರಗಳು ರೂಪುಗೊಳ್ಳುತ್ತವೆ; ಪ್ರಾಣಿಗಳೂ-ಪಕ್ಷಿಗಳೂ ನಲಿಯುತ್ತಿವೆ; ಕೆಲಸಗಾರರು ಒಂದು ದೊಡ್ಡ ಮರವನ್ನು ನೋಡುತ್ತಾರೆ; ಹಾಗೇ ಅದರ ಭಾರೀ ಎತ್ತರವನ್ನು ನೋಡಿ ಅಚ್ಚರಿಗೊಂಡು, ಅದರ ಸುತ್ತಳತೆಯನ್ನು ಒಬ್ಬೊಬ್ಬರು ಕೈ-ಕೈ ಹಿಡಿದು ಅಳೆಯುತ್ತಾರೆ; ಹಾಡು ಮುಗಿಯುವಷ್ಟರಲ್ಲಿ ಮರವನ್ನು ಕಡಿದು, ಅದನ್ನು ಹೊರಳಿಸಲೂ ಸಾಧ್ಯವಾಗದೆ, ಕುದುರೆಗಳು ಹಾಗೂ ಆನೆಗಳಿಂದಲೂ ಯತ್ನಿಸಿ, ಸೋತು ಮರಳುತ್ತಾರೆ. ಹಾಡು ನಡೆದೇ ಇದೆ.)

*ಕಾಡು ಕಾಡೆಂದರೆ, ಕಾಡೇನ ನೋಡಲೊ।*
*ಕಾಡೀನ ಬೆಡಗೆಂತು ಹಾಡಲಯ್ಯಾ। ಶಿವನೆ।*
*ಕಾಡೀನ ಒಡಪೆಂತು ಒಡೆಯಲಯ್ಯಾ*
*॥ಕಾಡು॥*

*ಎಲ್ಲಿ ನೋಡಿದರಲ್ಲಿ। ಗಿಡ-ಮರ-ಹೂಬಳ್ಳಿ।*
*ಪಚ್ಚೆ-ಹವಳವ ಚೆಲ್ಲಿ। ಮುಚ್ಚಿದ ಹಸಿರ ವಲ್ಲಿ*
*॥ಕಾಡು॥*

*ಅಳಿಲು ನವಿಲುಗಳಿಲ್ಲೆ। ಕಾಡಾನೆ ಹುಲಿ-ಹುಲ್ಲೆ।*
*ಅಂಕೆ ಇಲ್ಲದೆ ಜಿಂಕೆ ಕುಣಿವುದಿಲ್ಲೆ*
*॥ಕಾಡು॥*

(ರಾಜನ ಮುಂದೆ ಜನರು ಬಂದು ವರದಿಯನ್ನು ಒಪ್ಪಿಸುತ್ತಿದ್ದಾರೆ)

**ಒಬ್ಬ:** ಪ್ರಭುಗಳೇ, ಕಾಡಿನ ನಡುವೆ ದೊಡ್ಡ ದೇವದಾರು ಮರವನ್ನು ನೋಡಿದೆವು.

**ಮತ್ತೊಬ್ಬ:** ಅದು ಎಷ್ಟು ದೊಡ್ಡದಾಗಿತ್ತು ಅಂದರೆ, ಮೂರು ಅರಮನೆ ಕಟ್ಟಬಹುದಾಗಿತ್ತು.

**ರಾಜ :** ಅದನ್ನು ಕಡಿದಿರಿ ತಾನೇ?

**ಒಬ್ಬ:** ಓ! ನಾವು ಹತ್ತು ಜನ ಸೇರಿ ಕಡೀಬೇಕಾಯ್ತು.

**ರಾಜ :** ಬಹಳ ಸಂತೋಷ! ಈಗ ಎಲ್ಲಿದೆ ಆ ಮರ?

**ವಿದೂ :** ಅಲ್ಲೇ ಇದೆ, ಪ್ರಭುಗಳೇ.

**ರಾಜ :** ''ಅಲ್ಲೇ'' ಅಂದರೆ?

**ಸೇವಕ :** ಕಡಿದಲ್ಲೇ ಇದೆ ಪ್ರಭು.

**ರಾಜ :** ಯಾಕೆ? ಏನಾಯಿತು? ಅದನ್ಯಾಕೆ ತರಲಿಲ್ಲ?

**ಸೇವಕ :** ನಾವು ತರಲಿಕ್ಕೆ ಎಲ್ಲಾ ಪ್ರಯತ್ನವನ್ನೂ ಮಾಡಿದೆವು, ಪ್ರಭು. ಆದರೆ,

**ವಿದೂ :** ಅದು ಬರಲೇ ಇಲ್ಲ.

**ಸೇವಕ :** ನಾವು ಎಷ್ಟು ಪ್ರಯತ್ನ ಮಾಡಿದರೂ ಅದು ಒಂದು ಅಂಗುಲವೂ ಅಲುಗಲಿಲ್ಲ.

**ರಾಜ :** ಕುದುರೆಗಳನ್ನು ಕಟ್ಟಿ ಎಳೀಬೇಕಿತ್ತು.

**ಸೇವಕ :** ಕುದುರೆ ಆಯಿತು, ಆನೆ ಆಯಿತು, ಆದರೆ...

**ವಿದೂ :** ಅದಕ್ಕೆ ಈಗ ಇರೋದು ಒಂದೇ ಒಂದು ಪರಿಹಾರ ಪ್ರಭುಗಳೇ.

**ರಾಜ :** (ಉತ್ಸಾಹದಿಂದ) ಹೇಳಿ, ವಿದೂಷಕರೆ, ಏನದು?

**ವಿದೂ :** ಅರಮನೆಯನ್ನು ಅಲ್ಲೇ ಕಟ್ಟೋದು! (ಎಲ್ಲರೂ ನಗುತ್ತಾರೆ; ರಾಜ ನಗುವುದಿಲ್ಲ)

**ರಾಜ :** ವಿದೂಷಕರೆ, ಹಾಸ್ಯಕ್ಕೂ ಒಂದು ಸಮಯ ಅನ್ನೋದು ಇಲ್ಲವೇ?

**ವಿದೂ :** ಪ್ರಭುಗಳೇ, ನನ್ನ ಪ್ರಕಾರ, ಇದು ಹಾಸ್ಯಕ್ಕೆ ಸರಿಯಾದ ಸಮಯ.

**ರಾಜ :** ಸಾಕು, ಬಾಯಿ ಮುಚ್ಚಿ! ಆಚಾರ್ಯರೇ ನೀವೇನೆನ್ನುತ್ತೀರಿ?

**ಆಚಾರಿ :** ಪ್ರಭುಗಳೆ, ನಿಮ್ಮ ಮನಸ್ಸನ್ನು ಬದಲಿಸುವುದಾದರೆ...

**ರಾಜ :** ಇಲ್ಲ, ದೇವದಾರು ಮರದ ಬದಲಾಗಿ ಇನ್ನಾವ ಮರವೂ ಆಗದು.

**ಆಚಾರಿ :** ಹಾಗಾದರೆ, ನಮ್ಮ ನಗರದ ಹೊರಗೆ, ಒಂದು ದೊಡ್ಡ ದೇವದಾರು ಮರವಿದೆ.

**ಸೇವಕ :** ಅದು ದೊಡ್ಡದೇನೋ ಹೌದು, ಆದರೆ, ದೈತ್ಯಾಕಾರದ್ದಲ್ಲ– ಅಷ್ಟೆ.

**ರಾಜ :** ಆಗಲಿ, ಆ ಮರವನ್ನೇ ಕಡಿದು ತನ್ನಿ.

(ರಂಗದ ಮೇಲೆ ದೇವದಾರು ಮರವಿದೆ; ಅದಕ್ಕೆ ಜನರು ಪೂಜೆ ಮಾಡುತ್ತಿದ್ದಾರೆ; ಸುಶ್ರಾವ್ಯವಾಗಿ, ಮಂತ್ರಘೋಷದ ಹಾಗೆ ಹಿನ್ನೆಲೆಯಲ್ಲಿ–)

*ದೇವ-ದೇವರು। ದೇವದಾರು॥*
*ದೇವರು। ಅದು-ಯಾರು। ದೇವದಾರು॥*
*ಯಾರು। ಅದು-ಯಾರು। ದೇವರದು॥*
*ಯಾರದು। ಅದು-ಯಾರದು। ದೇವರದು॥*
*ದೇವ-ದೇವರು। ದೇವದಾರು॥*

(ಅಷ್ಟರಲ್ಲಿ, ರಾಜನ ಸೇವಕರು ಅಲ್ಲಿಗೆ ಬಂದಿದ್ದಾರೆ; ಮರವನ್ನು ಕಡಿಯಲು ಎಲ್ಲಾ ಸಿದ್ಧತೆ ಮಾಡಿಕೊಳ್ಳುತ್ತಿದ್ದಾರೆ.)

**ಒಬ್ಬ:** ಅಯ್ಯೋ! ಇದೇನು ಮಾಡ್ತಾ ಇದ್ದೀರಿ? ಇದೇನಿದು?

**ವಿದೂ :** ಯಾಕೆ ಕಾಣತಾ ಇಲ್ಲವಾ? ಇದಕ್ಕೆ ನಮ್ಮ ಕಡೆ 'ಕೊಡಲಿ' ಅಂತಾರೆ.

**ಮತ್ತೊಬ್ಬ:** ಇದಕ್ಕೆ ಕತ್ತಿ ಅಂತಾರೆ.

**ಸೇವಕ :** ಈ ಮರವನ್ನು ಕಡೀಬೇಕಂತ ರಾಜಾಜ್ಞೆ ಯಾಗಿದೆ. ಬೇಗ ನಿಮ್ಮ ಪೂಜೆ ಮುಗಿಸಿ.

**ಒಬ್ಬ:** ಇಲ್ಲ ನಾವು ಬಿಡೋದಿಲ್ಲ; ಇದು ದೇವರ ಮರ ; ನಾವು ನೂರಾರು ವರ್ಷಗಳಿಂದ –

**ಸೇವಕ :** ನೋಡಪ್ಪ, ನೀನು ಏನು ಹೇಳೋದಿದ್ದರೂ ರಾಜರಿಗೆ ಹೇಳ್ಕೊ.

**ಮತ್ತೊಬ್ಬ:** ನಮ್ಮ ಪ್ರಾಣ ಹೋದರೂ ನಾವು ಇದನ್ನು

ಕಡೀಲಿಕ್ಕೆ ಬಿಡೋದಿಲ್ಲ.

**ಒಬ್ಬ** : ನೋಡಿ, ಹೀಗೆ ಹಠ ಮಾಡಿದರೆ ಹೇಗೆ ? ನಾವು ರಾಜಾಜ್ಞೆಯನ್ನು ಮೀರೋಹಾಗಿಲ್ಲ.

**ವಿದೂ** : ನಾವು ಈ ಮರ ಕಡೀದಿದ್ದರೆ, ರಾಜರು ನಮ್ಮ ತಲೆ ಕಡೀತಾರೆ.

**ಒಬ್ಬ** : ಆಗಲಿ, ಮೊದಲು ನಮ್ಮ ತಲೆಯನ್ನು ಕಡೀರಿ; ಆಮೇಲೆ ಈ ಮರ ಕಡೀರಿ.

(ಜನ ಮರದ ಸುತ್ತ ತಡೆದು ನಿಲ್ಲುತ್ತಾರೆ. ಸೇವಕರು)

**ಒಬ್ಬ** : ಸರಿ, ಬನ್ನಿಯಪ್ಪ, ಅರಸರಿಗೆ ಹೋಗಿ ಹೇಳೋಣ; ಇನ್ನು ಅರಸರುಂಟು-ಇವರುಂಟು.

(ರಾಜನ ಸೇವಕರು ಅಸಹಾಯಕರಾಗಿ ಹಿಂದಿರುಗುತ್ತಾರೆ. ರಾಜನ ಅರಮನೆಯ ಮುಂದೆ ಬಂದು ನಿಲ್ಲುತ್ತಾರೆ. ರಾಜನು ಅಧ್ಯಯನದಲ್ಲಿದ್ದಾನೆ; ಆಮೇಲೆ, ಬಳಲಿದವನಂತೆ ಪಲ್ಲಂಗದ ಮೇಲೆ ಒರಗಿ, ಮಲಗುತ್ತಾನೆ; ಸ್ವಲ್ಪ ಹೊತ್ತಿನಲ್ಲಿ, ವನದೇವತೆ ಕಾಣಿಸಿಕೊಳ್ಳುತ್ತಾಳೆ.)

**ದೇವತೆ** : ಗೌರೀಶ ವರ್ಮ ! ಗೌರೀಶ !

**ರಾಜ** : (ನಿದ್ದೆಯ ಗುಂಗಿನಲ್ಲಿದ್ದಾನೆ) ಯಾರದು ? ನನ್ನ ನಿದ್ದೆಯನ್ನು ಕೆಡಿಸಿದವರು ?

**ದೇವತೆ** : ನಾನು, ವನದೇವತೆ.

**ರಾಜ** : ಓಹೋ ! ವನದೇವತೆ ! ತಾಯಿ, ನೀನು ಬಂದ ಕಾರಣ ತಿಳಿಯಿತು. ಆದರೆ, ನಾನು ಆ ಮರವನ್ನು ಕಡಿಯಲೇಬೇಕು. ನೀನು ಬೇರೆ ಮರವನ್ನು ಹೋಗಿ ಸೇರಿಕೋ.

**ದೇವತೆ** : ನಾನು, ಬೇರೆ ಮರವನ್ನು ಹೋಗಿ ಸೇರಿಕೊಳ್ಳಬಲ್ಲೆ; ಆದರೆ, ಇಲ್ಲಿ, ನಿನ್ನ ಪ್ರಜೆಗಳ ನಂಬಿಕೆಯ ಪ್ರಶ್ನೆಯೂ ಅಡಗಿದೆ.

**ರಾಜ** : ಅವರಿಗೆ ತಿಳಿಸಿದರಾಯಿತು – ದೇವರ ಮರ ಬದಲಾಗಿದೆ – ಎಂದು.

**ದೇವತೆ** : ಇದು, ಅರಸನು ಆಡುವ ಮಾತಲ್ಲ; ಬದಲಾದ ಮರಕ್ಕೂ ಇದೇ ಗತಿ ಬರುವುದಿಲ್ಲವೆಂಬುದೇನು ಖಾತ್ರಿ ?! ಹಾಗೇ, ಅರಸನೇ ಮರಗಳನ್ನು ಕಡಿದರೆ, ಸಾಮಾನ್ಯ ಪ್ರಜೆಗಳು ಬಿಟ್ಟಾರೆಯೇ ? ಹೀಗಾದರೆ, ಕಾಡಿನ ಗತಿ ? ಇಲ್ಲಿಯ ಪ್ರಾಣಿ-ಪಕ್ಷಿಗಳ ಪಾಡು ?

**ರಾಜ** : ನನಗೆ ಚರ್ಚೆ ಬೇಕಿಲ್ಲ; ಆ ದೇವದಾರು ಮರವನ್ನು ನನ್ನ ಸೇವಕರು ನಾಳೆ ಬೆಳಿಗ್ಗೆ ಕಡಿದೇ ಕಡಿಯುತ್ತಾರೆ – ಅಷ್ಟೆ.

**ದೇವತೆ** : ರಾಜ, ನೀನು ನಿನ್ನ ಮನಸ್ಸನ್ನು ಬದಲಿಸು; ನೂರಾರು ವರ್ಷಗಳಿಂದ ಈ ದೇಶದ ಪ್ರಜೆಗಳು ಈ ಮರವನ್ನು ಪೂಜಿಸುತ್ತಾ ಬಂದಿದ್ದಾರೆ; ನಿನ್ನ ನಿರ್ಧಾರದಿಂದ ಅವರ ಮನಸ್ಸಿಗೆ ಖಂಡಿತವಾಗಿಯೂ ನೋವಾಗುತ್ತದೆ. ಯೋಚಿಸು.

**ರಾಜ** : ಯೋಚಿಸುವುದಕ್ಕೆ ಇಲ್ಲಿ ಏನೂ ಇಲ್ಲ; ನನಗೊಂದು ಭವ್ಯ ಅರಮನೆ ಬೇಕು – ಅದಕ್ಕೆ ದೇವದಾರು ಮರವೇ ಬೇಕು.

**ದೇವತೆ** : ಅರಸ, ದಯಮಾಡಿ ಇನ್ನೊಮ್ಮೆ ಯೋಚಿಸು.

**ರಾಜ** : ಸಾಧ್ಯವಿಲ್ಲ! ನನ್ನ ನಿರ್ಧಾರದಲ್ಲಿ ರವಷ್ಟೂ ಬದಲಿಲ್ಲ. ನೀನು ಹೋಗಬಹುದು.

**ದೇವತೆ** : (ಮೊಣಕಾಲೂರಿದ್ದಾಳೆ; ಆದರೆ ರಾಜ ನೋಡುವುದಿಲ್ಲ) ಅರಸರೇ,

**ರಾಜ** : (ಸಿಟ್ಟಿನಿಂದ) ಸಾಧ್ಯವಿಲ್ಲ! ಸಾಧ್ಯವಿಲ್ಲ!! ಸಾಧ್ಯವಿಲ್ಲ!!!

**ದೇವತೆ** : ಅರಸರೇ, ಹಾಗಾದರೆ, ನನ್ನದೊಂದು ಕೋರಿಕೆ.

**ರಾಜ** : ಅದೇನು ಹೇಳು.

**ದೇವತೆ** : (ಎದ್ದು ನಿಂತು) ನನ್ನ ಮರವನ್ನು ಕಡಿಯಲು ನನ್ನ ಒಪ್ಪಿಗೆ ಇದೆ !

**ರಾಜ** : ಸರಿ ಹಾಗಾದರೆ – ಇದರಲ್ಲಿ ಕೋರಿಕೆ ಏನಿದೆ ?

**ದೇವತೆ** : ಆದರೆ, ಕಡಿಯುವಾಗ ಮರದ ಬುಡಕ್ಕೆ ಕೊಡಲಿಯನ್ನು ಹಾಕಬಾರದು.

**ರಾಜ** : ಮರವನ್ನು ಕಡಿಯುವುದೇ ಹಾಗಲ್ಲವೇ ?

**ದೇವತೆ** : ಇರಬಹುದು; ಆದರೆ, ನನ್ನ ಮರವನ್ನು ಕಡಿಯುವಾಗ, ಮೊದಲು ರೆಂಬೆಗಳನ್ನು ಒಂದೊಂದಾಗಿ ಕೊಚ್ಚಿ ಕಡಿಯಲಿ; ಆಮೇಲೆ, ಕಾಂಡವನ್ನು ನಾಲ್ಕಾರು ತುಂಡುಗಳನ್ನಾಗಿ ಮಾಡಿ ಕೆಡವಲಿ; ನನ್ನ ಅಭ್ಯಂತರ ಇಲ್ಲ.



**ರಾಜ** : ಅರೆ ! ಇದೆಂಥ ವಿಚಿತ್ರ ಕೋರಿಕೆ ! ಅಂಥ ಚಿತ್ರಹಿಂಸೆಯನ್ನು ಪಟ್ಟು ಸಾಯುವ ಬಯಕೆಯಾದರೂ ಯಾಕೆ ?

**ದೇವತೆ** : ನನಗೆ ನೋವಿನ ಭಯವಿಲ್ಲ; ಆದರೆ, ನನ್ನ ಮಕ್ಕಳಿಗೆ ಆಗುವ ನೋವಿನ ಬಗ್ಗೆ ಕನಿಕರವಿದೆ. ನನ್ನ ಮರದ ಸುತ್ತ, ನನ್ನ ಮಕ್ಕಳಾದ, ಸಣ್ಣ-ಪುಟ್ಟ ದೇವದಾರು ಮರಗಳಿವೆ. ನಿನ್ನ ಸೇವಕರು ಆ ದೊಡ್ಡ ಮರವನ್ನು ಒಮ್ಮೆಲೇ ಕಡಿದರೆ, ಕೆಳಗೆ ಬೆಳೆದುಕೊಂಡಿರುವ ಆ ಮರಿ ಗಿಡಗಳೆಲ್ಲಾ ಅಪ್ಪಚ್ಚಿಯಾಗಿ ನನ್ನ ಜೊತೆಗೇ ನಾಶವಾಗಿ ಬಿಡುತ್ತವೆ. ಅವುಗಳನ್ನಾದರೂ ಉಳಿಸಿಕೊಡಬೇಕೆಂದು ನನ್ನ ಕೋರಿಕೆ. ದಯವಿಟ್ಟು ನಡೆಸಿಕೊಡು.

**ರಾಜ** : (ಒಮ್ಮೆಲೇ ದೇವತೆಯ ಕಾಲಿಗೆ ಬೀಳುತ್ತಾನೆ) ಕ್ಷಮಿಸು ತಾಯಿ ! ನಾನು ಮೂರ್ಖ ! ಹೃದಯಹೀನ ! ನಿನ್ನಂಥ ಮರಕ್ಕೆ ಇರುವ ಹೃದಯವಂತಿಕೆ ನನ್ನಂಥ ರಾಜನಿಗೆ ಇಲ್ಲದೇ ಹೋಯಿತಲ್ಲ! ಕ್ಷಮಿಸು, ನಾನು ಆ ಮರವನ್ನು, ಅಷ್ಟೇ ಏಕೆ ಯಾವುದೇ ಮರವನ್ನೂ ಕಡಿದು ನನ್ನ ಅರಮನೆಯನ್ನು ಕಟ್ಟುವುದಿಲ್ಲ! ಇಗೋ ! ನಿನಗೆ ಭಾಷೆಯನ್ನು ಕೊಡುತ್ತಿದ್ದೇನೆ !

**ದೇವತೆ** : ನಿನಗೂ ನಿನ್ನ ದೇಶಕ್ಕೂ ಶುಭವಾಗಲಿ. (ದೇವತೆ ಹೋಗುತ್ತಾಳೆ; ಅಷ್ಟರಲ್ಲಿ ಪ್ರಜೆಗಳೆಲ್ಲಾ ಅರಸನ ಎದುರು ಬಂದು ನಿಂತಿದ್ದಾರೆ.)

**ರಾಜ** : ಪ್ರಜೆಗಳೇ, ನಾನು ನನ್ನ ನಿರ್ಧಾರವನ್ನು ಬದಲಿಸಿದ್ದೇನೆ; ದೇವದಾರು ಮರದಿಂದ ನನ್ನ ಅರಮನೆಯನ್ನು ಕಟ್ಟಿಸುವ ನನ್ನ ನಿರ್ಧಾರವನ್ನು ಬದಲಿಸಿದ್ದೇನೆ ! ನನ್ನ ಅರಮನೆ, ಕಲ್ಲು ಹಾಗೂ ಗಾರೆಗಳಿಂದ ನಿರ್ಮಾಣವಾಗಲಿ. ಹಾಗೆಯೇ, ಈ ಕೂಡಲೇ ಒಂದು ಶಾಸನವನ್ನು ಹೊರಡಿಸುತ್ತಿದ್ದೇನೆ. – ಇನ್ನು ಮುಂದೆ, ನನ್ನ ಇಡೀ ದೇಶದಲ್ಲಿ, ಯಾರೂ ದೇವದಾರು ಮರಗಳನ್ನು ಕಡಿಯಬಾರದು; ರಾಜಾಜ್ಞೆಯನ್ನು ಉಲ್ಲಂಘಿಸಿ ಮರವನ್ನು ಕಡಿದವರಿಗೆ ಮರಣದಂಡನೆಯನ್ನು ವಿಧಿಸಲಾಗುವುದು !

**ವಿದೂಷಕ** : ಶಿವಾಚಾರ್ಯರೇ, ನೀವು ಇನ್ನು ಮರ ಕಡಿಯೋದು ಬಿಟ್ಟು ಕಲ್ಲು ಕಡೀಬಹುದು. (ಎಲ್ಲರೂ ನಗುತ್ತಾರೆ) ಈ ಪ್ರಕಾರವಾಗಿ ನಮ್ಮ 'ದೇವದಾರು' ಎಂಬ ನಾಟಕವು –

**ಎಲ್ಲರೂ** : ಮಂಗಳದಾಯಕವಾಗಿ ಮುಕ್ತಾಯವಾಯಿತು !

(ಎಲ್ಲರೂ ನಮಿಸಿ ಹೋಗುತ್ತಾರೆ)



ಲಕ್ಷ್ಮೀನಾರಾಯಣ ಎಚ್. ಎ.
ನಂ. ೮೨, 'ಅಲಕ', ತ್ಯಾಗರಾಜ ರಸ್ತೆ, ಬೆಟ್ಟಮಕ್ಕಿ
ಸೀಬಿನ ಕೆರೆ ಅಂಚೆ
ತೀರ್ಥಹಳ್ಳಿ - ೫೭೭ ೪೩೨




# ಅಮೆರಿಕಾದ ನ್ಯೂಕ್ಲಿಯರ್ ರಾಜಕಾರಣ

ಪ್ರಪಂಚದಲ್ಲಿ ಪರಮಾಣು ಬಾಂಬು ತಯಾರಿಸಿದ ಮೊದಲ ದೇಶ ಅಮೆರಿಕಾ. ಅದನ್ನು ಅಮಾನುಷ ರೀತಿಯಲ್ಲಿ ಪ್ರಯೋಗಿಸಿ, ಅದರ ಭಯಾನಕ ಪರಿಣಾಮಗಳನ್ನು ಜಗತ್ತಿನ ಜನರಿಗೆ ಪರಿಚಯಿಸಿದ ಮೊದಲ ದೇಶ ಕೂಡ ಅಮೆರಿಕಾ. ಆರು ದಶಕಗಳ ಹಿಂದೆ ದುರ್ಘಟನೆ ಸಂಭವಿಸಿದಾಗ ಈ ಮಾರಕಾಸ್ತ್ರವನ್ನು ಹೊಂದಿದ್ದ ಏಕೈಕ ದೇಶ ಅಮೆರಿಕಾ. ಆಗಲೇ ಈ ನೂತನ ಅಸ್ತ್ರದ ಬಲದಿಂದ ಅದು ತನ್ನ ಯಜಮಾನಿಕೆ ತೋರಲು ಹೊರಟಿತ್ತು. ಆದರೆ ಈ ಏಕಸ್ವಾಮ್ಯ ಹೆಚ್ಚುಕಾಲ ಇರಲಿಲ್ಲ. ಅಂದಿನ ಸೋವಿಯೆತ್ ಒಕ್ಕೂಟ ತಾನೂ ಬಾಂಬು ತಯಾರಿಸಿ ಸವಾಲೊಡ್ಡಿತು. ವರ್ಷಗಳು ಉರುಳಿದಂತೆ ಈ ಎರಡೂ ರಾಷ್ಟ್ರಗಳು ಶಸ್ತ್ರಾಸ್ತ್ರ ಪೈಪೋಟಿಯಲ್ಲಿ ನಿರತವಾಗಿ ಹೆಚ್ಚು ಹೆಚ್ಚು ಮಾರಕವಾದ, ಇಡೀ ಜಗತ್ತನ್ನು ನಿರ್ನಾಮಗೊಳಿಸಬಲ್ಲ ಸಾಮರ್ಥ್ಯವಿದ್ದ ನ್ಯೂಕ್ಲಿಯರ್ ಅಸ್ತ್ರಗಳನ್ನು ತಯಾರಿಸಿ ಈಗಲೂ ಪೇರಿಸಿಟ್ಟುಕೊಂಡಿರುವುದು ಇತಿಹಾಸ. ಹಾಗಿದ್ದರೂ ಅಮೆರಿಕಾ ಈ ಕ್ಷೇತ್ರದಲ್ಲಿ ತನ್ನ ಯಜಮಾನಿಕೆಯನ್ನು ತೋರಿಸುತ್ತಲೇ ಬಂದಿದೆ. ಅಭಿವೃದ್ಧಿ ಹೊಂದಿದ ಕೆಲವೇ ರಾಷ್ಟ್ರಗಳಿಗೆ ಸೀಮಿತವಾಗಿದ್ದ ನ್ಯೂಕ್ಲಿಯರ್ ತಂತ್ರಜ್ಞಾನ ಇತರ ಯಾವ ದೇಶಗಳಿಗೂ ಲಭಿಸದಂತೆ ನೋಡಿಕೊಳ್ಳಲು ಅದು ವಿಶ್ವಸಂಸ್ಥೆಯ ಆಶ್ರಯದಲ್ಲಿ ಅಣ್ವಸ್ತ್ರ ಪ್ರಸರಣ ನಿರೋಧಕ ಒಪ್ಪಂದವೊಂದನ್ನು ರೂಪಿಸಿ ಪ್ರಪಂಚದ ಎಲ್ಲ ರಾಷ್ಟ್ರಗಳ ಮೇಲೂ ಹೇರಿತು. ಮೊದಲಿನಿಂದಲೂ ಪರಮಾಣು ಅಸ್ತ್ರಗಳ ಸಂಪೂರ್ಣ ನಿರ್ಮೂಲನದ ತಾತ್ವಿಕ ನಿಲುವನ್ನು ತಳೆದ ಭಾರತ ಮತ್ತು ಒಂದೆರಡು ರಾಷ್ಟ್ರಗಳು ಈ ಒಪ್ಪಂದಕ್ಕೆ ಸಹಿ ಹಾಕಲಿಲ್ಲ.

ಏನೇ ಮಾಡಿದರೂ ನ್ಯೂಕ್ಲಿಯರ್ ತಂತ್ರಜ್ಞಾನದ ಸೋರಿಕೆ ಮಾತ್ರ ನಿಲ್ಲಲಿಲ್ಲ. ಕಾಲ ಕ್ರಮೇಣ ಭಾರತ, ಪಾಕಿಸ್ತಾನ, ಇಸ್ರೇಲ್, ಉತ್ತರ ಕೊರಿಯಾ, ಇರಾನ್ ಮೊದಲಾದ ದೇಶಗಳೂ ನ್ಯೂಕ್ಲಿಯರ್ ಶಸ್ತ್ರಾಸ್ತ್ರ ತಯಾರಿಕೆ ಸಾಮರ್ಥ್ಯ ಪಡೆದುಕೊಂಡಿದ್ದು ಕೆಲವೇ ರಾಷ್ಟ್ರಗಳ ಗುತ್ತೇದಾರಿಯನ್ನು ಮುರಿದಂತಾಗಿದೆ. ಇಂದು ವ್ಯವಧಾನ, ಅಗತ್ಯವಾದ ಸಂಪನ್ಮೂಲ ಹೊಂದಿರುವ ಯಾವುದೇ ದೇಶವಾದರೂ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗ ಬಹುದಾದ ಪರಿಸ್ಥಿತಿ ಬಂದಿದೆ. ಇದು ನಿಜವಾಗಿ ಆತಂಕಕಾರಿ ಬೆಳವಣಿಗೆ. ಇದಕ್ಕಿರುವ ಏಕೈಕ ಪರಿಹಾರಮಾರ್ಗ ಎಲ್ಲ ನ್ಯೂಕ್ಲಿಯರ್ ಅಸ್ತ್ರಗಳ ನಿಷೇಧ, ಅವುಗಳ ಸಂಪೂರ್ಣ ನಾಶ. ಈ ಪರಿಹಾರ ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನು ಹೊಂದಿರುವ ದೇಶಗಳಿಗೆ ಬೇಕಿಲ್ಲ. ಮುಖ್ಯವಾಗಿ, ಅಮೆರಿಕಾ ಈ ಪ್ರಸ್ತಾಪಕ್ಕೆ ಮೊದಲಿನಿಂದಲೂ ವಿರೋಧವಿದೆ. ಅದರಿಂದಲೇ ಅದು ಯಜಮಾನಿಕೆವಹಿಸಿಕೊಂಡು, ಇತರ ದೇಶಗಳ ಮೇಲೆ ಒತ್ತಡ ತರುತ್ತಿದೆ.

ನ್ಯೂಕ್ಲಿಯರ್ ರಾಜಕಾರಣದಲ್ಲಿ ಅಮೆರಿಕಾ ಇತರ ಎಲ್ಲ ವ್ಯವಹಾರಗಳಂತೆಯೇ ದ್ವಿಮುಖ ಧೋರಣೆ ಅನುಸರಿಸುತ್ತಿದೆ. ಅದನ್ನು ಜಗತ್ತಿನ ಮೇಲೆ ತನ್ನ ಅಧಿನಾಯಕತ್ವ ಸ್ಥಾಪನೆಯ ಧೋರಣೆಗೆ ಲಗತ್ತಿಸಿದೆ. ಹೊಸದಾಗಿ ನ್ಯೂಕ್ಲಿಯರ್ ತಂತ್ರಜ್ಞಾನ ಪ್ರವೇಶಿಸಿರುವ ದೇಶಗಳ ಮೇಲೆ ಬಲಪ್ರಯೋಗದ ಬೆದರಿಕೆಯನ್ನೂ ಒಳಗೊಂಡಂತೆ, ಎಲ್ಲ ರೀತಿಯ ಒತ್ತಡಗಳನ್ನೂ ತಂದು, ಆ ದೇಶಗಳ ನ್ಯೂಕ್ಲಿಯರ್ ಕ್ಷೇತ್ರದ ಮೇಲೆ ನಿಯಂತ್ರಣ ಸ್ಥಾಪಿಸಲು ಹವಣಿಸಿದೆ. ಎಂದಿನಂತೆ ಅಮೆರಿಕಾಗೆ ತನ್ನ ಆಪ್ತವಲಯದಲ್ಲಿರುವ, ಇಸ್ರೇಲ್, ಪಾಕಿಸ್ತಾನಗಳು ನ್ಯೂಕ್ಲಿಯರ್ ಪ್ರಾಬಲ್ಯ ಹೊಂದಿದ್ದರೂ ಚಿಂತೆಯಿಲ್ಲ. ಎರಡೂ ಅದರ ಆಶ್ರಿತ ರಾಷ್ಟ್ರಗಳಾಗಿವೆ. ಭಾರತದ ನ್ಯೂಕ್ಲಿಯರ್ ಅಸ್ತ್ರ ಪ್ರಯೋಗದಿಂದ ಉದ್ವಿಗ್ನಗೊಂಡ ಅಮೆರಿಕಾ ಅದರ ಮೇಲೆ ದಿಗ್ಬಂಧನಗಳನ್ನು ಹೇರಿತು. ನ್ಯೂಕ್ಲಿಯರ್ ವಿದ್ಯುತ್ ಸ್ಥಾವರಕ್ಕೆ ಒಪ್ಪಿಕೊಂಡಿದ್ದ ಇಂಧನ ಸರಬರಾಜನ್ನು ಏಕಪಕ್ಷೀಯವಾಗಿ ನಿಲ್ಲಿಸಿತು. ಈಗ ಅಮೆರಿಕಾ ಭಾರತದ ನ್ಯೂಕ್ಲಿಯರ್ ಕಾರ್ಯಕ್ರಮದ ಮೇಲೆ ನಿಯಂತ್ರಣ ಸಾಧಿಸಲು ಷಡ್ಯಂತ್ರ ರೂಪಿಸಿದೆ. ಭಾರತಕ್ಕೆ ವಿನಾಯಿತಿ ಕೊಡುವ ಆಮಿಷ ಒಡ್ಡಿ ನಾಗರಿಕ ನ್ಯೂಕ್ಲಿಯರ್ ಸೌಕರ್ಯಗಳಿಗೆ ಅಗತ್ಯವಾದ ಇಂಧನ ಪೂರೈಕೆಯ ಭರವಸೆ ನೀಡಿ ಹಿಂಬಾಗಿಲಿನಿಂದ ಭಾರತದ ನ್ಯೂಕ್ಲಿಯರ್ ಕ್ಷೇತ್ರದ ಮೇಲೆ, ಹಿಡಿತ ಸಾಧಿಸುವ ಉದ್ದೇಶದಿಂದ ಒಪ್ಪಂದವೊಂದನ್ನು ಹೊರಿಸುತ್ತಿದೆ. ಕಳೆದ ವರ್ಷ ಭಾರತದ ಪ್ರಧಾನಿ ಮನಮೋಹನ ಸಿಂಗ್ ಮತ್ತು ಅಮೆರಿಕಾ ಅಧ್ಯಕ್ಷ ಜಾರ್ಜ್ ಬುಷ್ ಇಬ್ಬರ ಪರಸ್ಪರ ಭೇಟಿಯ ಸಂದರ್ಭದಲ್ಲಿ ಮಾಡಿಕೊಂಡ ಒಪ್ಪಂದಗಳೇ ಅದಕ್ಕೆ ಆಧಾರ.

ಇವು ಒಂದು ಬಗೆಯಾದರೆ, ಉತ್ತರ ಕೊರಿಯ ಮತ್ತು ಇರಾನ್ ಅಮೆರಿಕಾದ ಕಕ್ಷೆಯಿಂದ ದೂರವಿರುವ, ಅಧ್ಯಕ್ಷ ಬುಷ್ ದೃಷ್ಟಿಯಲ್ಲಿ ದುಷ್ಟ ರಾಷ್ಟ್ರಗಳ ಪಟ್ಟಿಯಲ್ಲಿರುವ ದೇಶಗಳು. ಅಮೆರಿಕಾದ ಕೆಂಗಣ್ಣು ಇವುಗಳ ಮೇಲೆ. ಉತ್ತರ ಕೊರಿಯ ನ್ಯೂಕ್ಲಿಯರ್ ಅಸ್ತ್ರವನ್ನು ಈಚೆಗೆ ಪ್ರಯೋಗ ಮಾಡಿದ ದೇಶ. ಇರಾನ್ ನ್ಯೂಕ್ಲಿಯರ್ ಅಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎಂಬುದು ಅಮೆರಿಕಾದ ಆರೋಪ. ಈ ಎರಡು ದೇಶಗಳೂ ಅಣ್ವಸ್ತ್ರ ಪ್ರಸರಣ ನಿಷೇಧ ಒಪ್ಪಂದಕ್ಕೆ ಸಹಿ ಹಾಕಿರುವ ದೇಶಗಳು. ಎರಡೂ ದೇಶಗಳನ್ನು ಮೇಲೆ ಹಾಕಿಕೊಳ್ಳುವುದು ಅಪಾಯಕರವಾದ್ದರಿಂದ ಅಮೆರಿಕಾ ಉತ್ತರ ಕೊರಿಯಾದೊಂದಿಗೆ ಒಡಂಬಡಿಕೆ ಮಾಡಿಕೊಳ್ಳುವುದರಲ್ಲಿ ಸಫಲಗೊಂಡಿದೆ. ಎರಡು ಕೊರಿಯಾಗಳು, ಜಪಾನ್, ರಷ್ಯ, ಚೀಣ, ಅಮೆರಿಕಾ ಸೇರಿ ಉತ್ತರ ಕೊರಿಯಾದ ನ್ಯೂಕ್ಲಿಯರ್ ಕಾರ್ಯಕ್ರಮವನ್ನು ನಿಯಂತ್ರಿಸುವುದಕ್ಕೆ ಒಡಂಬಡಿಕೆಯೊಂದನ್ನು ರೂಪಿಸಿವೆ. ಇದು ಅಮೆರಿಕಾಗೆ ಇರಾನ್ ಅನ್ನು ಪ್ರತ್ಯೇಕಿಸಲು ಅವಕಾಶ ಮಾಡಿಕೊಟ್ಟಿದೆ.

ಇರಾನಿನ ನ್ಯೂಕ್ಲಿಯರ್ ಕ್ಷೇತ್ರದ ಮೇಲೆ ನಿಯಂತ್ರಣ ಸ್ಥಾಪಿಸುವುದಕ್ಕಿಂತ ಮುಖ್ಯವಾಗಿ ಅಮೆರಿಕಾಗೆ ಆ ದೇಶವನ್ನು ಆಕ್ರಮಿಸಿಕೊಂಡು ಅದರ ತೈಲೋದ್ಯಮದ ಮೇಲೆ ಸ್ವಾಮ್ಯ ಸ್ಥಾಪಿಸುವುದು ಮುಖ್ಯ. ಮಧ್ಯಪ್ರಾಚ್ಯದಲ್ಲಿ ತನ್ನ ಯಾಜಮಾನ್ಯವನ್ನು ಸ್ಥಾಪಿಸಲು ಇರಾಕಿನ ನಂತರ ಅಡ್ಡಿಯಾಗಿರುವುದು ಇರಾನ್. ಅದರಿಂದ ಅದನ್ನು ಆಕ್ರಮಿಸಿಕೊಳ್ಳಲು ಸನ್ನಾಹ. ಇರಾಕ್ ಮಾರಕಾಸ್ತ್ರಗಳನ್ನು, ರಾಸಾಯನಿಕ ಅಸ್ತ್ರಗಳನ್ನು ಹೊಂದಿದೆ ಎಂಬ ಸುಳ್ಳು ಆರೋಪ ಹೊರಿಸಿ ದಾಳಿ ನಡೆಸಿದಂತೆಯೇ, ಇರಾನ್ ನ್ಯೂಕ್ಲಿಯರ್ ಅಸ್ತ್ರತಯಾರಿಕೆಯಲ್ಲಿ ತೊಡಗಿದೆ ಎಂಬ ಸುಳ್ಳು ಆಪಾದನೆಯನ್ನು ಅಮೆರಿಕಾ ಮಾಡುತ್ತಿದೆ. ಈಗಾಗಲೇ ಅಂತರರಾಷ್ಟ್ರೀಯ ಪರಮಾಣು ಆಯೋಗ ಹಾಗೂ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯನ್ನು ಬಳಸಿಕೊಂಡು ಇರಾನಿನ ಮೇಲೆ ದಿಗ್ಬಂಧನ ಹೇರುವುದರಲ್ಲೂ ಅಮೆರಿಕಾ ಸಫಲಗೊಂಡಿದೆ. ಅಮೆರಿಕಾದ ಈ ಸಂಚಿಗೆ ಭಾರತದ ಬೆಂಬಲ ಇದ್ದುದು ಶೋಚನೀಯ. ಅದು ಬೇರೆಯೇ ವಿಷಯ. ಈಗ ಅಮೆರಿಕಾ ಇರಾನಿನ ಮೇಲೆ ದಾಳಿ ನಡೆಸಲು ಎಲ್ಲ ಸಿದ್ಧತೆಯನ್ನು ನಡೆಸಿದೆ. ಇರಾನಿನ ತೀರ ಪ್ರದೇಶದ ಸಮೀಪದಲ್ಲಿ ಹೊಸ ಯುದ್ಧನೌಕೆಗಳನ್ನು ತಂದಿರಿಸಿದೆ. ಇರಾನಿನ ಮೇಲೆ ದುರಾಕ್ರಮಣ ನಡೆಸಲು ನ್ಯೂಕ್ಲಿಯರ್ ರಾಜಕಾರಣವನ್ನು ಅಮೆರಿಕಾ ಯಶಸ್ವಿಯಾಗಿ ಬಳಸುತ್ತಿದೆ.

## ಸರ್ವನಾಶದ ಅಂಚಿನಲ್ಲಿ ನಿಂತಿರುವ ಜಗತ್ತು

ನ್ಯೂಕ್ಲಿಯರ್ ಅಸ್ತ್ರಗಳ ದಾಸ್ತಾನಿನ ಮೇಲೆ ಕುಳಿತಿರುವ ಈ ಜಗತ್ತು ಯಾವ ಕ್ಷಣದಲ್ಲೇ ಆಗಲಿ ಧೂಳೀಪಟವಾಗುವ ಅನಿಶ್ಚಿತ ಸ್ಥಿತಿ ಮನುಕುಲದ ಮುಂದಿದೆ. ಅರವತ್ತು ವರ್ಷಗಳ ಹಿಂದೆ ಪರಮಾಣು ಅಸ್ತ್ರ ಅಸ್ತಿತ್ವಕ್ಕೆ ಬಂದಾಗಿನಿಂದಲೇ ಈ ವಿಪತ್ತು ಆವರಿಸಿಕೊಂಡಿತು. ಈ ಮಾರಕಾಸ್ತ್ರದ ಅಪಾಯವನ್ನು ಸಂಪೂರ್ಣವಾಗಿ ಗ್ರಹಿಸಿದ ವಿಜ್ಞಾನಿಗಳು ಜಗತ್ತಿಗೆ ಎಚ್ಚರಿಕೆ ನೀಡುತ್ತ ಬಂದಿದ್ದಾರೆ. ಆರು ದಶಕಗಳ ಹಿಂದೆ ೧೯೪೭ರಲ್ಲಿಯೇ ಸ್ಥಾಪನೆಗೊಂಡ 'ಪರಮಾಣು ವಿಜ್ಞಾನಿಗಳ ಬುಲೆಟಿನ್' ಸರ್ವನಾಶದ ಬಗ್ಗೆ ಎಚ್ಚರಿಸಲು 'ಪ್ರಳಯ ಗಡಿಯಾರ'ವೊಂದನ್ನು ಸ್ಥಾಪಿಸಿತು. ಇದನ್ನು ಸ್ಥಾಪಿಸಿದವರೂ ಕೂಡ ಪರಮಾಣು ಬಾಂಬು ತಯಾರಿಕೆಯಲ್ಲಿ ಭಾಗ ವಹಿಸಿದ ಷಿಕಾಗೋ ವಿಶ್ವವಿದ್ಯಾನಿಲಯದ ವಿಜ್ಞಾನಿಗಳೇ. ಈ ಗಡಿಯಾರ ಸ್ಥಾಪನೆಯಾದ ದಿನದಿಂದ ಹದಿನೆಂಟು ಸಲ ವಿಜ್ಞಾನಿಗಳು ಅಪಾಯದ ಮುಳ್ಳನ್ನು ಮುಂದಕ್ಕೆ ಸರಿಸಿದ್ದಾರೆ. ನ್ಯೂಕ್ಲಿಯರ್ ಯುದ್ಧದ ಅಪಾಯ ಹೆಚ್ಚಿದಾಗಲೆಲ್ಲ ಗಡಿಯಾರದ ಮುಳ್ಳನ್ನು ರಾತ್ರಿ ಹನ್ನೆರಡಕ್ಕೆ ಹೊಂದಿಸಿ ನಿಮಿಷ ನಿಮಿಷಗಳನ್ನು ಮುಂದೆ ಸರಿಸಿದ್ದಾರೆ. ಶೀತ ಯುದ್ಧಕಾಲದಲ್ಲಿ ಅಪಾಯ ಹೆಚ್ಚಾಗಿತ್ತು. ಪ್ರತಿಯೊಂದು ಸಂದರ್ಭದಲ್ಲೂ, ಪ್ರಪಂಚದಲ್ಲಿ ನ್ಯೂಕ್ಲಿಯರ್ ಅಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳ ಸಂಖ್ಯೆ ಬೆಳೆದಂತೆ, ಶಸ್ತ್ರಾಸ್ತ್ರ ಪೈಪೋಟಿ ಮುಗಿಲು ಮುಟ್ಟಿದಾಗ ಈ ಪ್ರಳಯ ಗಡಿಯಾರದ ಮುಳ್ಳು ಮುಂದಕ್ಕೆ ಸರಿಸಿ ವಿಜ್ಞಾನಿಗಳು ಎಚ್ಚರಿಕೆ ನೀಡಿದ್ದಾರೆ. ಶೀತಲಯುದ್ಧಾನಂತರದ ಕಾಲದಲ್ಲಿ ಶಸ್ತ್ರಾಸ್ತ್ರ ನಿಯಂತ್ರಣ ಒಪ್ಪಂದಗಳು ಅಮೆರಿಕಾದ ಏಕಪಕ್ಷೀಯ ನಿರ್ಧಾರಗಳಿಂದ ಮುರಿದುಬಿದ್ದಾಗ, ಸೆಪ್ಟೆಂಬರ್ ೧೧ರಂದು ಅಮೆರಿಕಾದ ಮೇಲೆ ಭಯೋತ್ಪಾದಕರು ದಾಳಿ ನಡೆಸಿದಾಗ, ಇರಾಕಿನ ಮೇಲೆ ಅಮೆರಿಕಾ ದುರಾಕ್ರಮಣ ನಡೆಸಿದಾಗ ಅಪಾಯದ ಕರೆಗಂಟೆ ಮೊಳಗಿತ್ತು. ಆದರೆ ಈ ಎಚ್ಚರಿಕೆಯ ಗಂಟೆ ನಮ್ಮ ಪತ್ರಿಕೆಗಳಿಗೆ, ಮಾಧ್ಯಮಗಳಿಗೆ ದೊಡ್ಡ ಸುದ್ದಿಯಾಗಲೇ ಇಲ್ಲ, ದೊಡ್ಡ ಸುದ್ದಿಯಾಗುವುದೂ ಇಲ್ಲ.

ಸಿನಿಮಾ ತಾರೆಯರ ವಿವಾಹ, ಕ್ರಿಕೆಟಿಗರ ದಾಖಲೆ, ರಾಜಕಾರಣಿಗಳ ಬುರುಡೆ ಮಾತುಗಳು ದೊಡ್ಡ ಸುದ್ದಿಯಾಗುವ ನಮ್ಮ ಮಾಧ್ಯಮಗಳಿಗೆ ''ಪ್ರಳಯದ ಗಂಟೆಯು'' ಮತ್ತಷ್ಟು ಅಪಾಯದ ಅಂಚಿಗೆ ಸರಿದದ್ದು ಸುದ್ದಿಯಾಗಲೇ ಇಲ್ಲ. ಜನವರಿ ೧೮ರಂದು ಪರಮಾಣು ವಿಜ್ಞಾನಿಗಳು ಅಪಾಯದ ಕರೆಗಂಟೆಯನ್ನು ಮಧ್ಯರಾತ್ರಿಗೆ ಏಳು ನಿಮಿಷದಿಂದ ಐದು ನಿಮಿಷಕ್ಕೆ ಇಳಿಸಿದರು. ಆದರೆ ಮಾಧ್ಯಮಗಳಾವುವೂ ಅದರ ಕಡೆಗೆ ಗಮನ ಸೆಳೆಯಲೇ ಇಲ್ಲ. ಈ ಅಪಾಯದ ಕರೆಗಂಟೆ ಮುಂದೆ ಸರಿಸಿರುವುದಕ್ಕೆ ಮೂಲಕಾರಣ ದಾಸ್ತಾನಿನಲ್ಲಿರುವ ೨೭,೦೦೦ ನ್ಯೂಕ್ಲಿಯರ್ ಅಸ್ತ್ರಗಳ ಪೈಕಿ, ೨೦೦೦ ಅಸ್ತ್ರಗಳು ಕೆಲವೇ ನಿಮಿಷಗಳಲ್ಲಿ ದಾಳಿ ನಡೆಸಲು ಸಜ್ಜಾಗಿ ನಿಂತಿರುವುದು ಮತ್ತು ಪ್ರಪಂಚದಲ್ಲಿ ವಾತಾವರಣದ ವ್ಯತ್ಯಯದಿಂದ ಉಂಟಾಗುತ್ತಿರುವ ಗಂಭೀರ ಪರಿಸ್ಥಿತಿ. ಈ ಎರಡು ಆತಂಕಗಳ ಕಡೆಗೆ ಗಮನ ಸೆಳೆಯುವುದೇ ವಿಜ್ಞಾನಿಗಳ ಉದ್ದೇಶ. ಆದರೆ ಅದು ಯಾರಿಗೂ ಬೇಡ !

**ಸೀಯಾರ್ಕೆ,** 'ಚೌಬೀನ', ೪೮೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೮೫

# ಹೇಗಿದ್ದೆ ನಾನು, ಹೀಗಾಗಿಬಿಟ್ಟೆ!

**ಟಿ.**ವಿ.ಯಲ್ಲಿ ತಮಿಳು ಹಾಸ್ಯಗಳ ತುಣುಕುಗಳನ್ನು ನೋಡುವುದೆಂದರೆ ನನಗೆ ತುಂಬಾ ಇಷ್ಟ. ಒಂದು ತುಣುಕಿನಲ್ಲಿ ಹಾಸ್ಯನಟ ವಿವೇಕ್ ಎನ್ನುವವನು, ''ಎಪ್ಪಡಿ ಇರಂದೇ ನಾ, ಇಪ್ಪಡಿ ಆಯಿಟೆ'' ಎಂಬ ಉದ್ಗಾರವನ್ನು ಹಲವಾರು ದನಿಯಲ್ಲಿ ಮತ್ತು ಭಂಗಿಯಲ್ಲಿ ಅಭಿನಯಿಸಿ ತೋರಿಸುತ್ತಾನೆ. ಕೊನೆಯಲ್ಲಿ ಅವನು ಬಗ್ಗಿ ಕುಗ್ಗಿ ಮೆಲುದನಿಯಲ್ಲಿ ದೈನ್ಯದಿಂದ ಉದ್ಗರಿಸುವುದು ಆಯ್ಕೆಯಾಗುತ್ತದೆ. ಅನಂತರ ಕೆಲವೇ ದಿನಗಳಲ್ಲಿ ಅವನನ್ನು ಕಂಡ ಬೀದಿಯ ಜನ ಹೆದರಿ ಅವನಿಂದ ದೂರವಾಗಿ ಓಡುತ್ತಾರೆ. ಹೀಗೇಕೆ ಎಂದು ಆಶ್ಚರ್ಯದಿಂದ ಮುಂದೆ ಸಾಗುವಾಗ ಒಂದು ಪೋಸ್ಟರ್ ಗೋಡೆಗೆ ಹಚ್ಚಿರುವುದು ಅವನ ಕಣ್ಣಿಗೆ ಬೀಳುತ್ತದೆ. ಅದರಲ್ಲಿ ಅವನ ಎರಡು ಚಿತ್ರಗಳಿರುತ್ತವೆ. ಒಂದು ಸುಂದರ ಚಿತ್ರ, ಇನ್ನೊಂದು ಅವನ ಅಸ್ಥಿಪಂಜರದ ಭೀಕರ ಚಿತ್ರ. ಏಯ್ಡ್ಸ್ ರೋಗ ಬಂದರೆ ಹೇಗಿದ್ದವನು ಹೇಗಾಗಿಬಿಡುತ್ತಾನೆಂದು ಜನರನ್ನು ಎಚ್ಚರಿಸುವ ಪೋಸ್ಟರ್ ಅದು. ತನ್ನನ್ನು ಈ ಕೆಲಸಕ್ಕೆ ಬಳಸಿಕೊಂಡರಲ್ಲ ಎಂದು ಬೇಸರದಿಂದ, ''ಅಡಾ ಪಾವಿಗಳಾ'' ಎಂದು ಮತ್ತೊಮ್ಮೆ ಅವನು ಉದ್ಗರಿಸುತ್ತಾನೆ.

ಈ ಹಾಸ್ಯದ ತುಣುಕು ನನಗೆ ಸಿಕ್ಕಾಪಟ್ಟೆ ನಗಿಸಿದ್ದೇ ಅಲ್ಲದೆ ಗಂಭೀರವಾಗಿ ಚಿಂತಿಸುವಂತೆಯೂ ಮಾಡಿದೆ. ಆಲ್ಬಂ ತೆಗೆದು ನನ್ನ ಹಿಂದಿನ ಫೋಟೊ ಜೊತೆಗೆ ನನ್ನ ಇಂದಿನ ಫೋಟೊ ಇಟ್ಟು ನಾನು ಹೇಗಿದ್ದವನು ಹೀಗಾಗಿ ಬಿಟ್ಟಿದ್ದೇನಲ್ಲ ಎಂದು ನಿಟ್ಟುಸಿರು ಬಿಟ್ಟೆ. ನಾಲ್ಕು ದಿನ ಗಿಡದ ಮೇಲಿದ್ದು ಅನಂತರ ಉದುರಿ ಬೀಳುವುದೇ ಒಂದು ಬದುಕಾ ಎಂದುಕೊಂಡೆ. ತಕ್ಷಣ ನನಗೆ ಆಂಗ್ಲ ಕವಿ ಬ್ರೌನಿಂಗನ ಸಾಲುಗಳು ನೆನಪಿಗೆ ಬಂದುವು.

*''ವೃದ್ಧರಾಗಿರಿ ಬನ್ನಿ ನನ್ನೊಡನೆ ಎಲ್ಲಾ*
*ಶ್ರೇಷ್ಠವಾದದ್ದಿನ್ನು ಬರಬೇಕು ಅಷ್ಟೇ!''*

ಬಹಿರಂಗದ ಅವನತಿಯ ಲಕ್ಷಣಗಳಿಂದ ನಾವು ಧೃತಿಗೆಡಬೇಕಾಗಿಲ್ಲ. ನಾವು ಮಾನಸಿಕವಾಗಿ ಉನ್ನತಾವಸ್ಥೆಯನ್ನು ತಲುಪುತ್ತಿದ್ದೇವೆ. 'ಹೀಗಾಗಿಬಿಟ್ಟೆ' ಎಂದು ಅಳಬೇಕಾಗಿಲ್ಲ 'ಹೇಗಾಗಿಬಿಟ್ಟೆ!' ಎಂದು ಹೆಮ್ಮೆಪಡಬೇಕು. ಈ ದಿಸೆಯಲ್ಲಿ ನನ್ನಲ್ಲಿ ಈಗ ಆಗಿರುವ ಬದಲಾವಣೆಗಳೇನು ಎಂದು ನಾನು ಅಳೆಯಲು ಪ್ರಾರಂಭಿಸಿದ್ದೇನೆ.

ಮೊದಲು ನನಗೆ ಯಾವುದಕ್ಕೂ ಸಮಯವಿರಲಿಲ್ಲ. ಬಾಲ್ಯದಲ್ಲಿ ಓದಿ ಪರೀಕ್ಷೆ ಪಾಸಾಗಬೇಕಿತ್ತು. ಪಠ್ಯಪುಸ್ತಕಕ್ಕಿಂತ ನೋಟ್ಸಿಗೇ ನಾನು ಹೆಚ್ಚು ಗಮನ ಕೊಡುತ್ತಿದ್ದೆ. ಗ್ರಹಿಸುವುದು ಮುಖ್ಯವಾಗಿರಲಿಲ್ಲ. ತಲೆಯಲ್ಲಿ ಏನೇನೋ ತುಂಬಿಸಿಕೊಂಡು ಪರೀಕ್ಷೆಯಲ್ಲಿ ಅದನ್ನು ಇಳಿಸಿ ಫಸ್ಟ್ ಕ್ಲಾಸ್ ಬರುವುದು ನನಗೆ ಮುಖ್ಯವಾಗಿತ್ತು. ಅನಂತರ ಕೆಲಸಕ್ಕಾಗಿ ಪೈಪೋಟಿ, ಧಾವಂತ, ಅದೊಂದು ರೇಸಿನ ಬದುಕು, ರೇಜಿಗೆಯ ಬದುಕು. ಯಾರೋ ನನ್ನ ಕಾಲು ಎಳೆಯುತ್ತಾರೆ, ನಾನು ಯಾರದೋ ಕಾಲನ್ನು ಎಳೆಯುತ್ತೇನೆ. ಭಂಡ ಬದುಕು. ಅಂತೂ ಎಲ್ಲೋ ಸ್ಥಾಪಿಸಿಕೊಂಡದ್ದಾಯ್ತು. ಮನೆ ಆಯ್ತು, ಮಡದಿ ಮಕ್ಕಳು, ಸಂಸಾರ ನಿರ್ವಹಣೆ, ಜಂಜಾಟ. ಈಗ ನನಗೆ ಬೇಕಾದಷ್ಟು ಸಮಯವಿದೆ. ಕಥೆ, ಕಾದಂಬರಿ, ನಾಟಕ, ಕವನ, ವಿಮರ್ಶೆ, ಪ್ರಬಂಧ ಯಾವ ಪುಸ್ತಕವನ್ನೂ ಬಿಡುತ್ತಿಲ್ಲ. ಪುಸ್ತಕಗಳನ್ನು ಕೊಂಡು ಅವುಗಳನ್ನು ಚೆನ್ನಾಗಿ ಕಪಾಟಿನಲ್ಲಿ ಜೋಡಿಸಿಡುತ್ತೇನೆ. ಬರಹಗಾರರ ವಿಳಾಸ ಪತ್ತೆ ಹಚ್ಚಿ ಅವರು ಬರೆದ ಪುಸ್ತಕಗಳಿಗೆ ಪತ್ರ ಮುಖೇನ ಪ್ರತಿಕ್ರಿಯೆ ನೀಡುತ್ತೇನೆ. ಈ ಬಗೆಯ ಸಂವಾದ ನನಗೆ ತುಂಬ ಇಷ್ಟ. ಒಟ್ಟಿಗೆ ನೂರು ಪೋಸ್ಟು ಕಾರ್ಡುಗಳನ್ನು ಕೊಂಡು ತರುತ್ತೇನೆ. ಬರೆದ ಕಾರ್ಡು ಪೋಸ್ಟ್ ಮಾಡುವುದು, ಬರುವ ಪತ್ರಗಳಿಗಾಗಿ ಪೋಸ್ಟ್‌ಮನ್ ಯಾವಾಗ ಬರುತ್ತಾನೆಂದು ಕಾಯುವುದು. ನನ್ನ ಹೆಂಡತಿಯ ಮಾತಿನಲ್ಲಿ ಹೇಳುವುದಾದರೆ ''ಇದು ಮೂರು ಕಾಸಿನ ಪ್ರಯೋಜನವೂ ಇಲ್ಲದ ಕೆಲಸ!'' ಆದರೆ ಇದು ನನಗೆ ಕೆಲಸವೆನಿಸುವುದಿಲ್ಲ. ಇದೊಂದು ಬಗೆಯ ಆಟ. ನಾನೂ ಕಥೆ, ಕವನ, ಪ್ರಬಂಧ ಬರೆಯುತ್ತೇನೆ. ಪತ್ರಿಕೆಗಳಿಗೆ ಕಳಿಸುತ್ತೇನೆ. ಪ್ರಕಟವಾದಾಗ ಖುಷಿಯೋ ಖುಷಿ. ನಿವೃತ್ತಿಯ ಶೂನ್ಯ ತುಂಬಿಕೊಳ್ಳಲು ಒಂದು ಹವ್ಯಾಸ. ಪುಸ್ತಕ ಬಿಡುಗಡೆ ಕಾರ್ಯಕ್ರಮ, ಯಾರದೋ ಭಾಷಣ, ಕಾವ್ಯ ವಾಚನ, ಹಾಸ್ಯಗೋಷ್ಠಿ – ಸಾಹಿತ್ಯಕ ಸಮಾರಂಭಗಳಲ್ಲಿ ಪಾಲ್ಗೊಳ್ಳುವುದು, ಅಲ್ಲಿಗೆ ಬಂದ ಸಾಹಿತಿಗಳನ್ನು ಮಾತನಾಡಿಸುವುದು, ಏನೋ ಒಂದು ಬಗೆಯ ಉಲ್ಲಾಸ. ಇದೆಲ್ಲಾ ಖರ್ಚಿನ ಮಾರ್ಗವೇ ಹೊರತು, ಇದರಲ್ಲಿ ಸಂಪಾದನೆ ಇಲ್ಲ. ಸಂಪಾದನೆ ನನಗೆ ಬೇಕೂ ಇಲ್ಲ. ಪೆನ್ಷನ್ ಬರುತ್ತದೆ, ಕಡಿಮೆ ಬಿದ್ದರೆ ಮಗ ಹಣ ಕಳಿಸಿಕೊಡುತ್ತಾನೆ. ನನ್ನ ಆರೋಗ್ಯ ಕಾಪಾಡಿಕೊಳ್ಳುವ ಜವಾಬ್ದಾರಿ ಮಾತ್ರ ನನ್ನದು. ನನಗೆ ಬೇರೆಯವರನ್ನು ನೋಡಿಕೊಳ್ಳುವ ಜವಾಬ್ದಾರಿ ಇಲ್ಲ. ನಾನೊಬ್ಬ ಖಾತೆ ಇಲ್ಲದ ಮಂತ್ರಿ! ವಿರಾಮದ ಜೀವನ.

ಇಂಥಾ ಬಾಳನ್ನು ನಾನು ಸಂತೋಷದಿಂದ ಬಾಳುವುದು ಬಿಟ್ಟು, ಮನೆಯವರ ಉಪೇಕ್ಷೆಗೆ ಗುರಿಯಾಗಿದ್ದೇನೆ, ನನ್ನನ್ನು ಆಟಕ್ಕುಂಟು ಲೆಕ್ಕಕ್ಕಿಲ್ಲದಂತೆ ನೋಡುತ್ತಾರೆ, ಯಾವ ಮುಖ್ಯ ವಿಷಯವನ್ನೂ ನನ್ನೊಂದಿಗೆ ಚರ್ಚಿಸುವುದಿಲ್ಲ, ಏನು ನಡೆಯುತ್ತಿದೆ ಎಂದರೆ ನಿನಗ್ಯಾಕೆ ಬೇಕು ಎನ್ನುವಂತೆ ನನ್ನ ಕಡೆ ನೋಡುತ್ತಾರೆ, ಈಗ ನಾನು ಯಾರಿಗೂ ಬೇಡ – ಹೀಗೆ ನನ್ನನ್ನು ನಾನೇ ಹಳಿದುಕೊಳ್ಳುವುದೇಕೆ ? ನಾಯಕನಾಗಿ ಬಂದದ್ದಕ್ಕೆಲ್ಲಾ ತಲೆ ಕೊಡುವ ಬದಲು ನಾಲಾಯಕು ಎಂದೆನಿಸಿಕೊಂಡು ಸೈಡ್‌ವಿಂಗಲ್ಲಿರುವುದೇ



ಎಂದೂ ಕನ್ನಡಿ ಮುಂದೆ ಮುಖ ನೋಡಿಕೊಳ್ಳಲು ನಿಲ್ಲದ ನಾನು ಇವತ್ತು ಭಾವುಕನಾಗಿ ನಿಂತಿದ್ದು ನೋಡಿ ನನ್ನ ಹೆಂಡತಿಗೆ ಆಶ್ಚರ್ಯ. ''ಮತ್ತೊಂದು ಮದುವೆ ಮಾಡ್ಕೋತೀರೇನು ?'' ಎಂದು ಚೇಷ್ಟೆ ಮಾಡುತ್ತಾಳೆ. ''ಹೂಂ. ಗಜ್ಜುಗದ ಆಟಕ್ಕೆ ನಿನಗೆ ಜೊತೆ ಬೇಡ್ವಾ?'' ಎಂದು ನಾನೂ ಪ್ರತಿಯಾಗಿ ಚೇಷ್ಟೆ ಮಾಡುತ್ತೇನೆ. ಯಾವುದಕ್ಕೂ ಕೋಪಿಸಿಕೊಳ್ಳದೆ ಪ್ರೀತಿಯಿಂದ ಕಾಣುವ ನನ್ನನ್ನು ನೋಡಿ, ''ನೀವು ಈ ಮೊದಲೇ ಹೀಗಾಗ ಬಾರದಿತ್ತಾ ?'' ಎಂದು ಆಕೆ ಹೇಳುತ್ತಾಳೆ. ಈಗ ನಾನು ಹೇಗಾಗಿದ್ದೇನಿ, ನೀವೇ ಹೇಳಿ.

**ಹಾಲಾಡಿ ಮಾರುತಿ ರಾವ್**

ಚಲೋದಲ್ಲವೇ ? ನಾನೀಗ ಆಟಗಾರನಲ್ಲ, ಕೇವಲ ಪ್ರೇಕ್ಷಕನೆಂದುಕೊಂಡು ತೆಪ್ಪಗಿರಲು ಸಾಧ್ಯವಿಲ್ಲವೇ ? ನಾವು ಒಂದನ್ನು ಪಡೆಯುವಾಗ ಬೇರೆ ಏನೋ ಒಂದನ್ನು ಕಳೆದುಕೊಳ್ಳ ಬೇಕಾಗುತ್ತದೆ. ಸಕಾರಾತ್ಮಕವಾಗಿ ನಾನು ಯೋಚಿಸುವುದನ್ನು ಈಗ ಕಲಿತುಕೊಂಡಿದ್ದೇನೆ.

ನನ್ನಲ್ಲಿ ಮೊದಲು ಗರ್ವವಿತ್ತು. ನಾನು ಯಾರೊಡನೆಯೂ ಸುಲಭವಾಗಿ ಬೆರೆಯುತ್ತಿರಲಿಲ್ಲ, ಮಾತನಾಡುತ್ತಿರಲಿಲ್ಲ. ಬೆರೆಯಲು, ಮಾತಾಡಲು ನನಗೆ ನನ್ನದೇ ದರ್ಜೆಯ ಅಥವಾ ನನಗಿಂತ ಮೇಲಿನ ದರ್ಜೆಯ ಜನರು ಬೇಕು. ಬೇರೆಯವರಿಂದ ನನಗೇನು ಪ್ರಯೋಜನವಾದೀತೆಂದೇ ನೋಡುತ್ತಿದ್ದೆ. ಈಗ ನನ್ನಲ್ಲಿ ಆ ಸ್ವಾರ್ಥವಿಲ್ಲ. ನನಗೆ ಬೇಕಾಗಿರುವುದು ಈಗ ಪ್ರೀತಿ ಮತ್ತು ಸಂತೋಷ. ನಾನು ಅದನ್ನು ನೀಡಿದರೆ ಮಾತ್ರ ನನಗೆ ಅದು ಬೇರೆಯವರಿಂದ ಪಡೆಯಲು ಸಾಧ್ಯ, ನಾನು ಒಂದು ನೀಡಿದರೆ, ನನಗೆ ಹತ್ತು ದೊರೆಯುತ್ತದೆ. ಪ್ರೀತಿ ಎಂದರೇನು, ಸಂತೋಷವೆಂದರೇನು, ನೆಮ್ಮದಿ ಎಂದರೇನು ಎಂದು ನನಗೆ ಅರ್ಥವಾದದ್ದೇ ಈಗ. ಈಗ ನಾನು ನೆರೆಮನೆಯವರೊಡನೆ ಮಾತುಕತೆಗಿಳಿಯುತ್ತೇನೆ. ನಾನು ಓದುವ ನ್ಯೂಸ್‌ಪೇಪರ್ ಯಾರಾದರೂ ಸ್ವಲ್ಪ ಕೊಡಿ ಎಂದರೆ ಬೇಸರಪಟ್ಟುಕೊಳ್ಳುವುದಿಲ್ಲ. ಟೈಂ ಎಷ್ಟು ಎಂದು ಕೇಳಿದರೆ ನಗುತ್ತಾ ಹೇಳುತ್ತೇನೆ. ನನ್ನಲ್ಲಿ ಈಗ ಸಿಟ್ಟಿಲ್ಲ, ಸೆಡವಿಲ್ಲ. ಈಗ ನಾನು ಏನೇ ಆದರೂ ನನ್ನ ಮನಸ್ಸನ್ನು ಕೆಡಿಸಿಕೊಳ್ಳುವುದಿಲ್ಲ. ಬೇರೆಯವರಲ್ಲಿ ದೋಷ ಹುಡುಕುವುದನ್ನು ಕಡಿಮೆ ಮಾಡಿದ್ದೇನೆ. ಕಾರಲ್ಲಿ ಒಬ್ಬನೇ ಗಂಭೀರವಾಗಿ ದೊಡ್ಡಸ್ತಿಕೆ ತೋರಿಸಿಕೊಂಡು ಸಾಗುವುದು ನನಗೀಗ ಇಷ್ಟವಾಗುತ್ತಿಲ್ಲ. ಕಾರಲ್ಲಿ ಹೋಗುತ್ತಿದ್ದರೆ ಶಾಲೆಗೆ ಪುಸ್ತಕದ ಚೀಲವನ್ನು ಹೊತ್ತುಕೊಂಡು ಹೋಗುವ ಮಗುವನ್ನು ನೋಡಿ ಅದಕ್ಕೆ ಶಾಲೆಯವರೆಗೆ ಡ್ರಾಪ್ ಕೊಡುತ್ತೇನೆ. ಕಾರಿಗಿಂತ ನನಗೆ ಈಗ ಬಸ್ಸೇ ಇಷ್ಟ. ಏಕಾಂಗಿತನ ನನಗೆ ಬೇಕಿಲ್ಲ, ನನ್ನ ಸುತ್ತಮುತ್ತ ಜನರಿರಬೇಕು, ಜನರೊಡನೆ ನಾನು ಮಾತನಾಡುತ್ತಿರಬೇಕು. ಜನರಿಂದ ನಾನು ಪ್ರತ್ಯೇಕ ಎನಿಸಿಕೊಳ್ಳುವುದಕ್ಕಿಂತ ಅವರಲ್ಲಿ ನಾನೊಬ್ಬ ಎನಿಸಿಕೊಳ್ಳುವುದು ನನಗೆ ಹೆಚ್ಚು ಹಿತವಾಗಿ ತೋರುತ್ತದೆ. ನಾನು ಬಸ್ ಏರಿದಾಗ ಮಹಿಳೆಯರು ಕೂಡ ಸಂಕೋಚಪಡದೆ ತಮ್ಮ ಪಕ್ಕದ ಸೀಟಲ್ಲಿ ಕೂರಲು ಸಮ್ಮತಿಸುತ್ತಾರೆ. ಕೂರಲು ಜಾಗವಿಲ್ಲದಾಗ ಒಬ್ಬ ಹುಡುಗಿ ಎದ್ದು ನನಗೆ ತನ್ನ ಜಾಗ ಬಿಟ್ಟುಕೊಡುತ್ತಾಳೆ. ಈ ಚಿಕ್ಕ ಪುಟ್ಟ ಸಹಾನುಭೂತಿ, ಸಹಾಯಗಳಲ್ಲಿ ಎಷ್ಟೊಂದು ಸಿಹಿ ಇರುತ್ತದೆ ! 'ಟಾ ಟಾ' ಎನ್ನುವ ಶಬ್ದಕ್ಕಿಂತ 'ತಾತಾ' ಎನ್ನುವ ಶಬ್ದವೇ ನನಗೀಗ ಹೆಚ್ಚು ಪ್ರಿಯ !

ಮೊದಲು ನನಗೆ ಕನಸುಗಳು ಬೀಳುತ್ತಿದ್ದವು. ಬಾಲ್ಯದಲ್ಲಿ ಎತ್ತರದಿಂದ ಕೆಳಕ್ಕೆ ಬಿದ್ದಂತಾಗಿ ಅರ್ಧ ನಿದ್ರೆಯಲ್ಲೇ ಗಾಬರಿಯಾಗಿ ಏಳುತ್ತಿದ್ದೆ. ಪುಂಡಾಟಿಕೆಯ ಕನಸುಗಳು ಅವು. ದೊಡ್ಡವನಾದ ಮೇಲೆ ಒಮ್ಮೆ ನನಗೆ ಲೇಡಿ ಮೌಂಟ್‌ಬ್ಯಾಟನ್ನಿಗೆ ಮುತ್ತು ಕೊಟ್ಟ ಕನಸು ! ತಾರುಣ್ಯಾವಸ್ಥೆಯ ಕನಸದು. ಈಗ ಅಂಥ ಕನಸುಗಳು ಬೀಳುತ್ತಿಲ್ಲ. ಕನಸು ಬಿದ್ದರೂ ಅವು ನೆನಪಲ್ಲಿ ಉಳಿಯುತ್ತಿಲ್ಲವೇನೋ. ಕನಸುಗಳು ಹುಟ್ಟುವುದು ಮುಖ್ಯವಾಗಿ ನಮ್ಮ ಬಯಕೆಗಳ ಪರಿಣಾಮವಾಗಿ. ಹಾಗಾದರೆ ನನಗೀಗ ಬಯಕೆಗಳೇ ಇಲ್ಲವೇ ? ಇವೆ, ಅವೆಲ್ಲಾ ಚಿಕ್ಕಪುಟ್ಟ ಬಯಕೆಗಳು. ಇತರ ವಯಸ್ಕರಂತೆ ಬೀದಿ ಬದಿಯ ಬೋಂಡಾ ಪೇಪರಿನಲ್ಲಿ ಕಟ್ಟಿಸಿಕೊಂಡು ಪಾರ್ಕಿನ ಬೆಂಚಲ್ಲಿ ಕೂತು ಬಿಸಿ ಬಿಸಿ ತಿನ್ನಬೇಕು, ಪಾರ್ಕಲ್ಲಿ ಚೆಂಡು ಒದೆಯುತ್ತಾ ಎದ್ದು ಬಿದ್ದು ಆಡುವ ಮಗುವಿಗೆ ಮುದ್ದು ಮಾಡಬೇಕು – ಇಂಥಾ ಬಯಕೆಗಳಲ್ಲಿ ಭಾವತೀವ್ರತೆ ಇರುವುದಿಲ್ಲ. ಆಗ ಕನಸುಗಳು ಕಡಿಮೆ. ನಾನು ಕಲ್ಪನಾ ಜಗತ್ತಿನಿಂದ ದೂರವಾಗುತ್ತ ವಾಸ್ತವಿಕತೆಗೆ ಹೆಚ್ಚು ಒಲಿದಿದ್ದೇನೆ.

ಎಷ್ಟೇ ಸಂತೋಷವಾಗಲಿ ನಾನು ಈಗ ಹಾರಾಡಿ ಕುಣಿಯುವುದಿಲ್ಲ. ದುಃಖ ಕೂಡ ನನ್ನನ್ನು ದಹಿಸುವುದಿಲ್ಲ. ಅವು ನನ್ನ ಹಿಡಿತದಲ್ಲಿರುತ್ತವೆ. ನಾನು ಅವುಗಳ ಗುಲಾಮನಾಗುವುದಿಲ್ಲ. ನನ್ನೊಳಗೆ ಏನೋ ಒಂದು ಬಗೆಯ ಬೆಳಕು ಮೂಡಿದೆ. ದೇಹಶಕ್ತಿ ಕುಗ್ಗಿದೆ ನಿಜ. ಆತ್ಮಶಕ್ತಿ ಹಿಗ್ಗಿದೆ. ನಾನೀಗ ಕನ್ನಡಿಯಲ್ಲಿ ನನ್ನ ಮುಖ ನೋಡಿಕೊಳ್ಳುತ್ತೇನೆ. ಹಣೆ ತುಂಬಾ ನೆರಿಗೆಗಳಿವೆ. ಆ ನೆರಿಗೆಗಳು ನಾನು ಬದುಕಲ್ಲಿ ಕಂಡುಕೊಂಡ ಅನುಭವಗಳನ್ನು ಸೂಚಿಸುವಂತೆ ಕಾಣುತ್ತವೆ. ತಲೆಗೂದಲು ಬೆಳ್ಳಗಾಗಿದೆ. ಅದು ನನ್ನ ಉನ್ನತಿಯ ಸಂಕೇತ. ಎಂದೂ ಕನ್ನಡಿ ಮುಂದೆ ಮುಖ ನೋಡಿಕೊಳ್ಳಲು ನಿಲ್ಲದ ನಾನು ಇವತ್ತು ಭಾವುಕನಾಗಿ ನಿಂತಿದ್ದು ನೋಡಿ ನನ್ನ ಹೆಂಡತಿಗೆ ಆಶ್ಚರ್ಯ. ''ಮತ್ತೊಂದು ಮದುವೆ ಮಾಡ್ಕೋತೀರೇನು ?'' ಎಂದು ಚೇಷ್ಟೆ ಮಾಡುತ್ತಾಳೆ. ''ಹೂಂ. ಗಜ್ಜುಗದ ಆಟಕ್ಕೆ ನಿನಗೆ ಜೊತೆ ಬೇಡ್ವಾ ?'' ಎಂದು ನಾನೂ ಪ್ರತಿಯಾಗಿ ಚೇಷ್ಟೆ ಮಾಡುತ್ತೇನೆ. ಯಾವುದಕ್ಕೂ ಕೋಪಿಸಿಕೊಳ್ಳದೆ ಪ್ರೀತಿಯಿಂದ ಕಾಣುವ ನನ್ನನ್ನು ನೋಡಿ, ''ನೀವು ಈ ಮೊದಲೇ ಹೀಗಾಗಬಾರದಿತ್ತಾ?'' ಎಂದು ಆಕೆ ಹೇಳುತ್ತಾಳೆ. ಈಗ ನಾನು ಹೇಗಾಗಿದ್ದೇನೆ, ನೀವೇ ಹೇಳಿ.


**ಹಾಲಾಡಿ ಮಾರುತಿ ರಾವ್**

೧೮೦/೨೮, ಇಂಚರ, ೧೫ನೇ ಮುಖ್ಯರಸ್ತೆ, ಕುರುಬರಹಳ್ಳಿ, ಬೆಂಗಳೂರು - ೫೬೦ ೦೮೬

# ಟೆಲಿವಿಷನ್ ಎಂಬ ದೈತ್ಯನು ಮತ್ತು ರಂಗಭೂಮಿ ಎಂಬ ಚಿರಂಜೀವನು

ಬಿ. ಸುರೇಶ



**ಹೀ**ಗೊಂದು ಮಾತಿದೆ ಮತ್ತು ನಾವದನ್ನು ಆಗಾಗ ಕೇಳುತ್ತಲೇ ಇದ್ದೇವೆ. 'ಟೆಲಿವಿಷನ್ನಿನಿಂದ ಹವ್ಯಾಸೀ ರಂಗಭೂಮಿ ಸಾಯುತ್ತಿದೆ' ಎಂಬುದು ಆ ಮಾತು. ಅದು ನನ್ನ ಹಿರಿಯ ರಂಗಕರ್ಮಿಗಳ/ ರಂಗವಿಮರ್ಶಕರ ಬಾಯಲ್ಲಿ ಕ್ಲೀಷೆ ಎಂದೆನಿಸುವಷ್ಟು ಬಾರಿ ಸುಳಿಯುತ್ತಿರುತ್ತದೆ. ಆದರೆ ಈ ಮಾತು ಹಸೀ ಸುಳ್ಳು. ಯಾವುದೋ ಒಂದು ಮಾಧ್ಯಮದಿಂದ ಮತ್ತೊಂದು ಮಾಧ್ಯಮ ಸಾಯುವುದು ಅಸಾಧ್ಯ. ಅದರಲ್ಲಿಯೂ ರಂಗಭೂಮಿಯಂತಹ ಮಾಧ್ಯಮವು ಎಂದಿಗೂ ಸಾಯಲಾರದು. ಅದು ಚಿರಂಜೀವ.

ಹಾಗಾದರೆ ಇಷ್ಟೊಂದು ಜನ ಅದೇ ಮಾತನ್ನ ಪದೇ ಪದೇ ಹೇಳುವುದರ ಹಿಂದಿರುವ ತಥ್ಯವಾದರೂ ಏನು ಎಂದು ಪರಿಶೀಲಿಸುವ ಉದ್ದೇಶ ಈ ಲೇಖನದ್ದು.

ಮೊದಲಿಗೆ ನಮ್ಮ ಹವ್ಯಾಸೀ ರಂಗಭೂಮಿಯ, ವಿಶೇಷವಾಗಿ ಬೆಂಗಳೂರಿನ ಹವ್ಯಾಸೀ ರಂಗ ಚಳುವಳಿಯ ಸ್ವರೂಪವನ್ನು ಗಮನಿಸೋಣ. ''ನಮ್ಮ ಹವ್ಯಾಸಿ ಕಲಾವಿದರು ಯಾವುದಾದರೊಂದು ವೃತ್ತಿ ಮಾಡುತ್ತಾ ಬಿಡುವಿನ ವೇಳೆಯಲ್ಲಿ ರಂಗಭೂಮಿಯಲ್ಲಿ ತೊಡಗಿಸಿಕೊಳ್ಳುತ್ತಾ ಇದ್ದವರು. ಅವರಿಗೆ ರಂಗಭೂಮಿಯನ್ನು ಕುರಿತು ಪ್ರೀತಿ ಇದೆಯಾದರೂ, ಅದು, 'ಬಿಡುವಿನ ವೇಳೆಯಲ್ಲಿನ ರಂಗಭೂಮಿ' ಎಂಬ ದೃಷ್ಟಿಕೋನ. ಹೀಗಾಗಿ ನಮ್ಮ ರಂಗಪ್ರಯೋಗಗಳಲ್ಲಿ ವೃತ್ತಿಪರತೆ ಎಂಬುದು ಬಹುಮಟ್ಟಿಗೆ ಇಲ್ಲ. ಆ ಕೊರತೆಯಿಂದಾಗಿ ನಮ್ಮಲ್ಲಿ ಅತ್ಯುತ್ತಮ ಪ್ರಯೋಗಗಳಾದರೂ ಅವು 'ಪ್ರದರ್ಶನ'ದ ಲಾಭ ಅಥವಾ ಸಾತತ್ಯವನ್ನು ಪಡೆಯುವುದಿಲ್ಲ'' ಎಂಬುದು ರಾಷ್ಟ್ರೀಯ ನಾಟಕಶಾಲೆಯ ಪದವಿ ಪಡೆದ ರಂಗನಿರ್ದೇಶಕರೊಬ್ಬರ ಅಭಿಪ್ರಾಯ. ಅದು ಬಹುಮಟ್ಟಿಗೆ ಸತ್ಯವೂ ಹೌದು. ಇದರಿಂದಾಗಿ ನಾಟಕಶಾಲೆಗಳ ಪದವಿ ಪಡೆದು ರಂಗಭೂಮಿಗೆ ಬಂದ ಹಲವು ವೃತ್ತಿಪರ ಧೋರಣೆಯ ನಿರ್ದೇಶಕರಿಗೆ ತಾವು ಸಿದ್ಧಪಡಿಸಿದ ಪ್ರಯೋಗ ಕುರಿತಂತೆ 'ಪೂರ್ಣತೃಪ್ತಿ' ಸಿಗುತ್ತಿರಲಿಲ್ಲ. ಈಗಲೂ ಅದು ಸಿಗುತ್ತಿಲ್ಲ ಎಂದು ಅನೇಕ ನಿರ್ದೇಶಕ ಮಿತ್ರರು ಹೇಳುತ್ತಾರೆ. ಇಲ್ಲಿ 'ಪೂರ್ಣತೃಪ್ತಿ' ಎಂದರೆ ಏನೆಂಬ ಪ್ರಶ್ನೆ ಉದ್ಭವಿಸುತ್ತದೆ. ಅದು ದಿ॥ ಬಿ. ವಿ. ಕಾರಂತರು ಹೇಳುತ್ತಿದ್ದ 'ಆನಂದ'ದ ಸ್ಥಿತಿ. ಅಂದರೆ ಒಂದು ಪೂರ್ಣಾನುಭವವನ್ನು ಪ್ರೇಕ್ಷಕನಿಗೂ ಅನುಭವವೇದ್ಯವಾಗಿಸುವ ಸ್ಥಿತಿ. ಇದು ನಮ್ಮ ಧ್ಯಾನದಲ್ಲಿ ಹೇಳುವ ಸಹಸ್ರಾರ ತಲುಪಿದ ಸ್ಥಿತಿ ಎಂದರೆ ತಪ್ಪಾಗಲಾರದು. ಅಂತಹುದೊಂದು ಸ್ಥಿತಿ ತಲುಪುವುದಕ್ಕೆ ಬೇಕಾದ್ದು ಕೇವಲ ವೃತ್ತಿಪರತೆಯಲ್ಲ, ತಾದಾತ್ಮ್ಯ! ಅದು ನಮ್ಮ ಆಧುನಿಕ ನಗರ ಜೀವನದಲ್ಲಿ ಕಷ್ಟಸಾಧ್ಯವಾದ್ದು. ಹೀಗಿರುವಾಗ ನಮ್ಮ ರಂಗಪ್ರದರ್ಶನಗಳಿಂದ ಅಂತಹದೊಂದು 'ಆನಂದ'ವನ್ನು ನಿರ್ದೇಶಕರು ಹುಡುಕುವುದೇ ತಪ್ಪು ಎಂಬುದು ನನ್ನ ಭಾವನೆ. ಅದು ಪ್ರತ್ಯೇಕ ವಿಸ್ತೃತ ಚರ್ಚೆಯನ್ನು ಬೇಡುವ ವಿಷಯ. ಈ ಲೇಖನದಲ್ಲಿ ಆ ಚರ್ಚೆ ಬೇಡ. ಆದರೆ ಇದರಿಂದ ನಮ್ಮ ಹವ್ಯಾಸೀ ರಂಗಭೂಮಿಗೆ ಆದುದೇನು ಮತ್ತು ಅದರಿಂದಾಗಿ ನಮ್ಮ ಹವ್ಯಾಸೀ ರಂಗಭೂಮಿ ಸಾಯುತ್ತಿದೆಯೇ ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತಾ ದೊರಕುವ ವಿವರಗಳನ್ನು ಗಮನಿಸಿದರೆ ಕಾಣಿಸುವುದು ಇಷ್ಟು:

ರಂಗಭೂಮಿ ಸ್ವತಃ ಅನ್ನ ಕಾಣಿಸುವಷ್ಟು ಶಕ್ತವಲ್ಲ ಎಂದೇ ನಮ್ಮಲ್ಲಿನ ಅನೇಕರು ಇತರ ವೃತ್ತಿಗಳಿಗೆ ಹೋಗಿದ್ದಾರೆ. ರಂಗಭೂಮಿ ಅವರಿಗೆ ಇತರ ಮಾಧ್ಯಮಗಳ ಗ್ರಹಿಕೆಗೆ ವೇದಿಕೆಯೂ ಆಗಿದೆ. ಈ ನೆಲೆಯಲ್ಲಿಯೇ ೧೯೮೦ರ ದಶಕದ ಅಂತ್ಯಭಾಗದಲ್ಲಿ ಆರಂಭವಾದ ಟೆಲಿವಿಷನ್ ನಮ್ಮ ಹವ್ಯಾಸೀ ರಂಗಗೆಳೆಯರಿಗೆ ಪರಿಚಿತವಾದುದು. ಟೆಲಿವಿಷನ್ ಅವರಿಗೆ ಬೇಕಾದ ಸಂತೋಷವನ್ನು ಕೊಡಬಲ್ಲ ಮತ್ತೊಂದು ಮಾಧ್ಯಮವಾಗಿತ್ತು. ಆಗ ಸಹಜವಾಗಿಯೇ ನಮ್ಮ ಹವ್ಯಾಸೀ ರಂಗಭೂಮಿಯ ಅನೇಕರು ಟೆಲಿವಿಷನ್ನಿಗೂ ಬಂದರು. ಅಭಿನಯ ಮತ್ತು ಇತರ ತಾಂತ್ರಿಕ ವಿಭಾಗಗಳಲ್ಲಿ ತೊಡಗಿಕೊಂಡರು. ವಿಶೇಷವಾಗಿ ದೂರದರ್ಶನದ ಉಪಗ್ರಹವಾಹಿನಿ 'ಚಂದನ' ಆರಂಭವಾದಾಗ, ಅದಕ್ಕಾಗಿ ಎರಡು ಪ್ರಕರಣಗಳ ಕಥೆಗಳನ್ನು ತಯಾರಿಸುವುದು ಆರಂಭವಾಯಿತು. ಅದು ನಮ್ಮಲ್ಲಿನ ಅನೇಕ ಕನಸುಗಾರರಿಗೆ ವರವಾಗಿ ಪರಿಣಮಿಸಿತು. ಅನೇಕ ಯುವಕರು ಲೇಖಕರಾದರು, ನಿರ್ದೇಶಕರಾದರು, ಅಭಿನಯದ ಅವಕಾಶ ಅನೇಕರಿಗೆ ದೊರೆಯಿತು. ಇದರಿಂದಾಗಿ ಟೆಲಿವಿಷನ್ ಮಾಧ್ಯಮದಲ್ಲಿ ದುಡಿಯುವುದು ಹೇಗೆಂಬ ಪರಿಚಯ ಇವರೆಲ್ಲರಿಗೂ ಆಯಿತು. ಇದು ಬಂದು ಅನೇಕರಿಗೆ ವರದಾನವಾಗಿ ಪರಿಣಮಿಸಿತು ಎನ್ನಬಹುದು. ಆದಾಯದ ಹೊಸಮೂಲಗಳು ಇವರೆಲ್ಲರಿಗೂ ದೊರೆಯಿತು. ಹೀಗೆ ಟೆಲಿವಿಷನ್ ಮಾಧ್ಯಮಕ್ಕೆ ಬಂದ ಹೊಸಬರು ಈಗ ಹಳಬರಾಗಿದ್ದಾರೆ. ಅವರೆಲ್ಲರಿಗೂ ಆರ್ಥಿಕ ಸುಭದ್ರತೆ ದೊರೆತಿದೆ. ಅವರಲ್ಲಿ ಅನೇಕರು ಪೂರ್ಣಾವಧಿಯಾಗಿ ಇಂದು ಟೆಲಿವಿಷನ್ನಿನಲ್ಲಿ ತೊಡಗಿಕೊಂಡಿದ್ದಾರೆ. ಹಾಗೆಯೇ ಅನೇಕರು ರಂಗಭೂಮಿಯಲ್ಲೂ ತೊಡಗಿಕೊಂಡು ಟೆಲಿವಿಷನ್ನಿನಲ್ಲೂ ದುಡಿಯುತ್ತಿದ್ದಾರೆ.

ಇವೆಲ್ಲವೂ ನಮ್ಮ ಹವ್ಯಾಸೀ ರಂಗಭೂಮಿಯ ನೇಪಥ್ಯದ ವಿವರಗಳು. ಇವುಗಳಿಂದ ರಂಗಭೂಮಿಯಂತಹ ಅತ್ಯಂತ ಪ್ರಾಚೀನ ಕಥನ ಮಾಧ್ಯಮಕ್ಕೆ ಸಾವು ಬರುವುದು ಅಸಾಧ್ಯ. ರಂಗಭೂಮಿಗೆ ಸಾವು ಬರಬೇಕೆಂದರೆ ಅದನ್ನು ನೋಡುವವರು ಮತ್ತು ಮಾಡುವವರು ಇಬ್ಬರೂ ಇಲ್ಲದಂತಹ ಪರಿಸ್ಥಿತಿ ನಿರ್ಮಾಣವಾಗಬೇಕು. ಅದು ಇನ್ನೂ ಅನೇಕ ಸಹಸ್ರಮಾನಗಳವರೆಗೆ ಅಸಾಧ್ಯ. ಏಕೆಂದರೆ ಪೀಟರ್ ಬ್ರೂಕ್ ಹೇಳುವಂತೆ ನೋಡುಗನೊಬ್ಬನ ಎದುರಿಗೆ ಅಭಿನಯಿಸುವವನು ಇದ್ದರೆ ಮುಗಿಯಿತು. ಅಲ್ಲಿ ರಂಗಭೂಮಿಯು ಹುಟ್ಟುತ್ತದೆ. ಈ ನಿಟ್ಟಿನಲ್ಲಿ ರಂಗಭೂಮಿಯು ಸದಾ ಚಿರಂಜೀವನಾಗಿಯೇ ಉಳಿಯುತ್ತದೆ ಎಂಬುದು ನಿರ್ವಿವಾದಿತ ಸತ್ಯ.

ಆದರೆ ಈ ಲೇಖನದ ಆರಂಭದಲ್ಲಿ ಸೂಚಿತವಾದ ಪ್ರಶ್ನೆಗಳನ್ನು ಕೇಳುವವರು ರಂಗಭೂಮಿಯಿಂದ ವಲಸೆ ಹೋದವರಿಂದ ರಂಗಭೂಮಿ ಬಡಕಲಾಯಿತು ಎಂತಲೂ ಹೇಳುತ್ತಿದ್ದಾರೆ. ಇದು ಸಹ ಸತ್ಯವಲ್ಲ. ಕಳೆದ ಕೆಲವು ವರ್ಷಗಳಿಂದ ಬೆಂಗಳೂರಿನಲ್ಲಿ ನಡೆಯುತ್ತಿರುವ ಕಾಲೇಜು ರಂಗಭೂಮಿಯ ಕಾರ್ಯಕ್ರಮಗಳನ್ನು ನೋಡಿದವರಿಗೆ ಥಟ್ಟನೆ ತಿಳಿಯುತ್ತದೆ. ರಂಗಭೂಮಿಗೆ ನಿರಂತರವಾಗಿ ಹೊಸಬರು ಬರುತ್ತಿದ್ದಾರೆ. ಎಲ್ಲಿ ಹೊಸನೀರಿನ ಆಗಮನ ನಿರಂತರವೋ ಅಲ್ಲಿ ಬತ್ತುವ ಮಾತು ನಿಷಿದ್ಧ. ಹೀಗಾಗಿ ನಮ್ಮ ರಂಗಭೂಮಿ ಇಂದಿಗೂ ಎಂದಿಗೂ ಚಿರಂಜೀವ.

## ಟೆಲಿವಿಷನ್ ಎಂಬ ದೈತ್ಯ

ಹೌದು, ಈ ಹೊಸಮಾಧ್ಯಮ ದೈತ್ಯನೇ. ಇದು ತನ್ನಲ್ಲಿಗೆ ಬರುವ ಎಲ್ಲಾ ಹೊಸಬರನ್ನು ತನ್ನೊಳಗೆ ತೆಗೆದುಕೊಳ್ಳುತ್ತದೆ. ಈ ಉದ್ಯಮ ನಮ್ಮ ನಾಡಿನಲ್ಲಿ ನೆಲೆಯೂರಿ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಒಂದು ಕಾಲಕ್ಕೆ ದಿನವೊಂದಕ್ಕೆ ಎರಡು ಗಂಟೆಗಳ ಕಾಲ ಬಿತ್ತರವಾಗುತ್ತಿದ್ದ ಕನ್ನಡ ಕಾರ್ಯಕ್ರಮಗಳು ಇಂದು ಏಳು ಉಪಗ್ರಹ ವಾಹಿನಿಗಳಿಂದ ದಿನವೆಲ್ಲಾ ಕನ್ನಡ ಕಾರ್ಯಕ್ರಮಗಳ ಪ್ರಸಾರ ಆಗುತ್ತಿದೆ. ಅದಲ್ಲದೆ, ಇಂದು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿಯೂ ಕೇಬಲ್ ಚಾನೆಲ್‌ಗಳಿವೆ. ಅಲ್ಲಿಯೂ ಕನಿಷ್ಠ ದಿನವೊಂದಕ್ಕೆ ಒಂದು ಗಂಟೆಯ ಕನ್ನಡ ಕಾರ್ಯಕ್ರಮಗಳು ತಯಾರಾಗುತ್ತಿವೆ. ಈ ಉದ್ಯಮವು ಇಂದು ವಾರ್ಷಿಕ ೬೨೫ ಕೋಟಿ ರೂ.ಗಳ ವಹಿವಾಟು ಮಾಡುತ್ತಿದೆ. ಈ ಉದ್ಯಮದಿಂದಾಗಿ ನಮ್ಮಲ್ಲಿನ ಅನೇಕ ಕಲಾವಿದರು ಮತ್ತಾವುದೋ ವೃತ್ತಿ ಮಾಡುತ್ತಾ ಬಿಡುವಿನಲ್ಲಿ ನಟಿಸುವ [illegible]

ಪೂರ್ಣಾವಧಿಗೆ ನಟರು/ತಂತ್ರಜ್ಞರು ಆಗಿ ಬದುಕುತ್ತಿದ್ದಾರೆ. ಪ್ರಾಯಶಃ ಅವರೆಲ್ಲರೂ ರಂಗಭೂಮಿಯನ್ನು ಆತುಕೊಂಡಿದ್ದರೆ ಅವರಿಗೆ ದೊರೆಯಬಹುದಾಗಿದ್ದುದಕ್ಕಿಂತ ಉತ್ತಮ ಬದುಕು ಈಗ ಅವರಿಗೆ ಸಿಕ್ಕಿದೆ. ಇವರು ಮಾತ್ರವಲ್ಲದೆ ಇನ್ನಷ್ಟು ಹೊಸಬರು ಬಂದರೂ ಈ ಟೆಲಿವಿಷನ್ ಉದ್ಯಮ ಎಲ್ಲರನ್ನೂ ತನ್ನ ತೆಕ್ಕೆಯೊಳಗೆ ತೆಗೆದುಕೊಳ್ಳಲು ಸಿದ್ಧವಿದೆ. ನಮ್ಮಲ್ಲಿ ಈಗ ಪ್ರತಿದಿನವೂ ೪೨ ಕನ್ನಡ ದೈನಿಕ ಧಾರಾವಾಹಿಗಳು ಬೆಳಗಿನ ಹನ್ನೆರಡರಿಂದ ರಾತ್ರಿಯ ಹನ್ನೊಂದರವರೆಗೆ ಪ್ರಸಾರವಾಗುತ್ತಿವೆ. ನೋಡುಗರಿಗೆ ಅವೆಲ್ಲವನ್ನೂ ನೋಡುತ್ತಾ ತಮ್ಮದೇ ಆದ ಪುರಾಣ ಕಟ್ಟುವ ತವಕವೂ ಇರುವುದರಿಂದ ಎಲ್ಲಾ ಧಾರಾವಾಹಿಗಳು/ಚಾನೆಲ್‌ಗಳು ತಮ್ಮದೇ ಆದ ಜನಪ್ರಿಯತೆಯ ಜೊತೆಗೆ ಸಾಗುತ್ತಿವೆ. ಈಗಿರುವ ವಾಹಿನಿಗಳಿಗೆ ಇನ್ನೆರಡು ವಾಹಿನಿಗಳೂ ಸೇರಿದರೆ ಆಗ ತಯಾರಾಗುವ ದೈನಿಕ ಧಾರಾವಾಹಿಗಳೆಷ್ಟು ಮತ್ತು ಅವುಗಳಲ್ಲಿ ತೊಡಗಿಕೊಳ್ಳುವ ಕಲಾವಿದರು ತಂತ್ರಜ್ಞರ ಸಂಖ್ಯೆ ಎಷ್ಟು ಇರಬಹುದೆಂದು ತಾವೇ ಊಹಿಸಬಹುದು. ಈಗ ಈ ಉದ್ಯಮದಲ್ಲಿ ದುಡಿಯು ತ್ತಿರುವವರ ಸಂಖ್ಯೆ ಒಂದು ಅಂದಾಜಿನ ಪ್ರಕಾರ, ನೇರವಾಗಿ ದುಡಿಯುತ್ತಿರುವವರು (ಕರ್ನಾಟಕದಲ್ಲಿ) ಆರುಸಾವಿರ ಜನ, ಪರೋಕ್ಷವಾಗಿ (ಕೇಬಲ್ ಆಪರೇಟರ್‌ಗಳೊಂದಿಗೆ ದುಡಿಯುವವರೂ ಸೇರಿದಂತೆ) ಟೆಲಿವಿಷನ್ ಉದ್ಯಮದಿಂದ ಜೀವನ ಸಾಗಿಸುತ್ತಿರುವವರ ಸಂಖ್ಯೆ ಕರ್ನಾಟಕದಲ್ಲಿ ಹದಿನೈದು ಸಾವಿರಕ್ಕೂ ಹೆಚ್ಚು. ಈ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಈಗ ಸಿನಿಮಾಗಳನ್ನು ಸಹ ಸ್ಯಾಟಿಲೈಟ್ ಕಂಟ್ರೋಲ್‌ಗೆ ತರುತ್ತಿರುವ ಹಿನ್ನೆಲೆಯಲ್ಲಿ ಬರುವ ಎರಡು ವರ್ಷಗಳಲ್ಲಿ ಈ ಸಂಖ್ಯೆಯು ಮುಪ್ಪಟ್ಟಾಗುವ ಸಾಧ್ಯತೆ ಇದೆ. ಉದ್ಯೋಗ ಸೃಷ್ಟಿಯ ನೆಲೆಯಲ್ಲಿಯೂ ಟೆಲಿವಿಷನ್ ಉದ್ಯಮ ದೈತ್ಯನಾಗಿದೆ.

ಟೆಲಿವಿಷನ್ ಯಾವ ರೀತಿಯಲ್ಲಿ ನಮ್ಮ ನಾಡಿನ ಜನರಲ್ಲಿ ಕೊಳ್ಳುಬಾಕ ಸಂಸ್ಕೃತಿಯನ್ನು ಪ್ರಚೋದಿಸುತ್ತಿದೆ ಎಂಬ ವಾದವನ್ನು ಒತ್ತಟ್ಟಿಗಿಡೋಣ. ಇಂದಿನ ಸಂವಹನ ಯುಗದಲ್ಲಿ ಟೆಲಿವಿಷನ್ ನೀಡುತ್ತಿರುವ ಮಾಹಿತಿಯಂತೂ ನಾಡಿನ ಜನರನ್ನು ಸದಾ ಎಚ್ಚರದಲ್ಲಿಟ್ಟಿದೆ. ಕೆಲ ತಿಂಗಳ ಹಿಂದೆ ವಿಧಾನಸಭೆಯಲ್ಲಿ ನಡೆದ ವಿಶ್ವಾಸ ಮತ ಯಾಚನೆಯ ನೇರಪ್ರಸಾರ ನೋಡಿರುವ ವರಿಗೆ ಇದು ಗೊತ್ತಾಗಿರುತ್ತಿದೆ. ಈ ನೇರಪ್ರಸಾರ ದಿಂದಾಗಿ ನಮ್ಮ ನಾಡಿನ ವಿದ್ಯಾವಂತರು ಚುನಾವಣೆಗಳೆಂದರೆ ನಿರ್ಲಕ್ಷ್ಯ ತೋರುವುದನ್ನು ಕೈಬಿಡುವ ಸಾಧ್ಯತೆಯಿದೆ. ಅದರ ಪರಿಣಾಮವಾಗಿ ಸಮ್ಮಿಶ್ರ ಸರ್ಕಾರಗಳು ಬಾರದಂತೆ ಆಗಬಹುದು. ಇದು ಟೆಲಿವಿಷನ್ ಎಂಬ ದೈತ್ಯನಿಂದಲೇ ಆಗಬಹುದಾದ್ದು. ಟೆಲಿವಿಷನ್ನಿನ ಪರಿಣಾಮಗಳನ್ನು ಕುರಿತು ಮಾತಾಡುತ್ತಾ ಆ ಮಾಧ್ಯಮವು ಉಚ್ಛ್ರಾಯಕ್ಕೆ ಬಂದ ನಂತರ ನಮ್ಮ ಭಾಷೆಯಲ್ಲಿ ಆಗಿರುವ ಬದಲಾವಣೆಯನ್ನು ಸಹ ಹೇಳಬೇಕು. ಇಂದು ಕರ್ನಾಟಕದ ಉದ್ದಗಲಕ್ಕೂ ಬಳಕೆಯಲ್ಲಿರುವ ಕನ್ನಡವನ್ನು ಆಯಾ ಪ್ರದೇಶದ ಕನ್ನಡ ಮತ್ತು ಟೆಲಿವಿಷನ್ ಕನ್ನಡ ಎಂದು ಪ್ರತ್ಯೇಕಿಸಿ ಗುರುತಿಸಬಹುದು. ನಮ್ಮ ಆಡುಭಾಷೆಗೆ ಒಂದು ಯೂನಿಫಾರ್ಮಿಟಿಯನ್ನು ತಂದುಕೊಟ್ಟಿರುವುದು ಟೆಲಿವಿಷನ್. (ಇದು ಸರಿಯಲ್ಲ ಎಂಬ ಭಾಷಾಪಂಡಿತರ ಆಗ್ರಹವನ್ನು ನಾನು ವೈಯಕ್ತಿಕವಾಗಿ ಒಪ್ಪುತ್ತೇನೆ. ಆದರೆ ಈ ಯೂನಿಫಾರ್ಮಿಟಿಯಿಂದ ಸಂಪರ್ಕ ಮಾಧ್ಯಮಗಳಲ್ಲಿ ಆಗಬಹುದಾದ ಹೊಸ ಅಭಿವೃದ್ಧಿಯ ಹಿನ್ನೆಲೆಯಲ್ಲಿ ಬದಲಾವಣೆಯನ್ನು ಒಪ್ಪಿಕೊಳ್ಳುವುದು ಅನಿವಾರ್ಯ ಎನಿಸುತ್ತದೆ.)

ಇವೆಲ್ಲಾ ಕಾರಣಗಳಿಂದ ಇಂದು ಟೆಲಿವಿಷನ್ ನಮ್ಮ ನಡುವೆ ಬೃಹತ್ತಾಗಿ ಬೆಳೆದಿದೆ ಮತ್ತು ಅದು ನಮ್ಮ ಎಲ್ಲ ವರ್ಗದ ಜನರಿಗೆ ಅನಿವಾರ್ಯ ಪರಿಕರವಾಗಿದೆ. ಈ ಹೊಸ ಮಾಧ್ಯಮ ಸೃಷ್ಟಿಸಿರುವ ಅನೇಕ ಅವಕಾಶಗಳ ಹಿನ್ನೆಲೆಯಲ್ಲಿ ಇದನ್ನು ನಾವು ಒಪ್ಪಲೂ ಬೇಕಾಗುತ್ತದೆ ಅಪ್ಪಲೂ ಬೇಕಾಗುತ್ತದೆ.

**ಟೆಲಿವಿಷನ್ನಿನ ಭವಿಷ್ಯ**

ಇಷ್ಟು ಸಣ್ಣ ಅವಧಿಯಲ್ಲಿ ಈ ಎತ್ತರವನ್ನು ತಲುಪಿರುವ ಟೆಲಿವಿಷನ್‌ಗೆ ಇರುವ ಭವಿಷ್ಯ ಈಗಿರುವ ದೈನಿಕ ಧಾರಾವಾಹಿಗಳಲ್ಲಿ ಅಲ್ಲ. ಅದು ಕೇವಲ ಮಾಹಿತಿ ಮತ್ತು ಮನರಂಜನಾ ಮಾಧ್ಯಮವಾಗಿ ಉಳಿದುಕೊಳ್ಳುತ್ತದೆ. ನಮ್ಮ ಸೆಲ್‌ಫೋನ್‌ಗಳಲ್ಲಿ ಸಂದೇಶಗಳ ಮೂಲಕ ಬರುತ್ತಿರುವ ಸುದ್ದಿಗಳು ದೃಶ್ಯವಾಗಿ ಹರಿದುಬರಲಾರಂಭಿಸುತ್ತವೆ. ಪ್ರತಿನಿಮಿಷ ಒಂದು ಬ್ರೇಕಿಂಗ್ ನ್ಯೂಸ್ ಹುಡುಕುವುದಕ್ಕಾಗಿ ಈ ಮಾಧ್ಯಮದ ಸುದ್ದಿ ವಿಭಾಗದವರು ಸರ್ಕಸ್ ಮಾಡತೊಡಗುತ್ತಾರೆ. ಅದರೊಂದಿಗೆ ಈಗ ಕಥನ ಮಾಧ್ಯಮವಾಗಿ ಬಳಕೆಯಾಗುತ್ತಿರುವ ಮತ್ತು ದಿನವೊಂದಕ್ಕೆ ೪೨ ದೈನಿಕ ಧಾರಾವಾಹಿಗಳು ಚಿತ್ರರಗೊಳ್ಳುವುದಕ್ಕೆ ಕಡಿವಾಣ ಬೀಳುತ್ತದೆ. ಏಕೆಂದರೆ ಸೆಲ್‌ಫೋನ್‌ನಲ್ಲಿ ಅರ್ಧಗಂಟೆಯ ಕಾಲ ಸ್ಟ್ರೀಮಿಂಗ್ ವೀಡಿಯೋದ ಮೂಲಕ ಕಥೆಯನ್ನು ನೋಡುವ ಹೊಸ ಮಿಥ್‌ಗಳನ್ನು ಊಹಿಸುತ್ತಾ ಕೂರುವ ಮನಃಸ್ಥಿತಿ ಯಾರಿಗೂ ಇರುವುದಿಲ್ಲ. ಆಗ ಟೆಲಿವಿಷನ್ ನಮ್ಮ ಮನೆಗಳ ಡ್ರಾಯಿಂಗ್ ರೂಮಿನ ಬದಲಿಗೆ ನಮ್ಮ ಜೇಬಲ್ಲಿರುವ ಸೆಲ್‌ಫೋನಿನ ಪಾಲಾಗಿಬಿಟ್ಟಿರುತ್ತದೆ.

ಈಚಿಗೆ ನಡೆಯುತ್ತಿರುವ ಸಂಶೋಧನೆಗಳಲ್ಲಿ ಸಾಮಾನ್ಯ ಜನರ ಮನರಂಜನೆಗಾಗಿ ಇನ್ನೂ ಅನೇಕ ಪ್ರಯೋಗಗಳು ಆಗುತ್ತಿವೆ. ಅವುಗಳಲ್ಲಿ ನಿಸ್ತಂತು ಟೆಲಿವಿಷನ್, ಏಕರೂಪದ ಜಾಗತಿಕ ಭಾಷೆ, ಇತ್ಯಾದಿ ಅನೇಕ ಪ್ರಯತ್ನಗಳು ಆಗುತ್ತಿವೆ. ಅವುಗಳು ಬಳಕೆಗೆ ಬಂದಾಗ ಟೆಲಿವಿಷನ್ನಿನ ಸ್ವರೂಪವೇ ಬದಲಾಗುತ್ತದೆ ಎಂಬುದಂತೂ ಸತ್ಯ.

**ರಂಗಭೂಮಿ ಎಂಬ...**

ಈ ಎಲ್ಲಾ ಹಿನ್ನೆಲೆಯ ಜೊತೆಗೆ ಮರಳಿ ರಂಗಭೂಮಿಯತ್ತ ಕಣ್ಣು ಹೊರಳಿಸೋಣ. ನಮ್ಮ ಸಮಕಾಲೀನ ರಂಗಭೂಮಿ ಸಾಮಾಜಿಕ ಬದಲಾವಣೆಗಳಿಗೆ ತಕ್ಕಂತೆ ಕೇವಲ ಮನರಂಜನೆಯಷ್ಟೇ ಅಲ್ಲದೆ ಉತ್ಸವಗಳನ್ನು ಏರ್ಪಡಿಸುವ ಪ್ರಯತ್ನದಲ್ಲಿದೆ. ಕಳೆದ ಕೆಲವು ತಿಂಗಳುಗಳಲ್ಲಿ ನಮ್ಮ ರಾಜಧಾನಿಯಲ್ಲಿ ಆಗಿರುವ ರಂಗೋತ್ಸವಗಳನ್ನು ಗಮನಿಸಿದರೆ ಅಚ್ಚರಿ ಯಾಗುತ್ತದೆ. ನಮ್ಮ ಇಂದಿನ ರಂಗಭೂಮಿ ಜನಾಕರ್ಷಣೆಗೆಂದೇ ಈ ಉತ್ಸವಗಳನ್ನು ಆಯೋಜಿ ಸಿರಬಹುದು. ಇದರಿಂದಾಗಿ ರಂಗಪ್ರಯೋಗಗಳ ಸಂಖ್ಯೆಯೂ ಹೆಚ್ಚಾಗಿರಬಹುದು. ಆದರೆ ತಯಾರಾಗುತ್ತಿರುವ ನಾಟಕಗಳು ಮಾತ್ರ (ಕೆಲವು ಪ್ರಯೋಗಗಳನ್ನು ಹೊರತುಪಡಿಸಿ) ಹಾಡು-ಕುಣಿತ ಮತ್ತು ಮಲ್ಟಿಮೀಡಿಯಾ ಪ್ರಸೆಂಟೇಷನ್ನಿನ ಹಾಗೆ ಆಗಿವೆ. ಇದರಿಂದಾಗಿ ಇಂದಿನ ರಂಗಪ್ರದರ್ಶನಗಳಲ್ಲಿ ನಾಟಕದ ವಸ್ತುವಿಗಿಂತ ತಂತ್ರ ಮತ್ತು ಚಮತ್ಕಾರಗಳಿಗೆ ಹೆಚ್ಚು ಪ್ರಾಶಸ್ತ್ಯ ದೊರೆಯುತ್ತಿದೆ. ಅದರೊಡನೆಯೇ ನಮ್ಮ ನಾಟಕೋತ್ಸವಗಳಿಗೂ ಪ್ರಾಯೋಜಕರ ಆಗಮನ ವಾಗಿದೆ. ನಾಟಕದೊಂದಿಗೆ ಉಚಿತ ಊಟ – ತಿಂಡಿಯ ವ್ಯವಸ್ಥೆಯಾಗುತ್ತಿದೆ. ಇಲ್ಲಿ ನಾಟಕ ನೋಡಲು ಬರುವ ಪ್ರೇಕ್ಷಕ ರಂಗಪ್ರಯೋಗಾಸಕ್ತನೋ ಅಥವಾ ಪ್ರಾಯೋಜಕರು ನೀಡುವ ಉಚಿತ ಸೇವೆಗಳತ್ತ ಆಕರ್ಷಿತನೋ ಎಂಬುದನ್ನು ರಂಗಚರಿತ್ರೆಯು ಬಹು ಬೇಗ ತಿಳಿಸುತ್ತದೆ. ಆದರೆ ಒಂದಂತೂ ಸತ್ಯ: ನಮ್ಮ ರಂಗಭೂಮಿ ಈಗ ಹಿಂದೆಂದಿಗಿಂತಲೂ ಉತ್ಸಾಹ ದಿಂದ ಪುಟಿಯುತ್ತಿದೆ ಮತ್ತು ಅದು ಚಿರಂಜೀವ ಎಂಬುದನ್ನು ಸಾಬೀತುಪಡಿಸುತ್ತಿದೆ.

**ಹಾಗಾದರೆ...!**

ಹಾಗಾದರೆ ಲೇಖನದ ಆರಂಭದಲ್ಲಿ ಸೂಚಿಸಿದ ಪ್ರಶ್ನೆಗಳ ಮತ್ತು ಪ್ರಶ್ನೆ ಕೇಳುತ್ತಿರುವವರಿಗೆ ಉತ್ತರವೇನು ? ಅದು ಸರಳ. ನೋಡುಗ ಮತ್ತು ನೀಡುಗ (ಅಭಿನಯ ಎನ್ನುವುದು ನೀ ಧಾತುವಿನಿಂದ ಹುಟ್ಟಿರುವ ಹಿನ್ನೆಲೆಯಲ್ಲಿ ನಟ ಎಂದರೆ ನೀಡುವವನು ಎಂದು ಅರ್ಥೈಸಿ ನೀಡುಗ ಎಂದಿದ್ದೇನೆ) ಎಂದೂ ಸಾಯುವುದಿಲ್ಲ. ಸಧ್ಯಕ್ಕೆ ಸತ್ತಿರುವುದು ವಿಮರ್ಶೆ. ನಮ್ಮ ಮುದ್ರಣ ಮಾಧ್ಯಮಗಳು ಜಾಹೀರಾತು ಪ್ರಣೀತ ಪತ್ರಿಕೋದ್ಯಮವನ್ನು ಆರಂಭಿಸಿರುವ ಹಿನ್ನೆಲೆಯಲ್ಲಿ ಪತ್ರಿಕೆಗಳಲ್ಲಿ ವಿಸ್ತೃತ ವಿಮರ್ಶೆ ರಾಜಕೀಯ ಮತ್ತು ವ್ಯಾಪಾರಕ್ಕೆ ಹೊರತುಪಡಿಸಿ ಮತ್ತಾವುದೇ ಅಂಗಕ್ಕೂ ದೊರೆಯು ತ್ತಿಲ್ಲ. ಹೀಗಾಗಿ ನಮ್ಮಲ್ಲಿ ಎರಡು ದಶಕಗಳ ಹಿಂದೆ ಇದ್ದಂತಹ ಗಂಭೀರ ವಿಮರ್ಶೆ ಮತ್ತು ವಿಮರ್ಶಕ ಇಬ್ಬರೂ ಈಗ ನಾಪತ್ತೆಯಾಗಿದ್ದಾರೆ. ಕೆಲವು ರಂಗಪತ್ರಿಕೆಗಳು ಈ ಕೆಲಸವನ್ನು ಸಣ್ಣ ಮಟ್ಟದಲ್ಲಿ ಮಾಡುತ್ತಿವೆಯಾದರೂ ಒಟ್ಟಾರೆಯಾಗಿ ಈಗ ಸಾವಿನಂಚಿಗೆ ಬಂದಿರುವುದು ನಮ್ಮ ರಂಗಭೂಮಿಯಲ್ಲ, ರಂಗವಿಮರ್ಶೆ ಎಂದೆನ್ನಬಹುದು.

ಇದು ಇಲ್ಲಿಗೇ ಮುಗಿಯುವ ಚರ್ಚೆಯಲ್ಲ. ಇನ್ನೂ ಅವಕಾಶವಿದೆ. ಈ ವೇದಿಕೆಯಲ್ಲಿ ಇಷ್ಟು ಅನಿಸಿಕೆ ಹಂಚಿಕೊಂಡಿದ್ದೇನೆ. ನಿಮ್ಮ ಅಭಿಪ್ರಾಯಗಳನ್ನು ತಿಳಿದುಕೊಂಡ ನಂತರ ಮಾತು ಮುಂದುವರಿಸೋಣ. ನಮ್ಮ ಮಾತಿಗೂ ನಿರಂತರತೆ ಬರಲಿ. ರಂಗಚರ್ಚೆ ಯೊಂದಿಗೆ ನಮ್ಮ ಪ್ರೀತಿಯ ರಂಗಭೂಮಿಯನ್ನು ಜೀವಂತವಾಗಿಸಿಕೊಳ್ಳೋಣ.

**ಬಿ. ಸುರೇಶ**
ಮೀಡಿಯಾ ಹೌಸ್ ಸ್ಟುಡಿಯೊ, ನಂ. ೧೧೬೨, ೨೨ನೇ ಅಡ್ಡರಸ್ತೆ, ೨೩ನೇ ಮುಖ್ಯರಸ್ತೆ
ಬಿ.ಎಸ್.ಕೆ. ೨ನೇ ಹಂತ, ಬೆಂಗಳೂರು - ೫೬೦ ೦೭೦

ಕನ್ನಡ ನವೋದಯ ಸಾಹಿತ್ಯಕ್ಕೆ ಪ್ರೇರಣೆಗಳಾಗಿದ್ದ ಹಲವಾರು ಅಂಶಗಳಲ್ಲಿ ವಸಾಹತುಶಾಹಿ ವಿರುದ್ಧದ ಹೋರಾಟವೂ ಒಂದು. ಬ್ರಿಟಿಷ್ ವಸಾಹತುವನ್ನು ಧಿಕ್ಕರಿಸುವ ಸಂದರ್ಭದಲ್ಲಿ ಕನ್ನಡದ ನವೋದಯ ಸಾಹಿತಿಗಳು ದೇಶೀಯತೆಯನ್ನು ಬೆಳೆಸುವ ಕೆಲಸವನ್ನು ಮಾಡಿದರು. ದೇಶಪ್ರೇಮ ಕಾದಂಬರಿಗಳು, ಕವನಗಳು, ನಾಟಕಗಳು ಹಾಗೂ ಇತರ ಸಾಹಿತ್ಯ ಪ್ರಕಾರಗಳು ವಿಪುಲವಾಗಿ ಕಂಡುಬಂದವು. ದೇಶೀಯತೆಯನ್ನು ಎತ್ತಿಹಿಡಿಯುವುದರ ಜೊತೆಗೆ ಹಲವಾರು ಆಂತರಿಕ ಸಮಸ್ಯೆಗಳನ್ನು ಕುರಿತ ಹೋರಾಟಗಳನ್ನು ರೂಪಿಸುವುದು ಕೂಡ ಅನಿವಾರ್ಯವಾಗಿತ್ತು. ಇವುಗಳಲ್ಲಿ ಅನ್ಯಭಾಷೆಗಳ ಹಿಡಿತ, ಸಾಮಾಜಿಕ ಅನಿಷ್ಟಗಳು, ದೇಶೀಯ ಪ್ರಭುತ್ವ ಇವೇ ಮೊದಲಾದವು ಮುಖ್ಯವಾದವು. ಒಂದು ಕಡೆಯಿಂದ ಬ್ರಿಟಿಷರನ್ನು ತೊಲಗಿಸುವ ಗುರಿ ಇನ್ನೊಂದೆಡೆ ಭಾಷಿಕವಾಗಿ ಕರ್ನಾಟಕವು ಒಂದಾಗಬೇಕೆಂಬ ಆಶಯ, ಆ ಕಾಲದ ಬಹುತೇಕ ಲೇಖಕರಲ್ಲಿತ್ತು. ಹಾಗಾಗಿ ದೇಶಭಕ್ತಿ ಗೀತೆ ರಚನೆಗಳಲ್ಲಿ ರಾಜ್ಯನಿಷ್ಠೆಯ ಅಂಶಗಳೂ ಕಾಣಿಸಿಕೊಂಡಿವೆ. ಈ ಹಿನ್ನೆಲೆಯಲ್ಲಿ ಕುವೆಂಪು ಅವರ ದೇಶಭಕ್ತಿ ಗೀತೆಗಳಿಗೆ ರಾಷ್ಟ್ರೀಯತೆಯು ಯಾವ ರೀತಿ ಪ್ರೇರಣೆಯನ್ನು ನೀಡಿದೆಯೆಂದು ವಿಶ್ಲೇಷಿಸುವ ಅಗತ್ಯತೆಯಿದೆ. ಆ ನಿಟ್ಟಿನಲ್ಲಿ, 'ಪಾಂಚಜನ್ಯ' ಹಾಗೂ 'ಇಕ್ಷುಗಂಗೋತ್ರಿ' ಸಂಕಲನದ ಕೆಲವು ಕವನಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ.

ಯಾವುದೇ ಸಾಹಿತ್ಯ ಪ್ರಕಾರ ಅದು ತಕ್ಷಣದ ಪ್ರತಿಕ್ರಿಯೆಯಾಗಿ ಬಂದಾಗ ವಾಚ್ಯವಾಗಿಬಿಡುವ ಸಾಧ್ಯತೆ ಹೆಚ್ಚಾಗಿರುತ್ತದೆ. ಕಾವ್ಯ ಪ್ರಕಾರಕ್ಕೆ ಈ ಮಾತು ಹೆಚ್ಚು ಅನ್ವಯವಾಗುತ್ತದೆ. ಕುವೆಂಪು ದೇಶದ ಆಗುಹೋಗುಗಳಿಗೆ ಕಾವ್ಯದ ಮೂಲಕ ಕೂಡಲೆ ಪ್ರತಿಕ್ರಿಯೆ ನೀಡಿದವರು. ಹಾಗಾಗಿ ಅವರದು ನೇರ ಹೇಳಿಕೆಗಳಿಂದ ಕೂಡಿದ ಕಾವ್ಯವಾಗಿದೆ. ಸಮಾಜಮುಖೀ ಕಾವ್ಯದ ಮುಖ್ಯಲಕ್ಷಣವೂ ಇದೇ ಆಗಿದೆ. ಈ ಮಾತನ್ನು ಹೇಳಲು ಕಾರಣವೇನೆಂದರೆ, ಬಹಳಷ್ಟು ವಿಮರ್ಶಕರು ಕುವೆಂಪು ಅವರ ಚಾರಿತ್ರಿಕ ಒತ್ತಡವನ್ನು ಗಮನಿಸದೆ, ಅವರ ಕವನಗಳು ಹೇಳಿಕೆಗಳ ಗುಚ್ಛವೆಂದೂ ವಾಚಾಳಿತನದ ಭಾರದಿಂದ ಕುಗ್ಗಿವೆ ಎಂದೂ ಹೇಳುವುದುಂಟು. ಮತ್ತೆ ಕೆಲವರು ಇದೇ ಕಾರಣವನ್ನು ಮುಂದಿಟ್ಟು ಕುವೆಂಪು ಅವರು ಕವಿಯೇ ಅಲ್ಲವೆಂಬ ತೀರ್ಮಾನಕ್ಕೆ ಬರುತ್ತಾರೆ! ಇದೇ ಬಗೆಯ ಆಪಾದನೆಯನ್ನು ದಲಿತ-ಬಂಡಾಯ ಸಂದರ್ಭದ ಲೇಖಕರ ಬಗ್ಗೆಯೂ ಮಾಡಲಾಗಿದೆ. ದಲಿತ-ಬಂಡಾಯ ಕವನಗಳು ಕೇವಲ ಹೇಳಿಕೆಗಳು, ಅವುಗಳು ಕಾವ್ಯವೇ ಅಲ್ಲ ಎನ್ನುವ ವಿಮರ್ಶಕರಿದ್ದಾರೆ. ದಲಿತ ಬಂಡಾಯ ಚಳುವಳಿಯೂ ಕೂಡ ಸಮಾಜಮುಖಿ ಆದುದರಿಂದ ಘೋಷಣೆಗಳನ್ನು ಕೂಗಿ ಒಂದು ಸಮುದಾಯವನ್ನು ಬಡಿದೆಬ್ಬಿಸುವುದು ಅನಿವಾರ್ಯವಾಗಿದೆ. ನವ್ಯದ ಬಹುತೇಕ ವಿಮರ್ಶಕರು ಇಂಥವನ್ನು ಗಮನಿಸದೆ 'ಕಲಾಕೃತಿ' 'ಸೃಜನಶೀಲತೆ' ಇತ್ಯಾದಿ ಪದಗಳನ್ನು ಪ್ರಯೋಗಿಸುತ್ತ ಶ್ರೇಷ್ಠ-ಕನಿಷ್ಠದ ತೀರ್ಮಾನಗಳನ್ನು ಕೊಡುವುದರಲ್ಲೇ ಮುಳುಗಿರುವುದನ್ನು ನಾವು ಈಗಲೂ ಕಾಣಬಹುದು.

ಕುವೆಂಪು ಅವರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ದೊರೆಯಬೇಕು ಎನ್ನುವ ಆಶಯದೊಂದಿಗೆ ಅಖಂಡ ಕರ್ನಾಟಕವು ಒಂದಾಗಬೇಕು ಎನ್ನುವ ಆಶಯವೂ ಇತ್ತು. ಹಾಗಾಗಿ ಭಾರತವು 'ಜನನಿ' ಕರ್ನಾಟಕವು 'ತನುಜಾತೆ' ಎನ್ನುವ ಪರಿಕಲ್ಪನೆ ಮುಖ್ಯವಾಗಿದೆ.

ಸ್ವಾತಂತ್ರ್ಯದ ತುಡಿತವನ್ನು ಅವರ ಹಲವು ಕವನಗಳಲ್ಲಿ ಕಾಣಬಹುದು. ಶೌರ್ಯವನ್ನು ದೇಶೀಯರಲ್ಲಿ ತುಂಬಿಸುತ್ತ,

*ನಡೆ ಮುಂದೆ, ನಡೆ ಮುಂದೆ*<br>
*ನುಗ್ಗಿ ನಡೆ ಮುಂದೆ !*



# ಕುವೆಂಪು ಅವರ ದೇಶಭಕ್ತಿಗೀತೆಗಳಿಗೆ ರಾಷ್ಟ್ರೀಯತೆಯ ಪ್ರೇರಣೆ

*ಜಗ್ಗದೆಯ ಕುಗ್ಗದೆಯೆ*<br>
*ಹಿಗ್ಗಿ ನಡೆ ಮುಂದೆ !* (ಪಾಂಚಜನ್ಯ)

ಎಂದು ಕರೆ ನೀಡಿದ್ದಾರೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ದೇಶವನ್ನು ತಾಯಿ ಎಂದು ನಮ್ಮ ಹೋರಾಟಗಾರರು ಗ್ರಹಿಸಿದರು. ಇನ್ನೂ ಮುಂದಕ್ಕೆ ಹೋದ ಕೆಲವರು 'ಭಾರತಾಂಬೆ' 'ದೇವಿ' ಇತ್ಯಾದಿ ಪರಿಕಲ್ಪನೆಗಳನ್ನು ನೀಡಿದರು. ಹೋರಾಟಕ್ಕೆ ಜನರನ್ನು ಒಟ್ಟುಗೂಡಿಸಲು ಇದು ಅನಿವಾರ್ಯವೂ ಆಗಿತ್ತು. ಕುವೆಂಪು ಅವರಿಗೆ ಪ್ರೇರಣೆ ನೀಡಿದ ಈ ಅಂಶವು ಅವರ ವೈಚಾರಿಕ ನಿಲುವು ಬೆಳೆಯಲು ಕಾರಣವಾಯಿತು. ಯಾವುದೋ ಕಣ್ಣಿಗೆ ಕಾಣದ ದೇವರನ್ನು ಪೂಜಿಸುವುದಕ್ಕಿಂತ ದೇಶವನ್ನು ದೇವರೆಂದು ಯಾಕೆ ಗ್ರಹಿಸಬಾರದು ? ದೇಶದ ಪ್ರಮುಖ ಚಿಂತಕರ, ಕವಿಗಳ, ದಾರ್ಶನಿಕರ ವಿಚಾರಗಳನ್ನು ಯಾಕೆ ಮರುಪರಿಶೀಲಿಸಬಾರದು ಎಂಬುದು ಅವರ ನಿಲುವು. ಹಾಗಾಗಿ ಅವರು,

*ನೂರು ದೇವರನೆಲ್ಲ ನೂಕಾಚೆ ದೂರ*<br>
*ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ*<br>
*ಬಾರ !*

ಎನ್ನುತ್ತಾ (ಇಂದಿನ ದೇವರು)

*ನಾವೆ ದೇವತೆಗಳೈ ! ಭಾರತವೆ ಸ್ವರ್ಗವೈ !*<br>
*ಭಾರತಾಂಬೆಯೆ ನಮಗೆ ದೇವಿಯೈ, ಜನನಿ !*

ಎಂದು ಕರೆಕೊಟ್ಟಿರುವುದನ್ನು ಗಮನಿಸಬಹುದು. ಎಲ್ಲ ದೇವರುಗಳನ್ನು ತಿರಸ್ಕರಿಸಿ ಮನುಷ್ಯನೇ ದೇವರು ಎನ್ನುವ ನಿಲುವಿಗೆ ಕವಿ ಬರುವುದನ್ನು ಇಲ್ಲಿ ಗಮನಿಸಬಹುದು. ಈ ಮಾನವತಾವಾದದ ಪ್ರೇರಣೆಯೇ ಅವರಲ್ಲಿ ದೇಶೀಯ ಚಿಂತನೆಯನ್ನು ಗಟ್ಟಿಗೊಳಿಸಲು ಕಾರಣವಾಗಿದೆ. ಯೇಸು ಕ್ರಿಸ್ತ, ಬುದ್ಧ, ಅರವಿಂದ, ಗಾಂಧೀಜಿ ಮೊದಲಾದವರ ಆದರ್ಶಗಳು ಚಿಂತನೆಗಳು ಕುವೆಂಪು ಅವರ ಆಲೋಚನಾ ಕ್ರಮವನ್ನು ರೂಪಿಸಿವೆ. ತನ್ನ ಸ್ಫೂರ್ತಿಯ ಸೆಲೆಯನ್ನು ಅವರು ಕುಮಾರವ್ಯಾಸನಲ್ಲಿ ಕಂಡುಕೊಂಡಿದ್ದಾರೆ :

ಯಾವುದೇ ಸಾಹಿತ್ಯ ಪ್ರಕಾರ ಅದು ತಕ್ಷಣದ ಪ್ರತಿಕ್ರಿಯೆಯಾಗಿ ಬಂದಾಗ ವಾಚ್ಯವಾಗಿಬಿಡುವ ಸಾಧ್ಯತೆ ಹೆಚ್ಚಾಗಿರುತ್ತದೆ. ಕಾವ್ಯ ಪ್ರಕಾರಕ್ಕೆ ಈ ಮಾತು ಹೆಚ್ಚು ಅನ್ವಯವಾಗುತ್ತದೆ. ಕುವೆಂಪು ದೇಶದ ಆಗುಹೋಗುಗಳಿಗೆ ಕಾವ್ಯದ ಮೂಲಕ ಕೂಡಲೆ ಪ್ರತಿಕ್ರಿಯೆ ನೀಡಿದವರು. ಹಾಗಾಗಿ ಅವರದು ನೇರ ಹೇಳಿಕೆಗಳಿಂದ ಕೂಡಿದ ಕಾವ್ಯವಾಗಿದೆ. ಸಮಾಜಮುಖೀ ಕಾವ್ಯದ ಮುಖ್ಯಲಕ್ಷಣವೂ ಇದೇ ಆಗಿದೆ. ಈ ಮಾತನ್ನು ಹೇಳಲು ಕಾರಣವೇನೆಂದರೆ, ಬಹಳಷ್ಟು ವಿಮರ್ಶಕರು ಕುವೆಂಪು ಅವರ ಚಾರಿತ್ರಿಕ ಒತ್ತಡವನ್ನು ಗಮನಿಸದೆ, ಅವರ ಕವನಗಳು ಹೇಳಿಕೆಗಳ ಗುಚ್ಛವೆಂದೂ ವಾಚಾಳಿತನದ ಭಾರದಿಂದ ಕುಗ್ಗಿವೆಯೆಂದೂ ಹೇಳುವುದುಂಟು. ಮತ್ತೆ ಕೆಲವರು ಇದೇ ಕಾರಣವನ್ನು ಮುಂದಿಟ್ಟು ಕುವೆಂಪು ಅವರು ಕವಿಯೇ ಅಲ್ಲವೆಂಬ ತೀರ್ಮಾನಕ್ಕೆ ಬರುತ್ತಾರೆ !

ಪಿ. ಬಿ. ಪ್ರಸನ್ನ

*ಕುಮಾರವ್ಯಾಸನು ಹಾಡಿದನೆಂದರೆ*
*ಕಲಿಯುಗ ದ್ವಾಪರವಾಗುವುದು !*
*ಭಾರತ ಕಣ್ಣಲಿ ಕುಣಿಯುವುದು, ಮೈಯ್ಯಲಿ*
*ಮಿಂಚಿನ ಹೊಳೆ ತುಳುಕಾಡುವುದು !*
*ಕಲಿ ಕೆಚ್ಚಾಗುವನು*
*ಕವಿ ಹುಚ್ಚಾಗುವನು !* (ಕುಮಾರವ್ಯಾಸ)

ಎಂದಿದ್ದಾರೆ.

ರಾಷ್ಟ್ರೀಯತೆಯ ಪ್ರೇರಣೆಯು ಮಾನವತಾವಾದದ ಚಿಂತನೆಗೂ ಕಾರಣವಾಗಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಡುವ ಸತ್ಯಾಗ್ರಹಿಯನ್ನು 'ಕಲಿಯುಗದ ಪ್ರಚ್ಛನ್ನ ಕಲ್ಕಿ' ಎಂದು ಕರೆದಿದ್ದಾರೆ. ಮನುಷ್ಯನಲ್ಲಿ ಎಲ್ಲ ಒಳ್ಳೆಯ ಗುಣಗಳೂ ಇವೆ. ಅದನ್ನು ಸರಿಯಾಗಿ ಬಳಸಿಕೊಂಡರೆ ಒಬ್ಬ ಉತ್ತಮ ವ್ಯಕ್ತಿಯಾಗಿ ರೂಪುಗೊಳ್ಳಬಹುದು; ಇಲ್ಲದಿದ್ದರೆ, ಆತ ವಿಪ್ಲವಮೂರ್ತಿಯಾಗಬಹುದು ಎಂದು 'ವಿಪ್ಲವಮೂರ್ತಿ' ಕವನದಲ್ಲಿ ಚಿತ್ರಿಸಿದ್ದಾರೆ.

*ಮಾನವನೆ ದೇವತೆಯು ; ನರನೆ ನಾರಾಯಣನು*
*ನಮ್ಮ ವಿಶ್ವಕೆ ನಾವೆ ನಿರುಪಮಾದ್ಭುತವಯ್ಯ !*
*ಕ್ರಿಸ್ತ ಬುದ್ಧರು ಎಲ್ಲ 'ಅಹಮಸ್ಮಿ' ಸಾಗರದಿ*
*ಮಿಂಚಿ ಮುಳುಗುವ ಬರಿಯ ಕಿರಿಯ*
*ಬುದ್ಬುದವಯ್ಯ !*
(ಆತ್ಮಶ್ರದ್ಧೆ)

ಎಂದು ಕರೆಕೊಡುವ ಕವಿಯಲ್ಲಿ ಆತ್ಮವಿಶ್ವಾಸ ತುಂಬಿ ತುಳುಕುವುದನ್ನು ಕಾಣಬಹುದು. ಮಾನವತಾವಾದದ ಇನ್ನೊಂದು ರೂಪವೇ ಸಾಮಾಜಿಕ ಅಸಮಾನತೆಯ ವಿರುದ್ಧದ ಹೋರಾಟ. ದೇಶಕ್ಕೆ ಸ್ವಾತಂತ್ರ್ಯ ಸಿಗಬೇಕು, ಕರ್ನಾಟಕ ಒಂದಾಗಬೇಕು, ಎಲ್ಲವೂ ನಿಜವೇ ಆದರೆ ಸಾಮಾಜಿಕವಾಗಿ ಎಲ್ಲರೂ ಒಂದಾಗದಿದ್ದರೆ ಏನು ಪ್ರಯೋಜನ? ಎಂದು ಬಹಳಷ್ಟು ಮಂದಿ ಸ್ವಾತಂತ್ರ್ಯ ಹೋರಾಟಗಾರರು ಆಲೋಚಿಸಿದ್ದರು. ಕುವೆಂಪು ಅವರೂ ಕೂಡ ಈ ಅಂಶವನ್ನು ಮುಂದಿಟ್ಟುಕೊಂಡು 'ಕಲ್ಕಿ', 'ಅವತಾರ' ಮೊದಲಾದ ಕವನಗಳನ್ನು ರಚಿಸಿದ್ದಾರೆ. ವರ್ಗ ಅಸಮಾನತೆಯ ವಿರುದ್ಧ 'ರಕ್ತಧುನಿ' ಕವನದಲ್ಲಿ ತಮ್ಮ ಧ್ವನಿ ಎತ್ತಿದ್ದಾರೆ.

ದೇಶೀಯ ಪ್ರಭುತ್ವವನ್ನು ಕೂಡ ಧಿಕ್ಕರಿಸಿದ ಕುವೆಂಪು ಅವರಿಗೆ ಸ್ವತಂತ್ರ ಪ್ರಜಾಸತ್ತಾತ್ಮಕ ಸರ್ಕಾರ, – ಸಮಾನತೆಯ ಸಮಾಜದ ಬಗ್ಗೆ ನಂಬಿಕೆ ಇತ್ತು ಎನ್ನುವುದಕ್ಕೆ ಅವರ 'ಕವಿ' ಕವನವೇ ಸಾಕ್ಷಿ :

*ವಸಂತ ವನದಲಿ ಕೂಗುವ ಕೋಗಿಲೆ*
*ರಾಜನು ಬಿರುದನು ಬಯಸುವುದಿಲ್ಲ*
............
...........
*ಕೆಂಗಿಡಿ ಬಣ್ಣದ ಹೊಂಗೆರೆ ಮಿಂಚಿಗೆ*
*ಆಸ್ಥಾನದ ದಾಸ್ಯದ ಹುರುಪಿಲ್ಲ*
............
............
*ಕವಿಗರಸು ಗಿರಸುಗಳ ಋಣವಿಲ್ಲ !*
*ಅವನಗ್ನಿಮುಖಿ !*
*ಪ್ರಲಯಶಿಖಿ !*

ಎಂದಿರುವ ಕುವೆಂಪು ಅವರಲ್ಲಿ ಎಂಥ ಸ್ವಾಭಿಮಾನ ಉಕ್ಕುತ್ತಿತ್ತು ಹಾಗೂ ಅರಸೊತ್ತಿಗೆಯ ಬಗ್ಗೆ ಎಂಥ ತಾತ್ಸಾರವಿತ್ತು ಎನ್ನುವುದನ್ನು ಗಮನಿಸಬಹುದು. ವಿಶ್ವವಿದ್ಯಾನಿಲಯವು ಕುವೆಂಪು ಅವರಿಗೆ ಎಚ್ಚರಿಕೆಯ ನೋಟಿಸನ್ನು ಕೊಟ್ಟಾಗಲೂ ಅವರು, 'ಅದ್ಭುತ ರಾಮಾಯಣ ಅಥವಾ ವಾಲ್ಮೀಕಿಗೊಂದು ಎಚ್ಚರಿಕೆ' ಕವನವನ್ನು ಬರೆದು ಅಧಿಕಾರಶಾಹಿಯ ವಿರುದ್ಧ ತಮ್ಮ ಪ್ರತಿಭಟನೆಯನ್ನು ಸೂಚಿಸಿದ್ದಾರೆ.

ಪುರೋಹಿತಶಾಹಿಯ ವಿರುದ್ಧ ಆ ಕಾಲದಲ್ಲಿಯೇ ಖಚಿತವಾದ ಧ್ವನಿಯಿಂದ ಮಾತನಾಡಿದವರು ಕುವೆಂಪು. ಪ್ರಸಿದ್ಧ ಯಾತ್ರಾಸ್ಥಳವಾದ ಧರ್ಮಸ್ಥಳದ ವಿರುದ್ಧ ೧೯೪೦ರಲ್ಲಿಯೇ 'ಧರ್ಮಸ್ಥಳ' ಎನ್ನುವ ಕವನದ ಮೂಲಕ ಪ್ರತಿಕ್ರಿಯೆ ನೀಡಿದ್ದಾರೆ :

*ಎಲ್ಲಿ ಮತ್ಸರವಳಿದು ಮೈತ್ರಿ ಮೂಡುವುದಲ್ಲಿ*
*ಮೂಡಿತೆಂದೇ ತಿಳಿಯೋ ಧರ್ಮಸ್ಥಲ*
*ಸುಲಿಗೆ ವಂಚನೆ ಹಿಂಸೆಗಳನುಳಿದವನ ಮನವೆ*
*ಮಂಜುನಾಥನ ಮಂಚ, ಹೃದಯ ಕಮಲ !*

ರಾಷ್ಟ್ರೀಯ ಆಂದೋಲನಕ್ಕೆ ಕನ್ನಡದಲ್ಲಿ ಕುವೆಂಪು ಅವರಷ್ಟು ತೀವ್ರವಾಗಿ ಕ್ಷಣ ಕ್ಷಣಕ್ಕೂ ಪ್ರತಿಕ್ರಿಯೆ ನೀಡಿದ ಕವಿಗಳು ವಿರಳ. ಎರಡನೆಯ ಮಹಾಯುದ್ಧದ ಸಂದರ್ಭದಲ್ಲಿ ಜಪಾನೂ ಭಾಗವಹಿಸಿ ಅದರ ಬಿಸಿ ಭಾರತಕ್ಕೆ ತಟ್ಟಿದ ಸಂದರ್ಭದಲ್ಲಿ ಬರೆದ 'ಏನೆಂದು ಪ್ರಾರ್ಥಿಸಲಿ ?' ಕವನದಲ್ಲಿ ಲೋಕಕ್ಕೆ ಶಾಂತಿ ದೊರಕಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ. ಬಂಗಾಳದ ವಿಭಜನೆಯ ಸಂದರ್ಭದಲ್ಲಿ ಉಂಟಾದ ದುರಂತಕ್ಕೆ ಪ್ರತಿಕ್ರಿಯೆಯಾಗಿ 'ಪತ್ರಿಕಾ ಗವಾಕ್ಷ' ಎನ್ನುವ ಕವನ ಮೂಡಿಬಂದಿದೆ. ಪೂರ್ವ ಬಂಗಾಳದ ನೌಕಾಲಿಯಲ್ಲಿ ನಡೆದ ಮಹಿಳೆಯರ ಮೇಲಿನ ಅತ್ಯಾಚಾರ, ಬಲಾತ್ಕಾರ ಮತಾಂತರದ ವಿರುದ್ಧ 'ಕವನ ಮಾತ್ರವೆ ಕೇಳ್ ಶಕ್ತಿಮಂತ್ರ', ಕ್ರಿಪ್ಸ್ ಸಂಧಾನ ಮುರಿದು ಬಿದ್ದ ಸಮಯದಲ್ಲಿ ಬರೆದ 'ಧಿಕ್ ಧಿಕ್ ಧಿಕ್' ಎನ್ನುವ ಕವನಗಳು ಮುಖ್ಯವಾದವು. ಗಾಂಧೀಜಿಯ ಬಗೆಗೆ ಕುವೆಂಪು ಅವರಿಗಿದ್ದ ನಂಬಿಕೆ, ಶ್ರದ್ಧೆ ಅಪಾರ.

ಸ್ವಾತಂತ್ರ್ಯ ದೊರಕಿದ ದಿನದಂದು ಬರೆದ 'ಶ್ರೀ ಸ್ವಾತಂತ್ರ್ಯೋದಯ ಮಹಾಪ್ರಗಾಥಾ'ದಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರಕಿದುದರ ಕುರಿತಾದ ತಮ್ಮ ಹರ್ಷವನ್ನು ವ್ಯಕ್ತಪಡಿಸಿದ್ದಾರೆ. ಆದರೆ ದೇಶ ವಿಭಜನೆಯನ್ನು ಕುವೆಂಪು ವಿರೋಧಿಸಿದ್ದಾರೆ. ದೇಶ ವಿಭಜನೆಯಾಗಿದ್ದರೂ ಮುಂದೆ ಅದು ಒಂದಾಗಬಹುದು ಎನ್ನುವ ಆಶಯವನ್ನು ವ್ಯಕ್ತಪಡಿಸಿದ್ದಾರೆ.




ಕನ್ನಡದ ಬಗೆಗೆ, ಕರ್ನಾಟಕದ ಏಕೀಕರಣದ ಬಗೆಗೆ ಅವರಿಗಿದ್ದ ನಿಲುವುಗಳು ಗಮನಾರ್ಹ. ದೇಶಕ್ಕೆ ಸ್ವಾತಂತ್ರ್ಯ ಸಿಗುವ ಮೊದಲು ಉಪರಾಷ್ಟ್ರೀಯತೆಯ ನೆಲೆಯಲ್ಲಿ ಕನ್ನಡದ ನಿಲುವನ್ನು ಪ್ರಸ್ತಾಪಿಸಿದ್ದಾರೆ. 'ಕಂದ ಕನ್ನಡನಿವನು ಕೈ ಬಿಡದಿರಮ್ಮ', 'ಅಳುಕದೀ ಕನ್ನಡಂ' ಮೊದಲಾದ ಕವನಗಳಲ್ಲಿ ಕನ್ನಡ ಪರಂಪರೆಯ ವೈಭವದ, ಕನ್ನಡಕ್ಕೆ ಮೊದಲ ಆದ್ಯತೆಯನ್ನು ನೀಡಬೇಕೆಂಬ ಚಿತ್ರಣವಿದೆ. 'ಏಕೈಕ ಕರ್ನಾಟಕ' ಎನ್ನುವ ಕವನದಲ್ಲಿ

'ಭಾರತಾಂಬೆಯ ಕನ್ಯೆ ಕನ್ನಡಾಂಬೆಯೆ ಧನ್ಯೆ' ಎನ್ನುವ ಮಾತಿನಲ್ಲಿ ಭಾರತವು ತಾಯಿ, ಕರ್ನಾಟಕವು ಅದರ ಮಗಳು ಎಂಬ ನಿಲುವು ಮುಖ್ಯವಾಗುತ್ತದೆ. ಅದೇ ಕವನದಲ್ಲಿ ಕರ್ನಾಟಕದ ಗಡಿಯನ್ನು ಗುರುತಿಸುತ್ತ

*ಕಾವೇರಿ ಸಿರಿಯಡಿಯ, ಗೋದಾವರಿ ಮುಡಿಯ,*
*ಮೂಡುಮಲೆಯೆಡದ ಗಡಿಯ,*
*ಪಡುಗಲ ಬಲದ ತಡಿಯ;*

ಎಂದು ಹೇಳಿದ ಮಾತುಗಳು ಗಮನಾರ್ಹವಾಗಿವೆ. ಕರ್ನಾಟಕದ ಗಡಿಯ ಬಗ್ಗೆ ಕವಿಯ ಕಲ್ಪನೆ ಸ್ಪಷ್ಟವಾಗಿತ್ತು.

ಸ್ವಾತಂತ್ರ್ಯಾನಂತರದಲ್ಲಿ ಅಖಂಡ ಕರ್ನಾಟಕ ಎನ್ನುವುದು ಬರಿಯ ಭ್ರಮೆಯಲ್ಲ ಎಂದು ಘೋಷಿಸಿದರು ಕುವೆಂಪು.

*ಕರ್ನಾಟಕ ಎಂಬುದೇನು*
*ಹೆಸರೆ ಬರಿಯ ಮಣ್ಣಿಗೆ ?*
*ಮಂತ್ರ ಕಣಾ ! ಶಕ್ತಿ ಕಣಾ !*
*ತಾಯಿ ಕಣಾ ! ದೇವಿ ಕಣಾ !*

(ಅಖಂಡ ಕರ್ನಾಟಕ)

ಎಂದು ಆವೇಶದಿಂದ ನುಡಿದಿದ್ದಾರೆ.

ಕುವೆಂಪು ಅವರ ಕವನಗಳ ಭಾಷೆಯ ಬಗೆಗೂ ಒಂದು ಅಂಶವನ್ನು ಹೇಳಬೇಕಾಗಿದೆ. ಕುವೆಂಪು ಅವರ ಬಹುಪಾಲು ಕವನಗಳ ಭಾಷೆ ಹೊಸಗನ್ನಡವಲ್ಲ. ಅದು ಹಳೆಗನ್ನಡ, ನಡುಗನ್ನಡದ ಶೈಲಿಯೂ ಅಲ್ಲ. ಸಂಸ್ಕೃತ ಭೂಯಿಷ್ಠವಾದ ಹಳೆಗನ್ನಡ, ನಡುಗನ್ನಡ ಮಿಶ್ರಣದ ಶೈಲಿ. ವಸಾಹತುಶಾಹಿಗೆ ಭಾಷೆಯ ಮೂಲಕವೂ ಕೂಡ ಕಾವ್ಯದಲ್ಲಿ ಪ್ರತಿಕ್ರಿಯೆ ನೀಡಿದವರೆಂದರೆ ಕುವೆಂಪು ಮಾತ್ರ. ಗದ್ಯಕ್ಕೆ ಬಂದಾಗ ಕುವೆಂಪು ಸಮಕಾಲೀನ ಕನ್ನಡವನ್ನು ಬಳಸಿಕೊಂಡಿದ್ದಾರೆ. ಆದರೆ ಕಾವ್ಯದ ಭಾಷೆಯು ದೇಶೀಯ ನೆಲೆಯಲ್ಲಿ ಅಭಿವ್ಯಕ್ತಿಯಾದಾಗ ಪ್ರಜ್ಞಾಪೂರ್ವಕವಾಗಿ ಭಿನ್ನವಾಗಿದೆ ಎನ್ನಬಹುದು. ಹೀಗೆ ರಾಷ್ಟ್ರೀಯತೆಯ ಪ್ರೇರಣೆಯು ಕುವೆಂಪು ಅವರ ಕಾವ್ಯವನ್ನು ರೂಪಿಸಿದೆ.

*(ಶೈಕ್ಷಣಿಕ ಸಿಬ್ಬಂದಿ ಮಹಾವಿದ್ಯಾಲಯ, ಮೈಸೂರು, ಇಲ್ಲಿ ಸಂಯೋಜಿಸಲ್ಪಟ್ಟಿದ್ದ ೨೦ನೆಯ ಕನ್ನಡ ಪುನಶ್ಚೇತನ ಶಿಬಿರದಲ್ಲಿ ಮಂಡಿಸಿದ ಪ್ರಬಂಧ)*

**ಪಿ. ಬಿ. ಪ್ರಸನ್ನ**
ವಿಧಾತ್ರಿ, ಮನೆ ಸಂ. ೪, ೧೧ನೇ ಮುಖ್ಯರಸ್ತೆ,
ಜೆ. ಪಿ. ನಗರ 'ಡಿ' ಬ್ಲಾಕ್, ಮೈಸೂರು - ೫೭೦ ೦೦೮

# ದಾಸಸಾಹಿತ್ಯದಲ್ಲಿ ಮಹಿಳಾಪರ ಕಾಳಜಿಗಳು

**ದಾಸಸಾಹಿತ್ಯದಲ್ಲಿ ಹೆಣ್ಣು ತಾಯ್ತನದ ಸ್ಥಿತಿಯಲ್ಲಿ ದೈವತ್ವಕ್ಕೆ ಏರಿದರೆ, ಪತ್ನಿತ್ವದಲ್ಲಿ ಗಂಡನನ್ನು ಅಧಃಪತನಕ್ಕೆ ಎಳೆದ ರಾಕ್ಷಸಿಯಾಗಿದ್ದಾಳೆ. ಇಲ್ಲವೆ ಆತನ ಇಂದ್ರಿಯ ನಿಗ್ರಹವನ್ನು ಕೆಡಿಸುವ ಮಾಯಾವಿಯಾಗಿ ಮೂಡಿದ್ದಾಳೆ. ಇದು ಭಕ್ತಿಪಂಥದ ಚಿಂತನೆಯ ಮಿತಿಯೇ ಹೊರತು ವ್ಯಕ್ತಿಗತ ಮಿತಿಯೆಂದು ಪರಿಗಣಿಸಲು ಸಾಧ್ಯವಿಲ್ಲ.**

**ಡಾ|| ಸಬಿಹಾ ಭೂಮೀಗೌಡ**

ದಾಸಸಾಹಿತ್ಯದ ದೃಷ್ಟಿಕೋನ ಸಂಪೂರ್ಣವಾಗಿ ವೈದಿಕ ನೆಲೆಯದು ಮತ್ತು ಪುರುಷಪ್ರಧಾನ ಚಿಂತನಾ ನೆಲೆಯದು. ಇವರಿಗೆ ಪುರುಷನ ಸಾಧನೆಗೆ ಹೆಣ್ಣು ಪ್ರತಿಬಂಧಕವಾಗಿ ಕಂಡುಬಂದಿದ್ದಾಳೆ. ಹೆಣ್ಣು – ತಾಯಿ, ಪತ್ನಿ, ಮಗಳು – ಎಂಬ ರೂಪಗಳಲ್ಲಿ ಮಾಯೆಯಾಗಿ, ಬಂಧನವಾಗಿ, ಅಡ್ಡಿಯಾಗಿ ಪುರುಷನಿಗೆ ಕಂಡಿದ್ದಾಳೆ. ಹೀಗಾಗಿ ಹೆಣ್ಣು ಮತ್ತು ಸಂಸಾರ ಇವುಗಳ ಹಂಗಿನಿಂದ ಹೊರಜಗಿಯುವುದೇ ದಾಸರ ಜೀವನದ ಧ್ಯೇಯ ಎನಿಸಿದೆ. ಈ ಮನೋಧರ್ಮವನ್ನೇ ಪ್ರಧಾನ ಚೌಕಟ್ಟಾಗಿ ಹೊಂದಿರುವ ದಾಸಸಾಹಿತ್ಯ ಮಹಿಳಾಪರ ಚಿಂತನೆಗಳನ್ನು ಯಾವ ನೆಲೆಗಳಲ್ಲಿ ಮತ್ತು ಎಷ್ಟರಮಟ್ಟಿಗೆ ಗ್ರಹಿಸಿದೆ ಎಂಬುದರ ಹುಡುಕಾಟ ಸ್ವಲ್ಪ ತ್ರಾಸದಾಯಕ ಎನಿಸುತ್ತದೆ.

**ದಾಸರು ಮತ್ತು ದಾಸತ್ವ**

ದಾಸನ ಮಾಡಿಕೋ ಎನ್ನ ಇಷ್ಟು
ಘಾಸಿ ಮಾಡುವರೇನೋ ಕರುಣಾ ಸಂಪನ್ನ
– ಪುರಂದರದಾಸರು

ವಸುದೇವನೆ ನಿನ್ನ ದಾಸರ ದಾಸರ
ದಾಸರ ದಾಸ್ಯವ ಕೊಡು ಸಾಕೆಂದರೆ
– ಶ್ರೀಪಾದರಾಯರು

ದಾಸ ದಾಸ ದಾಸರ ದಾಸ್ಯವ ಕೊಡೊ
ದೋಷರಾಸಿಯನಳಿದು
– ವಿಜಯದಾಸರು

ನಿನ್ನ ದಾಸರ ದ್ವಾರವನ್ನು ಕಾಯ್ವುರ ಮನೆ
ಕುನ್ನಿ ಎಂದೆನಿಸೆನ್ನ ಗೋಪಾಲವಿಠಲ
– ಗೋಪಾಲದಾಸರು

ದಾಸ ದಾಸರ ಮನೆಯ ದಾಸಿಯರ ಮಗ ನಾನು
ಸಾಸಿರ ನಾಮದೊಡೆಯ ರಂಗಯ್ಯನ ಮನೆಯ
– ಕನಕದಾಸರು



ಹೀಗೆ ಎಲ್ಲ ಹರಿದಾಸರೂ ವಿಷ್ಣುವಿನ ದಾಸರಾಗುವ, ವಿಷ್ಣುವಿನ ದಾಸರ ದಾಸನಾಗುವುದನ್ನು ಉತ್ಸಾಹದಿಂದ ಸ್ವೀಕರಿಸಿದ್ದಾರೆ. ಇಲ್ಲೆಲ್ಲ ದಾಸನಾಗುವುದು ಜನ್ಮಜನ್ಮಾಂತರದ ಸಂಸ್ಕಾರವಿದ್ದಲ್ಲಿ ಮಾತ್ರ ಸಾಧ್ಯವಾಗುತ್ತದೆ ಎಂಬ ನಿಲುವಿದೆ. ದಾಸರಾಗುವುದೆಂದರೆ 'ಪುರುಷ' ಎಂಬ ಅಹಂಕಾರವನ್ನು ನಿರಸನಗೊಳಿಸಿಕೊಳ್ಳುವುದು; ವಿನಯ, ವಿಧೇಯತೆ ಮತ್ತು ಅಧೀನತ್ವವನ್ನು ಒಪ್ಪಿಕೊಳ್ಳುವುದು ಎಂದೇ ಅರ್ಥ. ಹೀಗೆ ಹರಿಯ ದಾಸರ ದಾಸನಾಗುವುದನ್ನು ಮೌಲ್ಯವೆಂದು ಒಪ್ಪಿದ ದಾಸರು, ಮಾನವ ಕುಲದ ಅರ್ಧ ಭಾಗದಷ್ಟಿರುವ ಮಹಿಳೆಯ ದಾಸ್ಯದ ಸ್ಥಿತಿಯ ಬಗ್ಗೆ ಕಿಂಚಿತ್ತೂ ಚಿಂತಿಸದಿರುವುದು ಆಶ್ಚರ್ಯ ಮತ್ತು ಖೇದ ಎರಡನ್ನೂ ಉಂಟುಮಾಡುತ್ತವೆ ಅಥವಾ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಇದು ದಾಸಸಾಹಿತ್ಯದ ಬಹುದೊಡ್ಡ ಮಿತಿಯನ್ನೂ ಸೂಚಿಸುತ್ತದೆ.

**ದಾಸರು ಮತ್ತು ತಾಯ್ತನ**

ದಾಸಸಾಹಿತ್ಯದ ಮಹಿಳೆಯ ಭಾವನೆಗಳಿಗೆ ಅಭಿವ್ಯಕ್ತಿ ಸಿಕ್ಕಿದ್ದು ಕೃಷ್ಣನ ಸಾಕುತಾಯಿ ಯಶೋದೆಯ ನೆಲೆಯಲ್ಲಿ ಮಾತ್ರ. ಯಶೋದೆಯ ವಾತ್ಸಲ್ಯ, ಗೋಪಿಯರ ಪ್ರೀತಿ, ಕೃಷ್ಣನ ಕುರಿತ ದೂರು, ಯಶೋದೆಯ ಪುಣ್ಯವನ್ನು ಕಂಡು ಹರ್ಷಿಸುವ ದಾಸರ ಸಂತಸಗಳು ಕೀರ್ತನೆಗಳಲ್ಲಿ ಸ್ಥಾನ ಪಡೆದಿವೆ.

ಎಂಥ ಪುಣ್ಯವೆ ನಿನ್ನದೆಂಥ ಭಾಗ್ಯವೆ ಗೋಪಿ
ಇಂಥ ಮಗನ ಕಾಣೆವೆ

ಗೋಪಿಯ ಭಾಗ್ಯವಿದು
ಆ ಪರಮಾತ್ಮನ ಅಪ್ಪಿ ಮುದ್ದಾಡುವುದು
– ಪುರಂದರದಾಸರು

ಇಂತಹ ಕೀರ್ತನೆಗಳಲ್ಲಿ ಯಶೋದೆಯ ತಾಯ್ತನಕ್ಕೆ ಬೆಲೆ ಬಂದಿರುವುದು ಆಕೆ ಕೃಷ್ಣನ ತಾಯಿ ಎಂಬ ಕಾರಣಕ್ಕಾಗಿ ಎನ್ನುವುದನ್ನು ಮರೆಯುವಂತಿಲ್ಲ. ಹೇಗೆ ಜೈನಪುರಾಣ ಮತ್ತು ಕಾವ್ಯಗಳಲ್ಲಿ ತೀರ್ಥಂಕರರ ತಾಯಿಯಾಗಿ ಹೆಣ್ಣಿಗೆ ಅಸ್ತಿತ್ವ ದೊರೆಯಿತೋ ಅದೇ ರೀತಿಯಲ್ಲಿ ದಾಸಸಾಹಿತ್ಯದಲ್ಲಿ ಯಶೋದೆಯ ಸಂವೇದನೆಗಳಿಗೆ ಅವಕಾಶ ದೊರೆತಿದೆ.

ಗುಮ್ಮನ ಕರೆಯದಿರೆ ಅಮ್ಮ ನೀನು
– ಪುರಂದರದಾಸರು

ಎಂಬ ಕೀರ್ತನೆ ಮಗುವಿನ ನೆಲೆಯಿಂದ ರಚಿತವಾಗಿದ್ದರೂ ಕೊನೆಯಲ್ಲಿ ಮಗನ ಮಾತು ಕೇಳಿ ಯಶೋದೆ ಮುಗುಳು ನಕ್ಕಳು ಮತ್ತು ಜಗದೊಡೆಯನಾದ ಆ ಮಗುವನ್ನು ಆಕೆ ಮೋಹದಿಂದ ಬಿಗಿದಪ್ಪಿಕೊಂಡಳು ಎನ್ನುತ್ತಾರೆ. ಇಲ್ಲಿ ಯಶೋದೆಯ ಸಾರ್ಥಕ್ಯವನ್ನು ದಾಸರು ಗುರುತಿಸಿದ್ದಾರೆ.

ಜಗದುದ್ಧಾರನ ತನ್ನ ಮಗನೆಂದು ಬಗೆದು
ನಿಗಮಗೋಚರನ ಆಡಿಸಿದಳು ಯಶೋದೆ
– ಪುರಂದರದಾಸರು

ಎಂಬ ಕೀರ್ತನೆಯಲ್ಲಿ ಕೃಷ್ಣನನ್ನು ಭಾಗವತರು ಎತ್ತಿಕೊಂಡು ಹೋಗಬಹುದು, ಜಗತ್ತಿನ ಮಾನವರು ಹಗರಣಮಾಡಬಹುದು, ಅಷ್ಟೇ ಅಲ್ಲ ಸುರಮುನಿಗಳು ಹೊತ್ತೊಯ್ಯಬಹುದು, ದುಷ್ಟ ನಾರಿಯರು ತಮ್ಮ ಇಷ್ಟಾರ್ಥ ಸಲ್ಲಿಸೆಂದು ಕೇಳಬಹುದು... ಹೀಗೆ ಹಲವು ಕಾರಣಗಳನ್ನು ಒಡ್ಡುತ್ತ, ಕೃಷ್ಣನನ್ನು ಮನೆಯಿಂದ ಹೊರಗೆ ಹೋಗದಂತೆ ಯಶೋದೆ ತಡೆಯುವಲ್ಲಿ, ಅವಳ ವಾತ್ಸಲ್ಯ, ದುಗುಡ, ಸಂಭ್ರಮ, ಆತಂಕಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ.

ಕಾಳಿಂಗ ಮರ್ದನ ರಂಗಗೆ - ಹೇಳೆ ಗೋಪಮ್ಮ ಬುದ್ಧಿ
ಕೇಳಲೊಲ್ಲನು ಎನ್ನ ಮಾತನು

ಗೋಪಿಯ ಭಾಗ್ಯವಿದು
ಆ ಪರಮಾತ್ಮನ ಅಪ್ಪಿ ಮುದ್ದಾಡುವುದು
– ಪುರಂದರದಾಸರು

ಇವೇ ಮುಂತಾದ ಕೀರ್ತನೆಗಳಲ್ಲಿ ಯಶೋದೆಯ ತಾಯ್ತನ ಅರಳಿದೆ; ಅದರ ಒಳತೋಟಿಗೆ, ಭಾವಸಂಭ್ರಮಗಳಿಗೆ ಎಡೆ ದೊರೆತಿದೆ. ಹೀಗೆ ಹೇಳುವಾಗಲೇ, ಯಶೋದೆಯ ಅಸ್ತಿತ್ವ ನಿಂತಿರುವುದೇ ಬಾಲಗೋಪಾಲನಿಂದ ಎಂಬುದನ್ನು ಮರೆಯುವಂತಿಲ್ಲ. ಅವಳು ತನ್ನ ಬಳಿ ಇರುವ ಅಮೂಲ್ಯ ಒಡವೆಯ ಬೆಲೆ ಅರಿಯದ ಮುಗ್ಧಳೂ ಆಗಿದ್ದಾಳೆ. ನಿಗಮಕೆ ಸಿಲುಕದ ಅಗಣಿತ ಮಹಿಮ ಆಕೆಗೆ

'ಮಗು' ಮಾತ್ರವಾಗಿ ಕಂಡಿದ್ದಾನೆ ಅಥವಾ ಅದಷ್ಟೇ ಆಕೆಗೆ ಮುಖ್ಯವಾಗುತ್ತದೆ. ಆತನ ಬಾಲಲೀಲೆ, ತುಂಟಾಟ, ಮಗನ ಕುರಿತ ಇತರರ ದೂರುಗಳನ್ನು ಕೇಳಿ ಸಂಭ್ರಮಿಸುವಲ್ಲಿಗೆ ಅವಳ ತಾಯ್ತನದ ಬೆಳವಣಿಗೆ ನಿಂತುಬಿಡುತ್ತದೆ. ಗೋಕುಲದಿಂದ ಮಧುರೆಗೆ ಹೋಗುವ ಕೃಷ್ಣನನ್ನು ತಡೆಯುವ ಗೋಪಿಯರಂತೆ, ತಾಯಿ ಯಶೋದೆಯೂ ಕೃಷ್ಣನ ಸಾಧನೆಯ ಹಾದಿಗೆ ಅಡ್ಡಿಯಾಗಿ ಪರಿಣಮಿಸುತ್ತಾಳೆ.

**ದಾಸರ ದೃಷ್ಟಿಯಲ್ಲಿ ಗೃಹಿಣಿ**

'ಸಾರಿದ ಡಂಗುರ ಯಮನು' ಎಂಬ ಜಗನ್ನಾಥದಾಸರ ಕೀರ್ತನೆಯಲ್ಲಿ ಬ್ರಾಹ್ಮಣ ಸ್ತ್ರೀಯು ಕುಟುಂಬದಲ್ಲಿ ಹೇಗಿರಬೇಕು ಮತ್ತು ಹೇಗೆ ನಡೆದುಕೊಳ್ಳಬೇಕು ಎಂದು ಹೇಳಿದೆ. ಕೀರ್ತನೆಯಲ್ಲಿ ಹೆಣ್ಣಿನ ದೋಷ ಮತ್ತು ದೌರ್ಬಲ್ಯಗಳಿಗೆ ವಿಶೇಷವಾದ ಒತ್ತು ನೀಡಲಾಗಿದೆ.

*ಬಾಲಕರನ್ನು ತೊಟ್ಟಿಲೊಳಿಟ್ಟು ತೂಗುತ*
*ಪಾಲೆರೆವುತ ಬೀಸುತ್ತ ಕುಟ್ಟುತ್ತ*
*ಆಲಯದೊಳು ಕೆಲಸಗಳ ಮಾಡುತ್ತ ಲಕ್ಷ್ಮೀ*
*ಲೋಲನ ಗುಣವ ಪಾಡುವರ ಮುಟ್ಟದೆ ಬನ್ನಿರೋ*
*ಎಂದು ॥*
*ಸಾರಿದ ಡಂಗುರ ಯಮನು*

*ಉಣಲಿಲ್ಲ ಉಡಲಿಲ್ಲ ಇಡಲಿಲ್ಲ ತೊಡಲಿಲ್ಲ*
*ಸುಡಲಿ ಗಂಡನ ಒಗೆತನವೆನ್ನುತ*
*ಹಡೆದವರನು ನುಡಿನುಡಿಗೆ ಬೈಯುತಲಿಪ್ಪ*
*ಕಡುಪಾಪಿಗಳ ಹೆಡೆಮುರಿ ಕಟ್ಟಿ ಎಳೆದು ತನ್ನಿರಿ*
*ಎಂದು ॥*
*ಸಾರಿದ ಡಂಗುರ ಯಮನು*

ಇದರ ವಿಶ್ಲೇಷಣೆ ಅಗತ್ಯವಿಲ್ಲ. ಸಾಲುಗಳು ಎಲ್ಲವನ್ನೂ ಸ್ಪಷ್ಟವಾಗಿ ಹೇಳಿವೆ. ಟಿ. ವಿ. ವೆಂಕಟಾಚಲ ಶಾಸ್ತ್ರಿಯವರು ಹೇಳುವಂತೆ, ''ಇಂಥ ಕಡೆಗಳಲ್ಲಿ ಹೆಣ್ಣು ಗಂಡಿನ ನ್ಯಾಯ ಸ್ಥಾನದಲ್ಲಿ ಅಪರಾಧಿಯ ಹಾಗೆ ನಿಂತುಕೊಂಡಂತೆ ಕಾಣಿಸುತ್ತದೆ.'' (ಹರಿದಾಸರ ಕೀರ್ತನ ಸಾಹಿತ್ಯ; ೧೯೯; ೧೪೯)

*ಹೀಗಿದ್ದರೆ ಲೇಸು ಜ್ಞಾನಿಗೆ*
*ಹೀಗಿದ್ದರೆ ಲೇಸು*
*ಸತಿ ಇದ್ದರೆ ಸಮಹಿತದವಳಾಗಿ*
*ಸುತನಿದ್ದರೆ ನಿಜಮತದವನಾಗಿ...*
*– ಪ್ರಸನ್ನ ವೇಂಕಟದಾಸರು*

*ಭಕ್ತಿ ಬೇಕು ವಿರಕ್ತಿ ಬೇಕು ಸರ್ವ*
*ಶಕ್ತಿ ಬೇಕು ಮುಂದೆ ಮುಕ್ತಿಯ ಬಯಸುವಗೆ*
*ಸತಿ ಅನುಕೂಲ ಬೇಕು ಸುತನಲ್ಲಿ ಗುಣಬೇಕು...*
*– ಶ್ರೀಪಾದರಾಯರು*

ಇಂಥ ಕಡೆಗಳಲ್ಲಿ ಪತಿಗೆ ಹಿತಳಾಗಿ, ಅನುಕೂಲೆಯಾಗಿ ಹೆಂಡತಿ ಇರಬೇಕು ಎಂಬುದನ್ನು ಸೂಚಿಸಿದರೂ, 'ಸತಿಪತಿಯೊಂದಾದ ಭಕ್ತಿ' ಎಂಬ 'ವಚನಕಾರರ ಚಿಂತನೆಯ ಹೊಳಹು ಸ್ಪಷ್ಟವಾಗಿ ಕಾಣುತ್ತದೆ.

*ಯಾರೇನು ಅಂದರೂ ಮೋರೆಯ ತಿರುಹದಿರು*
*ಮೋರೆ ಮೇಲೆ ಕೈಯೆತ್ತಿ ಬಲ್ಲಳೆಂದೆನಿಸಿ*
*ವಾರಿಗೆಯವರ ಕೂಡಿ ನೀರನ್ನು ತರುವಾಗ*
*ವಾರೆಗಣ್ಣಲಿ ನೋಟ ನೋಡದಿರು ಕಂಡ್ಯ*
*– ಪುರಂದರದಾಸರು*

> ದಾಸಸಾಹಿತ್ಯವನ್ನು ಮಹಿಳಾಪರ ದೃಷ್ಟಿಕೋನದ ಹಿನ್ನೆಲೆಯಿಂದ ನೋಡುವ ಮೂಲಕ, ಭಕ್ತಿ ಚಳುವಳಿಯು ಭಕ್ತ, ಭಕ್ತಿ, ಸಾಧನೆ, ಮೋಕ್ಷ ಮುಂತಾದ ವಿಚಾರಗಳ ಕುರಿತು ಚಿಂತಿಸಿದ್ದೆಲ್ಲವೂ ಪುರುಷನೆಲೆಯಿಂದಲೇ ಎಂಬ ಸತ್ಯ ನಿಚ್ಚಳವಾಗುತ್ತದೆ. ಪಿತೃಪ್ರಧಾನತೆಯ ಬೇರುಗಳ ಆಳ ಮತ್ತು ವ್ಯಾಪ್ತಿಯನ್ನು ಇದು ಹೇಳುವುದಲ್ಲದೆ, ಅದರ ಬಲವನ್ನೂ ಸೂಚಿಸುತ್ತದೆ. ದಾಸತನವನ್ನು ಆರೋಪಿಸಿಕೊಳ್ಳುವುದಕ್ಕೂ ದಾಸ್ಯವನ್ನು ಅನುಭವಿಸುವುದಕ್ಕೂ ಅಜಗಜಾಂತರವಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸ್ತ್ರೀಪರವೆಂದು ಹೇಳುವುದಕ್ಕೂ ಸ್ತ್ರೀವಾದಿಯಾಗಿ ಬದುಕುವುದಕ್ಕೂ ಇರುವ ಅಂತರವೇ ಇಲ್ಲೂ ಇದೆ.

ಎನ್ನುತ್ತ, ಹೆಣ್ಣು ಮಾಡಬಾರದ ಕಾರ್ಯಗಳ ಪಟ್ಟಿ ನೀಡುತ್ತಾರೆ. ಪರರ ಒಡವೆಯನ್ನು ಕಂಡು ಕಟಕಿಯ ಮಾತನಾಡದಿರುವುದು, ನೆರೆಹೊರೆಯವರಿಗೆ ತಲೆಬಾಗಿ ನಡೆಯುವುದು, ಬಂಗಾರದ ಪೇಟೆಗೆ ಹೋಗದಿರುವುದು, ಅಂಗನೆಯರಿಗೆ ತನ್ನ ಅಂತರಂಗವನ್ನು ಹೇಳದಿರುವುದು, ಹತ್ತಿರದವರು ನಿಷ್ಠುರದ ಮಾತುಗಳನ್ನಾಡಿದರೂ ಮೌನವಾಗಿ ಸಹಿಸುವುದು, ಎಲ್ಲದಕ್ಕೂ ಮನಸ್ಸನ್ನು ಗಟ್ಟಿಗೊಳಿಸುವುದು ಆದರ್ಶ ಗೃಹಿಣಿಯ ಲಕ್ಷಣ ಎನ್ನುತ್ತಾರೆ.

*ಹಾಕಿದ್ದ ನೀನುಂಡು ಬೇಕೆಂದು ಬೇಡದಿರು*
*ಸಾಕು ಸಾಕೆಂಬ ನಾಚಿಕೆಯ ಹಿಡಿಯೆ*
*ನಾಕುಮಂದಿಯರೊಳಗೆ ಕೋಕೆ ಮಾತಾಡದಿರು*
*ಲೋಕದೊಳಿವಳೊಬ್ಬ ಮೂಕಿಯೆಂದೆನಿಸೆ*
*– ಪುರಂದರದಾಸರು*

ಎಂಬಲ್ಲಿ ಸೂಚಿತವಾಗಿರುವ ಮೌಲ್ಯಗಳನ್ನು ಗಮನಿಸಬೇಕು. ಜಾನಪದದ ತ್ರಿಪದಿಯಲ್ಲಿ ಬರುವ ಅತ್ತೆ, ಮಾವ, ಗಂಡ ಹಾಗೂ ಸುತ್ತಿನ ನೆರೆಹೊರೆಯವರಿಗೆ ಅಂಜಿ ಬದುಕುವಂತೆ ಹೇಳುವ ಮೌಲ್ಯವೇ ಇಲ್ಲಿಯೂ ಸ್ಥಿರೀಕರಣಗೊಂಡಿದೆ. ಮಹಿಳೆಯರಿಗೆ ಮೂಕ ಸಂಸ್ಕೃತಿಯೇ ಆದರ್ಶ ಅಥವಾ ಮೌಲ್ಯ ಎಂದು ಒಪ್ಪಿದ ಚಿಂತನಾಕ್ರಮ ಇಲ್ಲಿ ಪ್ರಖರವಾಗಿ ಕಂಡುಬರುತ್ತದೆ. ಸಹಬಾಳ್ವೆಯ ಒಳಗುಟ್ಟು ಇದು ಎಂದು ಕೃಷ್ಣನು ಸುಭದ್ರೆಗೆ ಹೇಳುವ ಈ ಮಾತುಗಳು ಒಟ್ಟು ಸ್ತ್ರೀ ಕುಲಕ್ಕೇ ಅನ್ವಯಿಸುತ್ತವೆ. ಇವುಗಳನ್ನು ಮಹಿಳಾಪರ ಕಾಳಜಿಗಳು ಎಂದು ಇಂದಿನ ದಿನಮಾನಗಳಲ್ಲಿ ಒಪ್ಪಿಕೊಳ್ಳುವುದು ಸಾಧ್ಯವೇ? ಇಂದೂ ಉಳಿದುಬಂದಿರುವ ಸನಾತನ ಚಿಂತನೆಗಳಿಂದ 'ಸಹಿಸುವ ಗುಣ' ಹೆಣ್ಣಿಗೆ ಮೌಲ್ಯವಾಗಿ ಉಳಿಯದೆ, ಅವಳ ಶೋಷಣೆ ಮತ್ತು ದಮನಕ್ಕೆ ಹಾಗೂ ಅವಳ ಮೇಲಿನ ಹಿಂಸಾತ್ಮಕ ಕ್ರೌರ್ಯಗಳಿಗೆ ಎಡೆಮಾಡಿ ಕೊಟ್ಟಿರುವುದು ವರ್ತಮಾನದ ಸತ್ಯ. ಆದುದರಿಂದ ಭಕ್ತಿಯುಗದ ಈ ಮೌಲ್ಯಗಳು ಸ್ತ್ರೀಪರ ಕಾಳಜಿ ಆಗಲಾರವು.

**ಹೆಣ್ಣು/ಹೆಂಡತಿ - ಮಾಯೆ**

*ಹೆಣ್ಣನಿಚ್ಛಿಸುವರೆ ಮೂಢ – ಇದನು*
*ಕಣ್ಣು – ಮೈಮನಗಳಿಂ ಸೋಂಕಲು ಬೇಡ*
*ತಾಯಾಗಿ ಮೊದಲು ಪಡೆದಿಹುದು – ಮತ್ತೆ*
*ಜಾಯೆಯೆಂದೆನಿಸಿ ಕಾಮದಿ ಕೆಡಹುವುದು*
*ಕಾಯದಿ ಜನಿಸುತ ಬಹುದು – ಇಂತು*
*ಮಾಯೆಯು ನಿನ್ನ ಬಹುವಿಧದಿ ಕಾಡುವುದು...*

ಈ ಕೀರ್ತನೆಯಲ್ಲಿ ಹೆಣ್ಣು ಹಿತಶತ್ರುವಾಗಿ, ನಿಮಿಷದ ರತಿಸುಖ ಕೊಟ್ಟು ನಿತ್ಯಮುಕ್ತಿಯಿಂದ ಗಂಡನ್ನು ಸೆಳೆಯುವ ಶಕ್ತಿಯಾಗಿ ಕಾಣಿಸುತ್ತಾಳೆ.

*ಹಿತಶತ್ರುವಾಗಿ ಹೊಂದುವುದು – ನಿಮಿಷ*
*ರತಿಕೊಟ್ಟು ನಿತ್ಯಮುಕ್ತಿಯ ಸೆಳೆಯುವುದು*
*ಕ್ಷಿತಿಯ ಪೂಜ್ಯತೆ ಕೆಡಿಸುವುದು – ಮುಂದೆ*
*ಶತಜನ್ಮಗಳಿಗೆ ಹೊಣೆಯಾಗಿ ನಿಲ್ಲುವುದು*

*ಬಗೆಯಿದು ತನುವೆಲುವು ನರ-ಖಂಡ – ಅದರೊ*
*ಳಗೆ ವಾಯುರಂಧ್ರ ಕಿಸುಕುಳದ ಉದ್ದಂಡ*
*ಭಗವೆಂಬುದು ಮೂತ್ರದ ಭಾಂಡ – ಅದ*
*ನೊಗಡಿಸದೆ ನಿಜಸುಖವಿಲ್ಲ ಕಂಡೆಯ*
*– ಪುರಂದರದಾಸರು*

ಎಂಬಲ್ಲಿ ಹೆಣ್ಣಿನ ಕುರಿತ ತೀವ್ರತರದ ತಿರಸ್ಕಾರ ಪ್ರಕಟಗೊಂಡಿದೆ.

*ನಂಬಬೇಡ ನಾರಿಯರನು*
*ಹಂಬಲಿಸಿ ಹಾರಯಿಸಬೇಡ*
*ಅಂಬುಜಾಕ್ಷಿಯರೊಲುಮೆ ಬಯಲು*
*ಡಂಬಕವೆಂದು ತಿಳಿಯಿರೋ*
*– ಪುರಂದರದಾಸರು*

ಎಂಬ ಕೀರ್ತನೆ ಹೆಂಗಸರ ನೋಟವೆಲ್ಲ ಹುಸಿ, ಆಟವೆಲ್ಲ ಸಂಚು, ಸನ್ನೆಕೂಟವೆಲ್ಲ ಗನ್ನ – ಘಾತುಕ ಎನ್ನುತ್ತ ಅವರನ್ನು ಮಾಟಗಾತಿಯರು ಎಂದು ದೂರೀಕರಿಸುತ್ತದೆ.

*ಕಣ್ಣೆತ್ತಿ ನೋಡಲು ಬೇಡ - ಅವಳ*
*ಸಣ್ಣ ಬೈತಲೆ ಕಂಡು ಮರುಳಾಗಬೇಡ*
*......*
*ದೂರದಲ್ಲಿಯೆ ಸುಖವಣ್ಣ ಅವಳ*
*ಚಾರು ಕಂಚುಕದೊಳಗಿನ ಕುಚವಣ್ಣ*
*ಸೀರೆಯ ಬಿಗಿದುಟ್ಟ ಹೆಣ್ಣ ಅವಳ*
*ಓರೆನೋಟ ನೋಡಿ ಹಾರಬೇಡಣ್ಣ...*

ಇಂಥ ಕೀರ್ತನೆಗಳು ಮಹಿಳೆಯ ವ್ಯಕ್ತಿತ್ವ, ನಡೆ-ನುಡಿ ಎಲ್ಲವೂ ಗಂಡಸರನ್ನು ದಿಕ್ಕೆಡಿಸುವ ದುಷ್ಟ ಸಂಚಿನಿಂದ ಕೂಡಿವೆ ಎನ್ನುತ್ತ ಅವರನ್ನು ಅಪಮೌಲೀಕರಿಸುತ್ತವೆ.

*ಪತಿಭಕ್ತಿಯಿಲ್ಲದಿಹ ಸತಿಯ ಸಂಗ*
*ವ್ರತಗೆಟ್ಟು ಸುಖ ಪಡೆಯಲಿಲ್ಲವೋ ರಂಗ*
*ಗಂಡ ಬಂದರೆ ಎದ್ದುನಿಲ್ಲದೆ ಆ ಕ್ಷಣದಿ*
*ಕಂಡಾಡಿ ಏಕವಚನಂಗಳನಾಗ*
*ಅಂಡಲೆದು ಮಾರ್ಮಲೆದು ಕಾಡಿಬೇಡುವ – ಇಂಥ*
*ಭಂಡುದೊತ್ತಿನ ಕೂಟ ಏಳು ನಾಗರ ಕಾಟ...*

ಇಂತಹ ಕೀರ್ತನೆಗಳು ಹೆಂಡತಿಯ ಕುರಿತು ಕೊಡುವ ಚಿತ್ರಗಳು ಇಂದಿನ ಸಂದರ್ಭದಲ್ಲಿ ತೀವ್ರ ಟೀಕೆಗೆ ಒಳಗಾಗದೆ ಉಳಿಯಲು ಸಾಧ್ಯವಿಲ್ಲ. ಮನೋವಿಜ್ಞಾನಿ ಯೂಂಗ್ 'ಅನಿಮಾ ಮತ್ತು ಅನಿಮಸ್' ಪರಿಕಲ್ಪನೆಗಳನ್ನು ಚರ್ಚಿಸುತ್ತ, ಕಲ್ಪನೆ ಮತ್ತು ವಾಸ್ತವಗಳ ಮುಖಾಮುಖಿಯಲ್ಲಿ ಕಲ್ಪನೆಯ ಆದರ್ಶ ಒಡೆದಾಗ ಹೆಂಡತಿಯ ಕಾರಣಕ್ಕೆ ಹೆಣ್ಣುಕುಲವನ್ನೂ, ಗಂಡನ ಕಾರಣಕ್ಕೆ ಗಂಡುಕುಲವನ್ನೂ ದ್ವೇಷಿಸುವ ಮನಃಸ್ಥಿತಿಯನ್ನು ತಿಳಿಸುತ್ತಾನೆ. ಅದೇ ರೀತಿಯಲ್ಲಿ ಓರ್ವರ ವ್ಯಕ್ತಿತ್ವವನ್ನು ಉಜ್ವಲಗೊಳಿಸಲು ಇನ್ನೊರ್ವರ ವ್ಯಕ್ತಿತ್ವಕ್ಕೆ ಮಸಿ ಬಳಿಯುವ ವರ್ತನೆಯೂ ತೀರಾ ಸಹಜ. ಕೀರ್ತನಕಾರರ ಗುರಿ ಸಂಸಾರದ ನಶ್ವರತೆಯನ್ನು ಸ್ಥಾಪಿಸುವುದೇ ಆದಕಾರಣ, ಗಂಡನ್ನು ಸಂಸಾರದಿಂದ ಹೊರಗೆಳೆಯಲು ಹೆಣ್ಣು ಮತ್ತು ಹೆಂಡತಿ ಆ ಮೂಲಕ ಹೆಣ್ಣುಕುಲವನ್ನು ವಂಚಕಿಯಾಗಿ, ಕುಲಟೆಯಾಗಿ, ಮಾಯಾವಿಯಾಗಿ, ದುಶ್ಶೀಲೆಯಾಗಿ ಚಿತ್ರಿಸುವುದು ಅವರಿಗೆ ಅನಿವಾರ್ಯವಾಗಿತ್ತು.

ಸತಿಗೆ ಸ್ವಾತಂತ್ರ್ಯವ ಕೊಡದಿರು – ನೀವು
ಮತಿಗೆಟ್ಟು ಭ್ರಮಣೆಯ ಬಡದಿರಿ
ರಮಣನಿಲ್ಲದ ನಾರಿ ಪರರ ಕಣ್ಣಿಗೆ ಮಾರಿ
ಹಡೆದವಳ ಎದೆಕೊರಳ ಕೊಯ್ವಂಥ ಚೂರಿ

ಮಡದಿಯ ಮಾತನು ಕೇಳಿಕೊಂಬನು ಭ್ರಷ್ಟ...

ಸತಿಗೆ ಅಳುಕುವವಗೆ ಸಾಹಸವು ಏತಕೆ...
ಹೆಂಡತಿ ಪ್ರಾಣ ಹಿಂಡುತಿ...

– ಪುರಂದರದಾಸರು

ಇಂತಹ ಅಸಂಖ್ಯ ಕೀರ್ತನೆಗಳನ್ನು ಹೆಸರಿಸಬಹುದು. ಎಂದರೆ ಇಲ್ಲೆಲ್ಲ ಹೆಣ್ಣಿನ ರೂಪ, ಯೌವನ, ಪ್ರೀತಿ, ಮಮತೆ, ವಾತ್ಸಲ್ಯ ಅಥವಾ ಒಟ್ಟಾಗಿ ಅವಳ ಅಸ್ತಿತ್ವವನ್ನೇ ದಾಸರು ನಿರಾಕರಿಸಿದ್ದಾರೆ; ತುಚ್ಛೀಕರಿಸಿದ್ದಾರೆ. ದಾಸ ಸಾಹಿತ್ಯದ ವಿಚಾರಧಾರೆಯ ಚೌಕಟ್ಟೇ ಇಂತಹ ನಿಲುವಿಗೆ ಕಾರಣ ಎಂಬುದನ್ನು ಮರೆಯುವಂತಿಲ್ಲ. ಆದರೆ 'ಈಸ ಬೇಕು ಇದ್ದು ಜೈಸಬೇಕು' ಎಂದು ನುಡಿದ ದಾಸರು, ಹೆಣ್ಣಿನ ಅಸ್ತಿತ್ವದ ಕುರಿತು ಹೊಂದಿದ ನಕಾರಾತ್ಮಕ ಧೋರಣೆಯು ಅವರ ಸಂಕುಚಿತ ದೃಷ್ಟಿಕೋನವನ್ನು ಸೂಚಿಸುತ್ತದೆ. ಸ್ವಲ್ಪ ಮುಂದುವರಿದು ಹೇಳುವುದಾದರೆ, ದಂತಕತೆಯು ಹೇಳುವಂತೆ ಪುರಂದರದಾಸರು ಸಂತತನವನ್ನು ಆಯ್ದು ಕೊಳ್ಳುವುದಕ್ಕೆ ಅವರ ಮಡದಿಯ ಕೊಡುಗೆಯೂ ಗಣನೀಯವಾಗಿದೆ. ಆದರೆ ಅಂಥ ಪತ್ನಿಯ ಕುರಿತು,

ಆದದ್ದೆಲ್ಲ ಒಳಿತೇ ಆಯಿತು
ಮಾಧವನಂಘ್ರಿಯ ಸೇವಿಸುವುದಕ್ಕೆ
ಸಾಧನ ಸಂಪತ್ತಾಯಿತು
ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತಿದ್ದೆ
ಆ ಪತ್ನೀ ಕುಲ ಸಾವಿರವಾಗಲಿ
ಗೋಪಾಳಬುಟ್ಟಿ ಹಿಡಿಸಿದಳಯ್ಯ

– ಪುರಂದರದಾಸರು

ಎಂಬ ಒಂದು ಮಾತುಬಿಟ್ಟರೆ, ಬೇರೆ ಏನೂ ಸಿಗುವುದಿಲ್ಲ. ಇದನ್ನು ನೋಡುವಾಗ, ಹೆಣ್ಣು ಅಥವಾ ಹೆಂಡತಿ ದಾಸರ ಸಾಧನೆಯ ಹಾದಿಯಲ್ಲಿ ಏಣಿಯಂತೆ ಪರಿಗಣಿತ ವಾಗಿದ್ದಾಳೆ. ಏರಿದ ಬಳಿಕ ಏಣಿಯ ಅಗತ್ಯವೆಲ್ಲಿದೆ? ಹೀಗಾಗಿ ಮಡದಿಯ ಕುರಿತ ನಿರ್ಲಕ್ಷ್ಯ ಅಥವಾ ಅವಗಣನೆ ಇಂದು ನಮ್ಮ ದೃಷ್ಟಿಗೆ ಸಣ್ಣತನ, ಸ್ವಾರ್ಥ ಎಂದು ಅನ್ನಿಸಿದರೆ ಅಚ್ಚರಿಪಡಬೇಕಾಗಿಲ್ಲ.

ಪುರಂದರದಾಸರು, ಕನಕದಾಸರು, ವಿಜಯದಾಸರು, ಮಹೀಪತಿದಾಸರು, ಗೋಪಾಲದಾಸರು ಇವರೆಲ್ಲ ಸಂಸಾರದೊಳಗಿದ್ದು, ಅದರೆಲ್ಲ ಒಳಹೊರಗನ್ನು ಕಂಡು, ಅನುಭವಿಸಿ, ಅನಂತರ ವಿರಕ್ತರಾದವರು. ಹೀಗಿದ್ದೂ ಸಾಮಾಜಿಕ ವಿಷಮತೆ, ಡಂಭಾಚಾರದ ಭಕ್ತಿಯನ್ನು ವಿಡಂಬಿಸಿದ, ಜಾತಿಯ ತಾರತಮ್ಯವನ್ನು ಸಣ್ಣ ಪ್ರಮಾಣದಲ್ಲಾದರೂ ನಿರಾಕರಿಸಿದ ಮತ್ತು ಸ್ವತಃ ದೇವರ ದಾಸರ ದಾಸನಾಗುವ ಅಧೀನತ್ವವನ್ನು ಸ್ವೀಕರಿಸಿದ ಇವರಿಗೆ ಹೆಣ್ಣಿನ ನೋವು, ಸಂಕಷ್ಟ, ಇಬ್ಬಂದಿತನಗಳು ಅರಿವಾಗದಿರುವುದು ಸಖೇದಾಶ್ಚರ್ಯವನ್ನು ನೀಡುತ್ತದೆ.

## ಭೋಗದ ಭಾಗವಾಗಿ ಹೆಣ್ಣು

ತಮ್ಮ ಕೀರ್ತನೆಗಳಲ್ಲಿ ಸಂಸಾರದ ನಶ್ವರತೆಯನ್ನು ಹೇಳಿದ ಕನಕದಾಸರು ತಮ್ಮ 'ಮೋಹನ ತರಂಗಿಣಿ' ಕಾವ್ಯದಲ್ಲಿ ಹೆಣ್ಣನ್ನು ಚಿತ್ರಿಸಿರುವ ಬಗೆ ತುಂಬ ಭಿನ್ನವಾಗಿದೆ. ಮೋಹನ ತರಂಗಿಣಿ ಶೃಂಗಾರರಸ ಪ್ರಧಾನವಾದ ಕಾವ್ಯ. ಅದರಲ್ಲಿ ಶ್ರೀಕೃಷ್ಣ-ರುಕ್ಮಿಣಿಯರ ವಿವಾಹೋತ್ತರ ಪ್ರಣಯ ಶೃಂಗಾರ, ಪ್ರದ್ಯುಮ್ನ-ರತಿ, ಅನಿರುದ್ಧ-ಉಷಾ ಇವರ ಪ್ರಣಯ ಜೀವನ, ಕಾಮನನ್ನು ಕಳೆದುಕೊಂಡ ರತಿಯ ಪ್ರಲಾಪ – ಇವು ಮುಖ್ಯ ಸಂದರ್ಭಗಳು. ಜಲಕ್ರೀಡೆ ಮತ್ತು ಸೂಳೆಗೇರಿಯ ವರ್ಣನೆಗಳು ಅಷ್ಟಾದಶ ವರ್ಣನೆಗಳ ಭಾಗವಾಗಿ ಕಾವ್ಯದಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲೆಲ್ಲ ಕನಕದಾಸರು ಹೆಣ್ಣಿನ ಅಂಗಾಂಗ ವರ್ಣನೆಗೆ ತೋರಿದ ಆಸಕ್ತಿ ವಿಚಿತ್ರ ಮತ್ತು ವಿರೋಧಾಭಾಸ ಎನಿಸುತ್ತದೆ. 'ಹೆಣ್ಣಿನ ದೇಹದ ವರ್ಣನೆಯಲ್ಲಿ ಕನಕದಾಸರು ಎಷ್ಟು ತನ್ಮಯರಾಗಿಬಿಟ್ಟಿದ್ದಾರೆಂದರೆ, ಎಷ್ಟೋ ವೇಳೆ ದೇವ - ಮಾನವ ಎಂಬ ಭೇದವನ್ನೂ ಮರೆತುಬಿಟ್ಟಿದ್ದಾರೆ' ಎಂದು ವಿಮರ್ಶಕರು ಈಗಾಗಲೇ ಗುರುತಿಸಿದ್ದಾರೆ. ಎಂದರೆ ಹೆಣ್ಣು ಇಲ್ಲೆಲ್ಲ ಭೋಗದ ಪರಿಕರವಾಗಿ ಮೂಡಿಬಂದಿದ್ದಾಳೆ. ಅವಳು ಮನಸ್ಸಿಗಿಂತ ಕೇವಲ ಮೈಯ ಮೂಲಕವೇ ಅಸ್ತಿತ್ವವನ್ನು ಪಡೆದಿರುವುದು ಗೋಚರಕ್ಕೆ ಬರುತ್ತದೆ. ಇದು ದಾಸರು ಹೆಣ್ಣನ್ನು ಇನ್ನೊಂದು ಅತಿರೇಕದಲ್ಲಿ ಕಂಡಿರುವುದಕ್ಕೆ ಸಾಕ್ಷಿಯಾಗಿದೆ.

## ಕೀರ್ತನಕಾರ್ತಿಯರು ಮತ್ತು ಮಹಿಳಾಪರ ಕಾಳಜಿಗಳು

ದಾಸಸಾಹಿತ್ಯದಲ್ಲಿ ಗಲಗಲಿಯ ಅವ್ವನವರು, ಭಾಗಮ್ಮ, ಹೆಳವನಕಟ್ಟೆ ಗಿರಿಯಮ್ಮ, ಹರಪನಹಳ್ಳಿ ಭೀಮವ್ವ, ಚೆಲ್ಲಮ್ಮ, ಸುಂದರಬಾಯಿ ಮುಂತಾದವರು ಸಾಹಿತ್ಯ ಕೃಷಿ ಮಾಡಿರುವುದು ತಿಳಿದುಬರುತ್ತದೆ. ವಚನ ಯುಗದ ವಚನಕಾರ್ತಿಯರಂತೆ, ಇವರು ಮಹಿಳೆಯ ಅಸ್ಮಿತೆಯ ಕುರಿತು ಖಚಿತವಾಗಿ ಮತ್ತು ದಿಟ್ಟವಾಗಿ ಮಾತನಾಡಿದ್ದು ಕಂಡುಬರುವುದಿಲ್ಲ. ಬದಲಾಗಿ ಪಿತೃಪ್ರಧಾನ ಚಿಂತನಾಕ್ರಮಗಳನ್ನು ಚಾಚೂ ತಪ್ಪದೆ ಶಿರಸಾ ವಹಿಸಿ ಪಾಲಿಸಿಕೊಂಡು, ಭಾಗವತ ಪರಂಪರೆಯನ್ನು ಮುಂದುವರಿಸುವಲ್ಲಿ ಪೂರಕವಾಗಿ ರಚನೆಗಳನ್ನು ರಚಿಸಿ, ತಮ್ಮ ಧನ್ಯತೆಗಳನ್ನು ಕಂಡುಕೊಂಡ ಚೇತನಗಳಾಗಿದ್ದಾರೆ.

ಇವರಲ್ಲಿ ಗಲಗಲಿಯ ಅವ್ವ, ಹೆಳವನಕಟ್ಟೆ ಗಿರಿಯಮ್ಮ ಮತ್ತು ಹರಪನಹಳ್ಳಿ ಭೀಮವ್ವ ಅವರ ವೈಯಕ್ತಿಕ ಬದುಕನ್ನು ಅವಲೋಕಿಸುವುದು ಮುಖ್ಯವೆನಿಸುತ್ತದೆ. ಮೊದಲಿನ ಇಬ್ಬರೂ ವೈವಾಹಿಕ ಬದುಕಿನ ಚೌಕಟ್ಟನ್ನು ಪ್ರವೇಶಿಸದವರು. ಗಲಗಲಿಯ ಅವ್ವನವರು ಹನ್ನೆರಡನೆ ಹರೆಯದಲ್ಲಿ ತೊಂಬತ್ತೊಂದರ ಹರೆಯದ ವರನ ಕೈ ಹಿಡಿದವರು! ಹಾಗೂ ವಿವಾಹವಾದ ಎಂಟು ದಿನಗಳಲ್ಲೇ ವೈಧವ್ಯವನ್ನು ಪಡೆದುಕೊಂಡವರು ಹೆಳವನಕಟ್ಟೆ




ಕೆತ್ತಲಾದೊಡನೆ ಎಲ್ಲರಿಗೂ ರಾತ್ರಿ
ಇಲ್ಲಿ ಮುಂಜಾವು,
ಕೆಲಸದ ಆರಂಭ!
ಹಸಿವಿಗೆ ಸಂಪಾದನೆ

ಅಳುವ ಮಗುವನು
ಕೈಗಿತ್ತು,
ಮೈಯ ಮೈಲಿಗೆಗೆ ಸಿದ್ಧ
ಮೈಲಿಗೆ ದೇಹದ
ಮೊಲೆಯುಣಿಸಲು,
ಓಡೋಡಿ ಬಂದರೆ,
ಮೈಯೆಲ್ಲಾ ಕೆಂಪು, ಕೆಂಪು.

ಮೊಲೆಯಿಂದ
ಹಾಲಲ್ಲ ರಕ್ತ
ಹಸುಳೆಗೇನು ಗೊತ್ತು?
ರಕ್ತ ತರ್ಪಣವೆಂದು!


ಎನ್. ದೇವರಾಜ್
ನಂ. ೬೭೪, ೮ನೇ ಮುಖ್ಯರಸ್ತೆ, ೬ನೇ ಅಡ್ಡರಸ್ತೆ ಆರ್.ಪಿ.ಸಿ. ಬಡಾವಣೆ, ವಿಜಯನಗರ ೨ನೇ ಹಂತ, ಬೆಂಗಳೂರು – ೫೬೦ ೦೪೦

ಗಿರಿಯಮ್ಮ ಬಾಲ್ಯದಲ್ಲಿಯೇ ವಿರಕ್ತಿಯಲ್ಲಿ ಆಸಕ್ತಿ ಹೊಂದಿದ್ದು, ವಿವಾಹಾನಂತರ ಗಂಡನಿಗೆ ಬೇರೆ ಮದುವೆ ಮಾಡಿಸಿ ತಾವು ಭಕ್ತಿಯ ಪಥದಲ್ಲಿ ಸಾಗಿದವರು. ಹರಪನಹಳ್ಳಿಯ ಭೀಮವ್ವ ತನ್ನ ಹನ್ನೊಂದರ ಹರೆಯದಲ್ಲಿ ನಲವತ್ತೈದರ ಹರೆಯದ ವರನ ಮೂರನೆಯ ಹೆಂಡತಿಯಾಗಿ ದಾಂಪತ್ಯವನ್ನು ಪ್ರವೇಶಿಸುವ ಮೂಲಕ ವಿಷಮ ದಾಂಪತ್ಯದ ಸುಖ ಉಂಡವರೇ. ಈ ಎಲ್ಲ ವಿವರಗಳನ್ನು ಗಮನಿಸಿದರೆ, ಇವರೆಲ್ಲರೂ ತಮ್ಮ ನೊಂದ ಬದುಕನ್ನು ಎಲ್ಲೂ ವ್ಯಕ್ತಪಡಿಸಲಿಲ್ಲ, ಭಕ್ತಿ ಎಂಬ ಸಾಧನೆಯೇ ಅವರ ಎಲ್ಲ ಅರಕೆಗಳನ್ನು ತುಂಬಿಕೊಳ್ಳುವ ಪ್ರಬಲ ಶಕ್ತಿಯಾಗಿ ಅವರಿಗೆ ನೆರವಾಯಿತು ಎನಿಸುತ್ತದೆ. ಅವರು ಯಾರೂ 'ಸ್ವ'ದ ಬಗ್ಗೆ ಪ್ರಶ್ನಿಸಿಕೊಳ್ಳದೆ, ಸಂತತನಕ್ಕೆ ತಮಗೆ ದೊರೆತ ಪ್ರವೇಶ ಮಾತ್ರದಿಂದ ಸಂಭ್ರಮಿತರಾಗಿರಬೇಕು. ಬದುಕಿನ ವ್ಯಂಗ್ಯವೆಂಬಂತೆ ವಿವಾಹದ ಚೌಕಟ್ಟನ್ನು ಪ್ರವೇಶಿಸದ ಅಥವಾ ಹೀಗೆ ಹೋಗಿ ಹಾಗೆ ಹಾದು ಬಂದ ಇವರೆಲ್ಲರೂ ಬರೆದುದು ಹೆಣ್ಣುಮಕ್ಕಳ ವ್ರತ, ಪೂಜೆ, ವಿಶೇಷ ಸಂದರ್ಭಗಳಲ್ಲಿ ಹಾಡಲು ಪೂರಕವಾದ ಸಾಂಪ್ರದಾಯಿಕ ಹಾಡುಗಳನ್ನು ಎಂಬುದನ್ನು ಗಮನಿಸಬೇಕು. ಅದನ್ನು ಬಿಟ್ಟರೆ, ರಾಮಾಯಣ, ಭಾರತ, ಭಾಗವತ ಮುಂತಾದವುಗಳ ಘಟನೆಗಳನ್ನು ಆಧಾರವಾಗಿಟ್ಟುಕೊಂಡ ಕಥನ ಕವನ ಅಥವಾ ಪುಟ್ಟ ಪುಟ್ಟ ಕೃತಿಗಳನ್ನು ಮಾತ್ರ. ಎಂದರೆ ದಾಸ ಸಾಹಿತ್ಯದಲ್ಲಿ ಮಹಿಳೆಯರು ಇದ್ದರೂ, ಅವರ ಸಾಹಿತ್ಯದಲ್ಲಿ ಮಹಿಳಾಪರ ಕಾಳಜಿಗಳು ಪಿತೃಸತ್ತೆಯ ಮೌಲ್ಯಗಳ ನೆರಳಲ್ಲೇ ಸಾಗಿಬಂದವು ಎನ್ನುವುದು ಗಮನಾರ್ಹ ವಿಚಾರ.

**ದಾಸರ ಸ್ತ್ರೀಪರ ಕಾಳಜಿ**

ಇಷ್ಟೆಲ್ಲ ಹೇಳಿದರೂ, ಅಲ್ಲೊಮ್ಮೆ ಇಲ್ಲೊಮ್ಮೆ ಮಹಿಳೆಯ ದುಃಸ್ಥಿತಿಗೆ ಧ್ವನಿಕೊಡುವ ಪ್ರಯತ್ನವನ್ನು ದಾಸರು ಮಾಡಿದ್ದಾರೆ. ಪುರಂದರದಾಸರ ಅಸಂಖ್ಯ ಕೀರ್ತನೆಗಳಲ್ಲಿ ಎರಡು ಕೀರ್ತನೆಗಳು ಮಹಿಳಾಪರ ಕಾಳಜಿಗಳನ್ನು ಪ್ರಕಟಿಸುತ್ತವೆ. ಅವುಗಳಲ್ಲಿ ಒಂದು, ಎಳೆಯ ಪ್ರಾಯದ ಹೆಣ್ಣು ವೃದ್ಧ ಪತಿಯನ್ನು ಪಡೆದು ಅನುಭವಿಸುವ ಸಂಕಟವನ್ನು ಹೇಳುತ್ತದೆ.

ಮುಪ್ಪಿನ ಗಂಡನ ಒಲ್ಲೆನೆ
ತಪ್ಪದೆ ಪಡಿಪಾಟ ಪಡಲಾರೆನವ್ವ
ಉದಯದಲೇಳಬೇಕು ಉದಕ ಕಾಯಿಸಬೇಕು
ಹದನಾಗಿ ಬಜೆಯನು ಅರೆದಿಡಬೇಕು
ಬದಿಯಲಿ ಎಲೆಯಡಿಕೆ ಕುಟ್ಟಿಡಬೇಕು
ಬಿದಿರಕೋಲು ತಂದು ಮುಂದಿಡಬೇಕು
ಪಿತ್ತವ್ಯೋಕರಿಕೆ ಮುದುಕರಿಗೆ ವಿಶೇಷವು
ಹೊತ್ತುಹೊತ್ತಿಗೆ ಜೊಲ್ಲ ಚೆಲ್ಲಬೇಕು
ಮೆತ್ತನವೆರಡು ಮುದ್ದಿಯ ಮಾಡಲುಬೇಕು
ಒತ್ತೊತ್ತಿ ಕೂಗಿ ಕರೆಯಲುಬೇಕು

ಎಂಬಲ್ಲಿ ವೃದ್ಧನನ್ನು ಪತಿಯಾಗಿ ಪಡೆದ ಹೆಣ್ಣಿನ ನೋವು, ಹತಾಶೆ, ಆಕೆ ಕೈಗೊಳ್ಳಬೇಕಾದ ಸೇವಾಕೈಂಕರ್ಯಗಳು ಅನಾವರಣಗೊಂಡಿವೆ. ಇವೆಲ್ಲವನ್ನೂ ಬೇಸರಿಸದೆ ಮಾಡಿದರೂ, ರಾತ್ರಿ ತಾನು, ''ಮಡಿಗೊಂಡು ಮೂಲೆಗೆ ಒರಗಬೇಕು'' ಎಂದು ನೋಯುತ್ತಾಳೆ. ವಿಷಮ ದಾಂಪತ್ಯಕ್ಕೆ ಇದು ಭಾಷ್ಯ ಬರೆದಂತಿದೆ. ಏನೇನು ಸೇವೆಯನ್ನು ಮಾಡಿದರೂ ಕೊನೆಗೆ ರಾತ್ರಿಯ ಅಸಹನೀಯ ಒಂಟಿತನ ಮತ್ತು ಕಾಡುವ ಕಾಮನೆಗಳಿಗೆ ಕಣ್ಣೀರು ಮಾತ್ರ ಅವಳಿಗೆ ನಿತ್ಯ ಸಂಗಾತಿ ಎಂಬುದನ್ನು ಕೀರ್ತನೆ ಮಾರ್ಮಿಕವಾಗಿ ಚಿತ್ರಿಸಿದೆ. ಅಂದಿನ ದಿನಮಾನಗಳಲ್ಲಿ ಈ ಬಗೆಯ ವಿಷಮ ವಿವಾಹ ತೀರಾ ಅಪರೂಪವೇನೂ ಆಗಿರಲಿಲ್ಲ. ದಾಸಸಾಹಿತ್ಯದ ಮಹಿಳೆಯರ ಬದುಕೂ ಇಲ್ಲಿ ಅಯಾಚಿತವಾಗಿ ನೆನಪಾಗುತ್ತದೆ. ಇಂಥ ವಿಷಮ ದಾಂಪತ್ಯದಲ್ಲಿ ನೊಂದ ಹೆಣ್ಣಿನ ಅಳಲು ಪುರಂದರದಾಸರ ಅಂತಃಕರಣವನ್ನು ತಟ್ಟಿದೆ.

ಅವರದೇ ಇನ್ನೊಂದು ಕೀರ್ತನೆಯು ವೈದಿಕ ಮನೆತನದ ಸೊಸೆಯಾಗಿ ಹೆಣ್ಣು ಪಡುವ ಪಾಡು ಮತ್ತು ಅದರಲ್ಲೂ ಅರಸಿಕ ಹಾಗೂ ವಿರಕ್ತ ಗಂಡನ ಸಹವಾಸದಲ್ಲಿ ಆಕೆ ಪಡುವ ಪಾಡನ್ನು ವಿವರಿಸುತ್ತದೆ.

ಒಲ್ಲೆನೆ ವೈದಿಕ ಗಂಡನ ನಾ
ನೆಲ್ಲಾದರೂ ನೀರ ಧುಮುಕುವೆನವ್ವ
ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ
ಕೆಟ್ಟ ಸೀರೆಯ ನಾನುಡಲಾರೆನೆ
ಹಿಟ್ಟ ತೊಳಸಿ ಎನ್ನ ರಟ್ಟೆಯೆಲ್ಲ ನೊಂದವು
ಎಷ್ಟೆಂದು ಹೇಳಲಿ ಕಷ್ಟದ ಒಗೆತನ

ಎಂಬಲ್ಲಿ ಮನೆಯೊಳಗಿನ ದಾರಿದ್ರ್ಯ, ಕೆಲಸದ ಭಾರಗಳ ಚಿತ್ರವಿದ್ದರೆ,

ಕೃಷ್ಣಾಜಿನವನು ರಟ್ಟೆಯಲಿ ಹಾಕಿಕೊಂಡು
ಬೆಟ್ಟಲಿ ಗಿಂಡಿಯ ಹಿಡಿದಹನೆ
ದಿಟ್ಟತನದಿ ನಾನೆದುರಿಗೆ ಹೋದರೆ
ದೃಷ್ಟಿಯಿಂದಲಿ ಎನ್ನ ನೋಡನಮ್ಮ...

ಎಂದು ಕಣ್ಣೀರಿಡುತ್ತಾಳೆ. ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣಿನ ಲೈಂಗಿಕತೆ ಹೇಗೆ ಉಪೇಕ್ಷೆಗೆ ಒಳಗಾಗುತ್ತದೆ ಮತ್ತು ಸೊರಗುತ್ತದೆ ಎಂಬುದನ್ನು ಈ ಕೀರ್ತನೆ ಮಾರ್ಮಿಕವಾಗಿ ಹಿಡಿದಿಟ್ಟಿದೆ. ಆದರೆ ತನಗೊದಗಿದ ಸ್ಥಿತಿಯಲ್ಲಿ ಪೂರ್ವಜನ್ಮದಲ್ಲಿ ಪುರಂದರವಿಠಲನ ಸೇವೆ ಸರಿಯಾಗಿ ಮಾಡದಿದ್ದುದೇ ಕಾರಣ ಎಂಬ ವಿಧಿವಾದದಲ್ಲಿ ಕೀರ್ತನೆಯು ಕೊನೆಗೊಳ್ಳುತ್ತದೆ. ಒಂದರ್ಥದಲ್ಲಿ ಇದು ಹೆಣ್ಣು ಅಥವಾ ಹೆಂಗಸರಿಗೆ ವ್ಯವಸ್ಥೆ ನೀಡಿದ 'ವಿಧಿ'ಯೂ ಆಗಿದೆ. ಇಂತಹ ಸ್ತ್ರೀಪರ ಕಾಳಜಿಗಳು ಪುರಂದರದಾಸರ ಕೀರ್ತನೆಗಳಲ್ಲಿ ವಿರಳವಾಗಿ ಯಾದರೂ ದೊರೆಯುತ್ತವೆ ಎಂದು ಸಮಾಧಾನ ಪಡಬೇಕು. ಮೇಲಿನ ವಿಚಾರಗಳ ಹಿನ್ನೆಲೆಯಲ್ಲಿ ಸ್ತ್ರೀವಾದದ ಆದಿ ಚಿಂತಕಿಯರಲ್ಲಿ ಓರ್ವರಾದ ಸಿಮನ್ ದಿ ಬುವಾ ಅವರ ಮಾತುಗಳು ನೆನಪಾಗುತ್ತವೆ. ಅವರು ತಮ್ಮ 'ದಿ ಸೆಕೆಂಡ್ ಸೆಕ್ಸ್' ಕೃತಿಯಲ್ಲಿ, ''ಮಹಿಳೆಯರಿಗೆ ಅವರದ್ದೇ ಆದ ಪುರಾಣಗಳಿಲ್ಲ. ಇರುವ ಪುರಾಣಗಳೆಲ್ಲವೂ ಪುರುಷರಿಂದ ರಚಿತವಾಗಿದ್ದು, ಪುರುಷಪರವಾದ ಮತ್ತು ಪುರುಷಾನುಕೂಲಿಯಾದ ರೀತಿಯಲ್ಲಿ ರೂಪುಗೊಂಡಿವೆ. ಪುರುಷರು ಮಹಿಳೆಯರ ಕುರಿತು ಹೊಂದಿದ ಭಯ, ಆತಂಕ ಮತ್ತು ಪೂರ್ವಗ್ರಹಗಳು ಅವರು ರಚಿಸಿದ ಪುರಾಣಗಳಲ್ಲೂ ಅಭಿವ್ಯಕ್ತಿಗೊಂಡಿವೆ'' ಎಂದಿದ್ದಾರೆ. ಎಲ್ಲ ಪುರಾಣಗಳೂ ಮಹಿಳೆಯನ್ನು ತ್ರಿಕೋನ ನೆಲೆಗಳಲ್ಲಿ ಗ್ರಹಿಸಿವೆ. ಅವುಗಳೆಂದರೆ ತಾಯ್ತನ, ಪತ್ನಿತ್ವ ಮತ್ತು ಪ್ರೇಯಸಿ ಅಥವಾ ದೇವತೆ, ರಾಕ್ಷಸಿ ಮತ್ತು ಮಾಯಾವಿ ಎಂಬ ನೆಲೆಗಳು.

ತಾಯಿಯಾಗಿ ಮಕ್ಕಳ ಪಾಲನೆ, ಪೋಷಣೆ, ಸೇವೆ ಮಾಡುವುದಲ್ಲದೆ, ತನ್ನ ಸರ್ವಸ್ವವನ್ನೂ ಸಂತಾನದ ಏಳಿಗೆಗಾಗಿ ವಿನಿಯೋಗಿಸುವುದರಲ್ಲಿ ಆಕೆಯ ಸಾರ್ಥಕತೆ ಇದೆ ಎಂದು ವ್ಯವಸ್ಥೆಯು ಆರೋಪಿಸುತ್ತದೆ. ಪತ್ನಿಯಾಗಿ ಅವಳ ಅಸ್ಮಿತೆ ಗಂಡನ ಎಲ್ಲ ಬಗೆಯ ಇಷ್ಟಾರ್ಥ ಮತ್ತು ಬಯಕೆಗಳನ್ನು ಈಡೇರಿಸುವ ಜವಾಬ್ದಾರಿ/ಕರ್ತವ್ಯವನ್ನು ಹೇರುತ್ತದೆ. ದಾಂಪತ್ಯದ ಚೌಕಟ್ಟಿನ ಆಚೆಯಲ್ಲಿ ಗಂಡು ಪ್ರೇಮವನ್ನು ಪ್ರೇಯಸಿಯ ನೆಲೆಯಲ್ಲಿ ಪಡೆಯುವುದನ್ನು ಈ ವ್ಯವಸ್ಥೆಯು ಅಂಗೀಕರಿಸಿದೆ. ಅದರ ಮುಂದುವರಿಕೆ ಎಂಬಂತೆ ಹೆಣ್ಣು ತಾಯಿಯಾಗಿ ದೈವತ್ವಕ್ಕೆ ಏರಿ, ಆರಾಧನೆಗೆ ಒಳಗಾಗುತ್ತಾಳೆ (ಕಾಳಿ, ದುರ್ಗೆ, ಪಾರ್ವತಿ...). ಅದರ ಇನ್ನೊಂದು ಅತಿರೇಕದ ತುದಿ ಎಂದರೆ ಮನುಷ್ಯರನ್ನೇ ಕೊಲ್ಲುವ ರಾಕ್ಷಸಿಯ ನೆಲೆ (ತಾಟಕಿ, ಶೂರ್ಪನಖಿ...), ಮೂರನೆಯ ಅತಿರೇಕದ ನೆಲೆಯೇ ಮಾಯಾವಿಯದು (ಮೋಹಿನಿ, ರಂಭೆ, ಊರ್ವಶಿ...). ಇಲ್ಲಿ ಗಂಡು ಸಹಜವಾಗಿಯೇ ಇಂದ್ರಿಯ ನಿಗ್ರಹವನ್ನು ಉಳ್ಳವನು ಎಂದೂ ಅವನ ನಿಗ್ರಹವನ್ನು ಭಂಗಪಡಿಸಿ ಅವನನ್ನು ಅಧೋಮುಖಿದತ್ತ ಸಾಗಿಸುವವಳು ಹೆಣ್ಣು ಎಂಬ ಚಿಂತನೆ ಅಡಕವಾಗಿದೆ. ಬುವಾ ಅವರು ಹೇಳಿದ ಈ ಚಿಂತನೆಯು ಯಾವುದೇ ದೇಶ ಮತ್ತು ಜನಾಂಗದ ಪುರಾಣಗಳಿಗೂ ಅನ್ವಯವಾಗುತ್ತದೆ. ದಾಸಸಾಹಿತ್ಯದ ನೆಲೆಯಲ್ಲಿ ಈ ಅಂಶ ಇನ್ನಷ್ಟು ನಿಚ್ಚಳವಾಗುತ್ತದೆ. ದಾಸಸಾಹಿತ್ಯದಲ್ಲಿ ಹೆಣ್ಣು ತಾಯ್ತನದ ಸ್ಥಿತಿಯಲ್ಲಿ ದೈವತ್ವಕ್ಕೆ ಏರಿದರೆ, ಪತ್ನಿತ್ವದಲ್ಲಿ ಗಂಡನನ್ನು ಅಧಃಪತನಕ್ಕೆ ಎಳೆದ ರಾಕ್ಷಸಿಯಾಗಿದ್ದಾಳೆ. ಇಲ್ಲವೆ ಆತನ ಇಂದ್ರಿಯ ನಿಗ್ರಹವನ್ನು ಕೆಡಿಸುವ ಮಾಯಾವಿಯಾಗಿ ಮೂಡಿದ್ದಾಳೆ. ಇದು ಭಕ್ತಿಪಂಥದ ಚಿಂತನೆಯ ಮಿತಿಯೇ ಹೊರತು ವ್ಯಕ್ತಿಗತ ಮಿತಿಯೆಂದು ಪರಿಗಣಿಸಲು ಸಾಧ್ಯವಿಲ್ಲ.

ಕೊನೆಯ ಮಾತುಗಳಾಗಿ ಹೇಳುವುದಾದರೆ, ದಾಸ ಸಾಹಿತ್ಯವನ್ನು ಮಹಿಳಾಪರ ದೃಷ್ಟಿಕೋನದ ಹಿನ್ನೆಲೆಯಿಂದ ನೋಡುವ ಮೂಲಕ, ಭಕ್ತಿ ಚಳುವಳಿಯು ಭಕ್ತ, ಭಕ್ತಿ, ಸಾಧನೆ, ಮೋಕ್ಷ ಮುಂತಾದ ವಿಚಾರಗಳ ಕುರಿತು ಚಿಂತಿಸಿದ್ದೆಲ್ಲವೂ ಪುರುಷನೆಲೆಯಿಂದಲೇ ಎಂಬ ಸತ್ಯ ನಿಚ್ಚಳವಾಗುತ್ತದೆ. ಪಿತೃಪ್ರಧಾನತೆಯ ಬೇರುಗಳ ಆಳ ಮತ್ತು ವ್ಯಾಪ್ತಿಯನ್ನು ಇದು ಹೇಳುವುದಲ್ಲದೆ, ಅದರ ಬಲವನ್ನೂ ಸೂಚಿಸುತ್ತದೆ. ದಾಸತನವನ್ನು ಆರೋಪಿಸಿಕೊಳ್ಳುವುದಕ್ಕೂ ದಾಸ್ಯವನ್ನು ಅನುಭವಿಸುವುದಕ್ಕೂ ಅಜಗಜಾಂತರವಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಸ್ತ್ರೀಪರವೆಂದು ಹೇಳುವುದಕ್ಕೂ ಸ್ತ್ರೀವಾದಿಯಾಗಿ ಬದುಕುವುದಕ್ಕೂ ಇರುವ ಅಂತರವೇ ಇಲ್ಲೂ ಇದೆ.

*(ಕರ್ನಾಟಕ ಸಾಹಿತ್ಯ ಅಕಾಡೆಮಿಯು ಹಾಸನದಲ್ಲಿ ನಡೆಸಿದ 'ಕನ್ನಡ ಸಾಹಿತ್ಯದಲ್ಲಿ ಮಹಿಳಾಪರ ಚಿಂತನೆಗಳು' ಎಂಬ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧದ ಸಂಕ್ಷಿಪ್ತ ರೂಪ.)*

**ಡಾ|| ಸಬಿಹಾ ಭೂಮೀಗೌಡ**
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪ ೧೯೯

# ‘ಜಂಗಮದೆಡೆಗೆ’

## ನಾಟಕ ಸಮೀಕ್ಷೆ

ಡಾ|| ಎಸ್. ಪ್ರಸಾದಸ್ವಾಮಿ

‘ಕಾವ್ಯೇಷು ನಾಟಕಂ ರಮ್ಯಂ’ ಎಂಬ ಮಾತು ಬಹುಶಃ ನಾಟಕವೊಂದರ ಸಾಹಿತ್ಯಕ ಗುಣಗಳನ್ನು ನಿರ್ವಚಿಸಲು ಹೇಳಿದ್ದಿರಬಹುದು. ‘ರಮ್ಯತೆ’ ನಾಟಕದ ವಸ್ತುವಿನಲ್ಲಿ ಇರುವುದ ? ಕ್ರಿಯೆಯಲ್ಲಿರುವುದೇ ? ಇಲ್ಲವೆ ನಾಟಕ ಒಳಗೊಂಡಿರಬಹುದಾದ ಸಾಮಾಜಿಕ-ಸಾಂಸ್ಕೃತಿಕ ಆಯಾಮಗಳಲ್ಲಿರುವುದೇ ? ಪ್ರದರ್ಶನದಲ್ಲಿ ಹೊಮ್ಮ ಬಹುದೇ ? ಅಥವಾ ಈ ಎಲ್ಲ ಅಂಶಗಳಿಂದ ಒಡಮೂಡ ಬಹುದಾದ ಸಾಹಿತ್ಯಕ ಕೃತಿಯ ಪರಿಣಾಮಗಳಲ್ಲಿರಬಹುದೆ ?

ಮೇಲಿನ ‘ಹೇಳಿಕೆ’ ಸೃಷ್ಟಿಗೊಂಡ ಅಥವಾ ಬಳಕೆಯಲ್ಲಿದ್ದ ಕಾಲದಲ್ಲಿ ‘ನಾಟಕ’ ಕೇವಲ ಕೃತಿ (ಸಾಹಿತ್ಯಕ) ಆಗಿರಬೇಕು. ಬಹುಶಃ ಆಗ ರಂಗಪ್ರದರ್ಶನದ ಸಾಧ್ಯತೆಗಳಿಲ್ಲದಿರಬಹುದು; ಅಥವಾ ಪ್ರದರ್ಶನಗೊಂಡ ಕೃತಿಯನ್ನು ಕುರಿತ ವಿಮರ್ಶೆಯೂ ಇಲ್ಲದಿರಬಹುದು !

ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ನಾಟಕ ಕೇವಲ ‘ಸಾಹಿತ್ಯಕ ಕೃತಿ’ಯಾಗಿಯಷ್ಟೇ ನೆಲೆನಿಂತಿಲ್ಲ. ಅಲ್ಲದೆ ಅನೇಕ ಮುಖ್ಯ ನಾಟಕಕಾರರು ತಮ್ಮ ಕೃತಿಗಳ ರಂಗಪ್ರದರ್ಶನದ ಬಗ್ಗೆ ಅಷ್ಟೇನೂ ಒಳ್ಳೆಯ ಅಥವಾ ಸಮಾಧಾನದ ಪ್ರತಿಕ್ರಿಯೆ ನೀಡಿಲ್ಲದಿರುವುದು ಈಗಾಗಲೇ ದಾಖಲಾಗಿರುವ ಸಂಗತಿಯಾಗಿದೆ.

ಆದರೆ ಎಪ್ಪತ್ತನೇ ದಶಕದಿಂದೀಚೆಗಿನ ನಾಟಕ ಕೃತಿ ಸಾರ್ಥಕ್ಯ ಪಡೆದುಕೊಂಡಿರುವುದೂ ರಂಗ ಪ್ರದರ್ಶನ ದಿಂದಲೇ ಎಂಬುದೂ ವೇದ್ಯ. ಅಂದರೆ, ಈಗೀಗ ನಾಟಕ ತನ್ನ ಎರಡೂ ಅವಸ್ಥೆಗಳಿಂದಲೂ - ಕೃತಿ, ಪ್ರದರ್ಶನ - ಗಮನ ಸೆಳೆದಿದೆ.

ಪ್ರಸ್ತುತ, ‘ಜಂಗಮದೆಡೆಗೆ’ ನಾಟಕ ಕೊಂಚ ವಿಶಿಷ್ಟ ವಾದುದು. ಈ ವಿಶಿಷ್ಟತೆ ಅದರ ಗುಣವೋ, ದೋಷವೋ ಕಾಲವೇ ನಿರ್ಧರಿಸಬೇಕು. ನಾಟಕಕಾರರೇ ಹೇಳಿಕೊಂಡಿರುವಂತೆ ಇದು ‘ಕೃತಿ’ ರೂಪ ತಾಳಿರುವುದು ಅನೇಕ ಪ್ರದರ್ಶನಗಳನ್ನು ನೀಡಿದ ನಂತರವೇ !

ಅಲ್ಲದೆ ಈ ಕೃತಿ ಅದಮ್ಯ ಸೃಜನಶೀಲತೆಯಿಂದಾಗಲೀ, ತಕ್ಷಣದ ಪ್ರತಿಕ್ರಿಯೆಯಾಗಿ ಆಗಲೀ ರೂಪುಗೊಂಡದ್ದಲ್ಲ; ಬದಲಿಗೆ ಚಿಂತನೆಗಳು, ಪ್ರಯತ್ನಗಳು, ಸಮಾಲೋಚನೆಗಳು, ಅನಿಸಿಕೆಗಳ ಸಹಕಾರದಿಂದ ಮೂಡಿಬಂದದ್ದು. ಹನ್ನೆರಡನೇ ಶತಮಾನದ ವಚನ ಚಳುವಳಿಯ ಕಾಲಘಟ್ಟದ ಶರಣ (?) ಕ್ರಾಂತಿಯ ಒಂದು ಆಯಾಮವನ್ನು ಮಾತ್ರ ತನ್ನ ಮುಖ್ಯ ನೆಲೆಯಾಗಿಟ್ಟುಕೊಂಡ ಕೃತಿ ಇದು. ಆ ಕಾಲಘಟ್ಟದ ಸಾಹಿತ್ಯಕ ಪರಿಸರವಾಗಲಿ, ವಚನಗಳ ಸಾಹಿತ್ಯಕ ಗುಣಗಳಾಗಲಿ, ಕಳೆದ ಸಾವಿರ ವರ್ಷಗಳಲ್ಲಿ ಈ ‘ಕಾಲಘಟ್ಟ’ವು ಮೂಡಿಸಿರಬಹುದಾದ ದೇಸೀ ಚಿಂತನೆಯ ಸೆಲೆಗಳಾಗಲಿ, ಕಂಡುಬಂದ ಭಾಷಿಕ ಪಲ್ಲಟಗಳಾಗಲಿ ಈ ಕೃತಿಯನ್ನು ಪೋಷಿಸಿದಂತೆ ಕಾಣುವುದಿಲ್ಲ. ಹಾಗಾಗಿ ವಚನ ಚಳುವಳಿಯ ಫಲಶ್ರುತಿ ಎಂಬಂತೆ ಮೂಡಿಬಂದ ಕೆಲವು ಘಟನೆ ಮತ್ತು ಭಾವಸ್ಪಂದನೆಗಳೇ ಈ ಕೃತಿಯ ರಚನೆಗೆ ತಾತ್ವಿಕ ನೆಲೆಯಾಗಿರುವುದನ್ನು ಗಮನಿಸಬಹುದು.

ಕನ್ನಡದ ಆಧುನಿಕ ಪ್ರಕಾರಗಳಲ್ಲಿ ವಚನ ಚಳುವಳಿ ಭಿನ್ನ ಭಿನ್ನ ಆಯಾಮಗಳಲ್ಲಿ ಬಿಂಬಿತವಾಗಿದೆ. ನಾಟಕವೂ ಅದಕ್ಕೆ ಹೊರತಾಗಿಲ್ಲ. ಕಾವ್ಯಗಳಲ್ಲಿ ಪವಾಡ, ಭಕ್ತಿ, ನಂಬಿಕೆ, ಆಕ್ರಮಣ ಮೊದಲಾದ ಅಂಶಗಳು ಪ್ರಧಾನ ನೆಲೆ ಗಳಿಸಿವೆ; ಆದರೆ ನಾಟಕ, ಕಾದಂಬರಿಗಳಲ್ಲಿ ವಿಚಾರ-ವಿಮರ್ಶೆ-ಒಳನೋಟ-ಆಶಯಗಳ ಹುಡುಕಾಟ ಕಂಡುಬರುತ್ತದೆ. ಆ ಹಿನ್ನೆಲೆಯಲ್ಲಿ. ಆಧುನಿಕ ನಾಟಕಗಳಾದ ಸಂಕ್ರಾಂತಿ, ತಲೆದಂಡ, ಮಹಾಚೈತ್ರ ಗಮನಾರ್ಹ ಕೃತಿಗಳು.

ಎಂ. ಎಂ. ಕಲ್ಬುರ್ಗಿಯವರ ‘ಕೆಟ್ಟಿತ್ತು ಕಲ್ಯಾಣ’ ಈ ದಿಸೆಯ ಒಂದು ಪ್ರಯತ್ನ; ಹೊಸ ಹೊಳಹುಗಳ ದಿಟ್ಟ ಪ್ರಯೋಗ. ಲಂಕೇಶರ ‘ಸಂಕ್ರಾಂತಿ’ ವಚನಯುಗದ ದ್ವಂದ್ವ, ತಲ್ಲಣ, ಅನುಮಾನ, ಅವಮಾನ, ವ್ಯಕ್ತಿ-ಸಂಬಂಧ-ಸಮಾಜ ಇವೆಲ್ಲವನ್ನು ಬೆಸೆದು ಬಿಗಿದಿಟ್ಟ ಅದ್ಭುತ ಕೃತಿ. ಬಹುಶಃ ಉಳಿದ ಕೃತಿಗಳಲ್ಲಿ ಕಾಣದ ‘ಸಾಮಾಜಿಕ- ಸಾಂಸ್ಕೃತಿಕ’ ಹುಡುಕಾಟ ಈ ನಾಟಕದ ವೈಶಿಷ್ಟ್ಯ. ಅಲ್ಲದೆ ಸಮಾಜದ ಕೆಳವರ್ಗದವರ ದೃಷ್ಟಿಕೋನದಿಂದ ಮತ್ತು ಒಂದು ಬಗೆಯ ನಿರ್ಲಿಪ್ತ-ನಿರ್ಭಾವುಕ ನೆಲೆಯಿಂದ ರೂಪುಗೊಂಡಿರುವ ಈ ಕೃತಿ ತನ್ನ ಅಪೂರ್ವ ನಾಟಕೀಯತೆ, ಚುರುಕು ಸಂಭಾಷಣೆ, ಮಾನವನ ಹಸಿ ಹಸಿ ವರ್ತನೆಗಳ ಅನಾವರಣ, ಧ್ವನಿಶಕ್ತಿ ಇವುಗಳಿಂದ ತೀವ್ರ ಕುತೂಹಲ- ಆಸಕ್ತಿ ಹುಟ್ಟಿಸುವ ಕೃತಿಯಾಗಿದೆ.

ಕಾರ್ನಾಡರ ‘ತಲೆದಂಡ’ ರಾಜಕೀಯ ನೆಲೆಯನ್ನು ಮುಖ್ಯವಾಗಿಟ್ಟುಕೊಂಡು ವಚನಯುಗವನ್ನು ನಿರ್ವಚಿಸಿದ ನಾಟಕ. ಚಟುಲಗತಿಯ ಓಟ, ಏರ್ಪಡುವ ಘರ್ಷಣೆ, ಬಿಜ್ಜಳನ ಒಳತೋಟಿ, ಬಸವಣ್ಣನ ಅದ್ಭುತ ಪಾತ್ರ ನಿರ್ವಹಣೆ ಈ ನಾಟಕದ ಗುಣಾಂಶಗಳು. ಆದರೆ ವಸ್ತು ನಿರ್ವಹಣೆಯಲ್ಲಿ ಐತಿಹಾಸಿಕ ಅಂಶಗಳನ್ನು ಉಲ್ಲಂಘಿಸಲಾಗಿದೆ ಎಂಬ ಆರೋಪ ಈ ಕೃತಿಯ ಮೇಲಿದೆ. ಸೃಜನಶೀಲತೆಯ ಭೋರ್ಗರೆತದಲ್ಲಿ ಆ ಆರೋಪ ಗೌಣವೆನಿಸುವಷ್ಟು ಪ್ರಖರವಾಗಿ ‘ತಲೆದಂಡ’ ರಚಿತವಾಗಿದೆ.

ಶಿವಪ್ರಕಾಶರ ‘ಮಹಾಚೈತ್ರ’ ಕೊಂಚ ಗೊಂದಲ, ಅಸ್ಪಷ್ಟತೆ, ಐತಿಹಾಸಿಕ ಅಂಶಗಳ ತಪ್ಪು ಬಳಕೆ, ತೀವ್ರ ಕಾವ್ಯಮಯತೆಯಿಂದಾಗಿ ತಲುಪಬೇಕಾಗಿದ್ದ ಹಂತವನ್ನು ದೂರಮಾಡಿಕೊಂಡಿದೆ. ಹಾಗೆ ನೋಡಿದರೆ ಈ ನಾಟಕವನ್ನು ಕುರಿತ ವಿವಾದಗಳು ಚರ್ಚೆಗಳು ಕೂಡ ಅಷ್ಟೇನೂ ಗಂಭೀರವಾದುವಲ್ಲ.

‘ಜಂಗಮದೆಡೆಗೆ’ ನಾಟಕದ ಕರ್ತೃ ಈ ಕೃತಿಗಳನ್ನು – ಮುಖ್ಯ ನೆಲೆಗಳನ್ನು ಗಮನಿಸಿದ್ದಾರೆ. ಉತ್ಕೃಷ್ಟ ಸಾಹಿತ್ಯ ರಚನೆಗೆ

> ‘ಜಂಗಮದೆಡೆಗೆ’ ನಾಟಕ ಮಹತ್ವದ ಆಶಯಗಳನ್ನು ಹೊತ್ತ , ಮಹತ್ವದ ಕನಸುಗಳನ್ನು ಬಿತ್ತುವ ವಸ್ತುವನ್ನು ಒಳಗೊಂಡಿದೆ. ಸ್ಥಳೀಯ ಭಾಷೆಯ ಬಳಕೆ ನಾಟಕದ ಯಶಸ್ಸಿಗೆ ಕಾರಣವಾಗಿದೆ; ಆದರೆ ಧ್ವನಿಶಕ್ತಿಯ ಸಮರ್ಪಕ ನೇಯ್ಗೆ ದಕ್ಕಿದ್ದರೆ ನಾಟಕಕ್ಕೆ ಹೊಸ ಆಯಾಮ ದೊರೆಯುತ್ತಿತ್ತು. ಸೃಜನಶೀಲ ಚಿಂತನೆಗಳ ಮೊತ್ತ ಈ ಕೃತಿ. ಆದರೆ ಆ ಚಿಂತನೆಗಳು ಸಾಹಿತ್ಯಕ ಪರಿಕರಗಳಾಗಿವೆಯೇ ಎಂಬುದೇ ಇಲ್ಲಿ ಕಾಡುವ ಮುಖ್ಯ ಪ್ರಶ್ನೆಯಾಗಿದೆ. ಹಾಗಾಗಿ ಈ ನಾಟಕ ಒಂದು ಯಶಸ್ವೀ ‘ರಂಗಕೃತಿ’ ಎನ್ನಬಹುದು.



ಅವಕಾಶ ನೀಡಿರುವ 'ಅದೇ ಸಂದರ್ಭ'ವನ್ನು ಮತ್ತೆ ಕೃತಿಯೊಂದರ ಒಡಲಿಗೆ ಒಗ್ಗಿಸುವ ಪ್ರಯತ್ನ ಕಷ್ಟದ್ದು, ಅಸಾಧ್ಯವಾದುದು, ಅನಗತ್ಯವಾದುದು ಎಂಬ ಭಾವವೂ ಅವರನ್ನು ಕಾಡಿದೆ. ಆದರೂ ಆ ಕಾಲಘಟ್ಟವನ್ನು ಮತ್ತೊಮ್ಮೆ ಸ್ಪಂದಿಸುವ, ಸ್ಪರ್ಶಿಸುವ, ಬಿಂಬಿಸುವ ಪ್ರಯತ್ನ ಇದಾಗಿದೆ. ಒಂದು ರೀತಿಯಲ್ಲಿ ಇದು ಮಹತ್ವಾಕಾಂಕ್ಷೆಯ ಕ್ರಿಯೆ. ಹಾಗಾಗಿ ಈ ಕೃತಿಯ ಸೂಕ್ಷ್ಮ ಅವಲೋಕನದ ಅಗತ್ಯವಿದೆ. ಈ ನಾಟಕದ ರಂಗಪ್ರದರ್ಶನ ನೋಡಲು ಇನ್ನೂ ಸಾಧ್ಯವಾಗಿಲ್ಲ. ಹಾಗಾಗಿ ಇದೊಂದು ಗ್ರಂಥ ಅಥವಾ ಸಾಹಿತ್ಯಕೃತಿ ಎಂದು ಪರಿಗಣಿಸಿ ಇಲ್ಲಿ ವಿಮರ್ಶಿಸಲಾಗಿದೆ.

ಸುಮಾರು ಎಪ್ಪತ್ನಾಲ್ಕು ಪುಟಗಳಲ್ಲಿ ಅಡಕವಾಗಿರುವ ಈ ನಾಟಕ ಸುಂದರವಾಗಿ ಮುದ್ರಿತವಾಗಿದೆ. ಹೊಳೆದ ಅಂಶಗಳನ್ನು, 'ವಸ್ತು'ವನ್ನು ಕುರಿತಂತೆ ಇರುವ ದಾಖಲೆಗಳನ್ನು ಕಂಪ್ಯೂಟರ್‌ಗೆ ಫೀಡ್ ಮಾಡಿ 'ರೂಪ' ನೀಡಿರುವ ಪ್ರಯತ್ನ ಇದಾಗಿದೆ. ಒಟ್ಟು ಹತ್ತೊಂಬತ್ತು ಪುಟ್ಟ ಪುಟ್ಟ ದೃಶ್ಯಗಳಲ್ಲಿ ನಾಟಕ ರೂಪುಗೊಂಡಿದೆ.

ನಾಟಕದ ಮೊದಲ ದೃಶ್ಯದಲ್ಲಿ 'ಹಿಂದಿನ ಕತೆ ನಿರೂಪಿಸಲು' ನಾಟಕಕಾರರು ಬಳಸಿರುವ ತಂತ್ರ ಗಮನ ಸೆಳೆಯುತ್ತದೆ. ಆದರೆ ಅಳಕು-ಬೆಳಕುಗಳ ಸಂಭಾಷಣೆ ಕೊಂಚ ರೂಕ್ಷವೆನಿಸುತ್ತದೆ; ಮಾದರಿಗಾಗಿ: 'ಬೆಪ್ಪೇ, ದೈಹಿಕವಾಗಿ ಅಲ್ಲ; ಮಾನಸಿಕವಾಗಿ, ಬೌದ್ಧಿಕವಾಗಿ, ಭಾವನಾತ್ಮಕವಾಗಿ' ಇಷ್ಟಲಿಂಗ ಧರಿಸಿದವನ ಬಳಿ ಎಲ್ಲ ಶಕ್ತಿಗಳೂ ತಾವಾಗಿಯೇ ಬರುವವು'(!?) 'ನಿನ್ನಲ್ಲಿಯೇ ಅಂಥ ಗಟ್ಟಿತನ, ವೈಚಾರಿಕತೆ ಚಿಗುರದಿದ್ದರೆ ಯಾರ ಆಶೀರ್ವಾದ, ಪ್ರೋತ್ಸಾಹವೂ ಫಲ ನೀಡುತ್ತಿರಲಿಲ್ಲ.'

ಇದೇ ದೃಶ್ಯದಲ್ಲಿ ಬಾಲಕ ಬಸವ ಆಡುವ ಮಾತುಗಳು ಬಾಲ್ಯಸಹಜವಲ್ಲ ಎನಿಸುವಂತಿದೆ. ಆದರೂ ಅವನ ಮಾತುಗಳು ಹಾಗೂ ಅಲ್ಲಿ ಬಿಂಬಿತವಾಗಿರುವ ಆತನ ನಿಲುವುಗಳು 'ಬಸವಣ್ಣ ಮಹತ್ವಾಕಾಂಕ್ಷೆ ಉಳ್ಳವನು; ದೊಡ್ಡದರತ್ತ ಹೆಜ್ಜೆ ಇಟ್ಟವನು' ಎಂಬ ಭಾವವನ್ನು ಮೂಡಿಸುವಂತೆ ರೂಪಿತವಾಗಿವೆ.

ನಾಟಕದ 'ಕಥೆ' ವೇಗವಾಗಿ ಸಾಗುತ್ತದೆ. ಮೊದಲ ದೃಶ್ಯದಲ್ಲಿ ಬಸವನ ಬಾಲ್ಯ ಹಾಗೂ ಬಾಲ್ಯದಲ್ಲಿಯೇ ಅವನ ಬಂಡಾಯವನ್ನು ಪ್ರದರ್ಶಿಸಲಾಗಿದೆ. ಎರಡನೇ ದೃಶ್ಯದಲ್ಲಿ ಬಸವ ಬಿಜ್ಜಳನ ಆಸ್ಥಾನದಲ್ಲಿರಲು ಒಪ್ಪುತ್ತಾನೆ. ಆದರೆ ಮೊದಲ ಭೇಟಿಯಲ್ಲೇ ಬಸವ ಬಿಜ್ಜಳನೊಡನೆ ತುಸು ಹೆಚ್ಚು ಮಾತನಾಡುವುದು ವಿಚಿತ್ರ ಎನಿಸುತ್ತದೆ. ಮೂರನೇ ದೃಶ್ಯ ತೀರಾ ಚಿಕ್ಕದು; ಬಿಜ್ಜಳನ ಮಹತ್ವಾಕಾಂಕ್ಷೆ ಇಲ್ಲಿ ಗೋಚರಿಸುತ್ತದೆ. ಅಂತೆಯೇ ಅವನು ಬಸವನನ್ನು ಹೆಚ್ಚು ಹೊಗಳುತ್ತಾನೆ ಎಂದು ಭಾಸವಾಗುತ್ತದೆ. ನಾಲ್ಕನೇ ದೃಶ್ಯದಲ್ಲಿ ಬ್ರಾಹ್ಮಣರ ಕುತಂತ್ರ, ಅವರ ಕೃತ್ಯಗಳು; ಅವರ ವ್ಯಕ್ತಿಸ್ವಭಾವ ದರ್ಶನ ಢಾಳಾಗಿದೆ. ನಾಟಕದಲ್ಲಿ, ಈ ವೇಳೆಗೆ ಬಿಜ್ಜಳ 'ಚಕ್ರವರ್ತಿ'ಯಾಗಿದ್ದಾನೆ. ಐದನೇ ದೃಶ್ಯದಲ್ಲಿ ಬಸವಣ್ಣನ ಮನಃಸ್ಥಿತಿ ಮತ್ತು ಹೊಯ್ದಾಟಗಳನ್ನು ಅಳಕು-ಬೆಳಕುಗಳು ಬಿಂಬಿಸಿವೆ. ಇವು – ಬಸವಣ್ಣನ ಬಾಲ್ಯ, ಬಂಡಾಯ, ಅಧಿಕಾರ ಹಿಡಿಯುವ ಹಂತಗಳಲ್ಲಿ – ಸಂಘರ್ಷಿಸುವುದು ಗಮನೀಯ. ಬಸವಣ್ಣ ಈಗ ಪ್ರಧಾನಿ !

ಆರನೆಯದೂ ಪುಟ್ಟ ದೃಶ್ಯ. ಸಾಮಾಜಿಕ ಪ್ರಕ್ಷುಬ್ಧತೆಯ ಸೂಚನೆ ಇಲ್ಲಿದೆ. ಮುಂದೆ ಬಸವಣ್ಣನ ವಿರುದ್ಧದ ಸಂಚು, ಅದಕ್ಕಾಗಿ ಅನುಸರಿಸಬೇಕಾದ ತಂತ್ರಗಳಿವೆ. ಈ ಕೆಲವು ದೃಶ್ಯಗಳಲ್ಲಿ ತೂರಿಬರುವ ಕೆಲವು ಅಸಾಂದರ್ಭಿಕ ಅಂಶಗಳಿವೆ. ಏಳನೇ ದೃಶ್ಯದ 'ಕೊಟ್ಟ ಕುದುರೆಯನೇರಲರಿಯದೆ' ವಚನದ ಬಳಕೆ ಅದಕ್ಕೆ ನಿದರ್ಶನ. ಅಂತೆಯೇ ಕಾಯಕ, ಶರಣ, ಶರಣರ ಕ್ರಾಂತಿ ಮೊದಲಾದುವನ್ನು ಸೂಚಿಸುವ ನಿರ್ವಚಿಸುವ ಮಾತುಗಳು ವಾಚ್ಯ; ಅತೀ ಆತ್ಮವಿಶ್ವಾಸದಿಂದ ಕೂಡಿವೆ ಎನಿಸುತ್ತದೆ. ಹನ್ನೆರಡನೇ ದೃಶ್ಯ ಅನುಭವ ಮಂಟಪದ ಘಟನೆಗಳನ್ನು ಒಳಗೊಂಡ ಅಪರೂಪದ ದೃಶ್ಯ. ಆದರೆ ಅಲ್ಲಿ ನೆರೆದವರು 'ಅದ್ಭುತ! ಅದ್ಭುತ!' ಎಂದು ಪ್ರತಿಕ್ರಿಯಿಸುವುದು ತೀರಾ ಅನೌಚಿತ್ಯ, ಬಾಲಿಶ ಎನಿಸುತ್ತದೆ. ಬಹುಶಃ ನಾಟಕ ಒಳಗೊಳ್ಳಬಹುದಾಗಿದ್ದ ಬೌದ್ಧಿಕ ಸಂಘರ್ಷದ ನಿರ್ವಚನೆಯ ಈ ಹಂತ ಮತ್ತು ಅವಕಾಶವನ್ನು ನಾಟಕಕಾರ ಸಮರ್ಥವಾಗಿ ನಿರ್ವಹಿಸಿಲ್ಲ, ಬದಲು ತೇಲಿಸಿದ್ದಾರೆ ಎಂಬಂತೆ ಗೋಚರಿಸುತ್ತದೆ. ಆದರೂ 'ತಾಯಿ, ಜಾತಿ ಮನುಷ್ಯ ನಿರ್ಮಿತ ಕೊಳೆ' ಎಂಬ ಪ್ರಭುದೇವನ ಮಾತು ಗಮನಾರ್ಹ; ಸಕಾಲಿಕ.

ಹದಿಮೂರನೇ ದೃಶ್ಯ ವಚನಯುಗದ ಜನ-ಸಮಾಜದ ಗುಣ-ಸ್ವಭಾವಗಳನ್ನು ನಿರ್ವಚಿಸುವಲ್ಲಿ ಸಫಲವಾಗಿದೆ. ಆದರೆ ಇಲ್ಲಿನ ಸಂಭಾಷಣೆಗಳು ಕೊಂಚ ಅಸಹಜವೆನಿಸುವಂತಿವೆ. ಪಾತ್ರ-ಸನ್ನಿವೇಶ-ಸಂದರ್ಭ-ಮಾತಿನ ಬಳಕೆಗಳ ನೆಲೆಯಲ್ಲಿ ಈ ಅಸಹಜತೆ ಗೋಚರಿಸುತ್ತದೆ. ನಿದರ್ಶನಕ್ಕೆ: ''ಹುಲಿಗೆ ಹೆದರಿದ ಹುಲ್ಲೆಯಂತೆ ಹೊರಗೇಕೆ ನಿಂತಿರುವೆ ?'' ''ಮತ್ಸರಕ್ಕಂಜಿ ಮನ ಒಪ್ಪುವ ಕಾರ್ಯವನ್ನು ಕೈಬಿಡಬಾರದು.''

ದೃಶ್ಯ ಹದಿನಾಲ್ಕರಲ್ಲಿ ನಾಟಕದ ಕ್ರಿಯಾ ಘರ್ಷಣೆ ಸಂಭವಿಸುತ್ತದೆ. ಈ ಸಂದರ್ಭದ ಬಸವಣ್ಣನ ಖಚಿತ ನಿಲುವು, ಬಿಜ್ಜಳನ ಆಗ್ರಹ, ಪಂಡಿತನ ಕೊಂಕು ಸಮರ್ಪಕವಾಗಿ ಮೂಡಿಬಂದಿವೆ. ಇಲ್ಲಿನ ಕೆಲವು ಮಾತುಗಳು ಗಮನಾರ್ಹ; ಇವು ನಾಟಕದ ಹೊರತಾಗಿಯೂ ಮುಖ್ಯವೆನಿಸುವ ಸಾಂಸ್ಕೃತಿಕ ಆಯಾಮವನ್ನು ಒಳಗೊಂಡಿವೆ. ಹಾಗೆಯೇ ಈ ಸನ್ನಿವೇಶದಲ್ಲಿ ಉದ್ಭವವಾಗುವ ಕೆಲವು ಪ್ರಶ್ನೆಗಳಿಗೆ ಈವರೆವಿಗೂ ಉತ್ತರ ಕಂಡುಕೊಳ್ಳಲು ಸಾಧ್ಯವಾಗಿಲ್ಲವೆಂದು ಈ ಮಾತುಗಳಿಗಿರುವ ಭಿನ್ನ ನೆಲೆಗಳಿಂದ ಗಮನಿಸಬಹುದು. 'ಮನುಷ್ಯರಿಗೆ ಮದುವೆ ಎಂದು ಕೇಳಿರುವೆನೇ ಹೊರತು ಜಾತಿಗಲ್ಲ', 'ವೇದಶಾಸ್ತ್ರ ಬಲ್ಲವರು ಹಿರಿಯರಲ್ಲ', 'ಮದುವೆ ವೈಯಕ್ತಿಕ ವಿಚಾರ', 'ಭಯವನ್ನು ಹುಟ್ಟಿಸುವವರು ದೇವರೆ ?'

ಇದೇ ದೃಶ್ಯದಲ್ಲಿ 'ವೈದಿಕ ಪರಂಪರೆಯವರು ಈ ಮದುವೆಯನ್ನು ಮನ್ನಿಸುವರೆ ?' ಎಂದು ಕೇಳುವ ನಾಗಲಾಂಬಿಕೆಯ ಮಾತು ಅಂದಿನ ಸಮಾಜದಲ್ಲಿ ವೈದಿಕರ ಅಭಿಪ್ರಾಯ ಮುಖ್ಯವಾಗಿತ್ತು ಎಂಬುದನ್ನು ಬಲವಂತವಾಗಿ (ಉದ್ದೇಶಪೂರ್ವಕವಾಗಿ?) ಎತ್ತಿ ತೋರಿಸಿದಂತಾಗಿದೆ. ನಾಟಕಕಾರರು ಈ ಮಾತಿನ ಅಗತ್ಯವನ್ನು ಮತ್ತೊಮ್ಮೆ ಗಮನಿಸಬೇಕಿತ್ತು ಎಂದೆನಿಸುತ್ತದೆ.

ಹದಿನೈದನೇ ದೃಶ್ಯದಲ್ಲಿ 'ಜಾತಿ ವಿನಾಶವೇ ಶರಣರ ಧ್ಯೇಯ' ಎಂಬಂಥ ಕೆಲವು ಮುಖ್ಯ ಮಾತುಗಳಿವೆ. ಆಗ 'ಈ ಮಾತುಗಳಿಗೆ ಅನುರಣನ ಶಕ್ತಿ ಇದ್ದಿದ್ದರೆ' ಎಂಬ ಭಾವ ಓದುಗನಿಗೆ ಬರುವುದು ಸಹಜ. ಇಂದಿನ ಶರಣರು, ಅವರ ಆಚರಣೆಗಳು, ಭಕ್ತಿ ಇವನ್ನೆಲ್ಲ ಗಮನಿಸಿದಾಗಲಂತೂ ಮೇಲಿನ ಮಾತು ನಗು, ವಿಷಾದ ಎರಡನ್ನೂ ಉಂಟುಮಾಡುತ್ತದೆ. ಇದೇ ದೃಶ್ಯದಲ್ಲಿ ಸನ್ನಿವೇಶದ ಗಾಂಭೀರ್ಯ ಕೆಡಿಸುವಂತೆ ಪಂಡಿತನ ಮಾತುಗಳಿವೆ. ಬಹುಶಃ ಈ ಪಂಡಿತರು ಅಂದಿನಿಂದಲೂ ಇದನ್ನೇ ಮಾಡಿರಬಹುದು ! ಇಲ್ಲಿ ಬರುವ ಬಸವಣ್ಣನ ಮಾತೊಂದು ಅರ್ಥಪೂರ್ಣವಾಗಿದೆ : ''ಪ್ರಭು, ವೈದಿಕರ ಮಾತುಗಳಲ್ಲಿ ದೇವರನ್ನು ಹುಡುಕುವ ವ್ಯರ್ಥ ಪ್ರಯತ್ನ ಬೇಡ. ಮನುಷ್ಯಶಕ್ತಿಯಲ್ಲಿ ವಿಶ್ವಾಸವಿರಲಿ.''

ಹದಿನೇಳನೇ ದೃಶ್ಯ ತೀರಾ ಚಿಕ್ಕದು. ಇಲ್ಲಿ ಬಿಜ್ಜಳನ ಕೆಲವು ಮಾತುಗಳು ಅಸಂಗತ ಎನಿಸುವಂತಿವೆ. ಬಿಜ್ಜಳ 'ರಾಜ್ಯದ ಸ್ಥಿತಿ ಹೇಗಿದೆ ?' ಎಂದು ಕೇಳಿದಾಗ ಪಂಡಿತ ನೀಡುವ ಉತ್ತರ ಹೀಗಿದೆ : ''ಎಲ್ಲ ದೇವಾಲಯಗಳಲ್ಲಿ ದೀಪಗಳು ಬೆಳಗುತ್ತಿವೆ. ಜೀರ್ಣೋದ್ಧಾರ ಕಾರ್ಯ ನಡೆಯುತ್ತಿದೆ. ವೈದಿಕರು ಸಂತೃಪ್ತಿಯಿಂದಿದ್ದಾರೆ.''

ಇವರ ಸಂತೃಪ್ತಿಗೆ ಈ ದೇಶ ಮತ್ತು ಜನ ಅಂದಿನಿಂದಲೂ ತೆತ್ತಿರುವ ಬೆಲೆ ಎಷ್ಟೋ ?

ಹೀಗೆ ಒಟ್ಟು ಹತ್ತೊಂಬತ್ತು ದೃಶ್ಯಗಳನ್ನು ಗಮನಿಸಿದಾಗ, ಒಟ್ಟಾರೆಯಾಗಿ ಈ ಕೃತಿ 'ಒಂದು ಯೋಜಿತ ಹಾಗೂ ಸಂಯೋಜಿತ ಕೃತಿ' ಎನಿಸುತ್ತದೆ. ಅದೇ ಕಾರಣಕ್ಕಿರಬೇಕು ಸೃಜನಶೀಲತೆಯ ದಟ್ಟ ಛಾಯೆ ಇಲ್ಲಿಲ್ಲ. ಆದರೆ ವಸ್ತುವಿನ ಸಮರ್ಪಕ ಹಂಚಿಕೆ, ದೃಶ್ಯ ನಿರ್ಮಾಣ, ಪಾತ್ರ ಪೋಷಣೆಗಳಲ್ಲಿ ನಾಟಕಕಾರರ ಪ್ರತಿಭೆ ಗೋಚರಿಸುತ್ತದೆ. ಬಸವಣ್ಣ ಮತ್ತು ಬಿಜ್ಜಳನನ್ನು ಬಿಟ್ಟರೆ ಉಳಿದವೆಲ್ಲ ಪೋಷಕ ಪಾತ್ರಗಳೇ ಆಗಿವೆ. ಬಿಜ್ಜಳ ಕೊಂಚ ಅಧೀರನಂತೆ, ಅಸ್ಪಷ್ಟನಂತೆ, ಮಂದಮತಿಯಂತೆ ಭಾಸವಾಗುತ್ತಾನೆ. ರಾಜರೇ ಹೀಗೇನೋ ! ಅಥವಾ ಬಸವಣ್ಣನಂಥ ನೈತಿಕಶಕ್ತಿಯ ಎದುರು ಪ್ರಭುತ್ವ ಹೀಗೆ ಮಂಕಾಗಬಹುದೇ ?

ನಾಟಕದ ವಸ್ತುವಿನಲ್ಲೇ ಇರುವ ಘರ್ಷಣೆ ಕೃತಿಯಲ್ಲಿ ಅಷ್ಟಾಗಿ ಸಂಘಟಿತವಾಗಿ, ಪರಿಣಾಮಕಾರಿಯಾಗಿ ಮೂಡಿಬಂದಂತೆ ಕಾಣದು. ನಾಟಕದ ಅಂತ್ಯ ಸೂಕ್ತವಾಗಿದೆ. ಕೃತಿಯಲ್ಲಿ 'ರಂಗದ ಮೇಲೆ ಹಿಂಸೆ ಸಂಭವಿಸದಂತೆ' ನಿರ್ವಹಿಸಿರುವುದು ನಾಟಕಕಾರರ ರಂಗಪ್ರಜ್ಞೆ ಹಾಗೂ ಅಭಿರುಚಿಯನ್ನು ಬಿಂಬಿಸಿದೆ.

ಹಿನ್ನುಡಿ ಬೆನ್ನುಡಿಗಳಿಂದ, ವಿದ್ವಾಂಸರ ಅಭಿಪ್ರಾಯಗಳಿಂದ ಕೃತಿಯೊಂದು ಗಮನ ಸೆಳೆಯಲಾರದು. ಸಾಹಿತ್ಯಕ ಸಂವೇದನೆ, ಸಾಂಸ್ಕೃತಿಕ ತಳಮಳ, ಸಾಂದರ್ಭಿಕ ತಲ್ಲಣ, ಬಿಡುಗಣ್ಣ ಗ್ರಹಿಕೆ, ಪಾರದರ್ಶಕ ಭಾಷೆಗಳು ಮಹತ್ವದ ಕೃತಿಯನ್ನು ರೂಪಿಸುತ್ತವೆ. ಈ ಅಂಶಗಳನ್ನು ನಾಟಕಕಾರರು ಗಮನಿಸಿದಲ್ಲಿ ಮುಂದೆ ಇವರಿಂದ ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದು.

ಒಟ್ಟಾರೆ 'ಜಂಗಮದೆಡೆಗೆ' ನಾಟಕ ಮಹತ್ವದ ಆಶಯಗಳನ್ನು ಹೊತ್ತ, ಮಹತ್ವದ ಕನಸುಗಳನ್ನು ಬಿತ್ತುವ ವಸ್ತುವನ್ನು ಒಳಗೊಂಡಿದೆ. ಸ್ಥಳೀಯ ಭಾಷೆಯ ಬಳಕೆ ನಾಟಕದ ಯಶಸ್ಸಿಗೆ ಕಾರಣವಾಗಿದೆ; ಆದರೆ ಧ್ವನಿಶಕ್ತಿಯ ಸಮರ್ಪಕ ನೇಯ್ಗೆ ದಕ್ಕಿದ್ದರೆ ನಾಟಕಕ್ಕೆ ಹೊಸ ಆಯಾಮ ದೊರೆಯುತ್ತಿತ್ತು. ಸೃಜನಶೀಲ ಚಿಂತನೆಗಳ ಮೊತ್ತ ಈ ಕೃತಿ. ಆದರೆ ಆ ಚಿಂತನೆಗಳು ಸಾಹಿತ್ಯಕ ಪರಿಕರಗಳಾಗಿವೆಯೇ ಎಂಬುದೇ ಇಲ್ಲಿ ಕಾಡುವ ಮುಖ್ಯ ಪ್ರಶ್ನೆಯಾಗಿದೆ. ಹಾಗಾಗಿ ಈ ನಾಟಕ ಒಂದು ಯಶಸ್ವೀ 'ರಂಗಕೃತಿ' ಎನ್ನಬಹುದು.

*(ನಾಟಕ ಕೃತಿಕಾರರು : ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮೀಜಿ ; ಪ್ರಕಾಶಕರು: ಶ್ರೀ ಶಿವಕುಮಾರ ಕಲಾ ಸಂಘ, ಸಾಣೆಹಳ್ಳಿ.)*

**ಡಾ|| ಎಸ್. ಪ್ರಸಾದಸ್ವಾಮಿ**
ಡಿಎಚ್, ೪/ಎ, ನ್ಯೂ ಕಾಲನಿ, ಭದ್ರಾವತಿ - ೧

## ಜಿ. ದ್ವಾರಕನಾಥ
## ಕನ್ನಡಕ್ಕೆ : ಎಸ್. ಸುರೇಂದ್ರ


**ಮ**ಹಾ ವೈದ್ಯನಾಥ ಶಿವನ್ ಅವರು ರಚಿಸಿರುವ **ಮೇಳ ರಾಗಮಾಲಿಕಾ** ಎಲ್ಲ ಸಂಗೀತಪ್ರಿಯರು ಮತ್ತು ಸಂಗೀತ ವಿದ್ಯಾರ್ಥಿಗಳು ಓದಲೇಬೇಕಾದ ಮತ್ತು ಅತ್ಯಂತ ಅಮೂಲ್ಯವಾದ ಹೊತ್ತಿಗೆಯಾಗಿದೆ. **೭೨ ಮೇಳ ರಾಗಮಾಲಿಕಾ** ಸುಪ್ರಸಿದ್ಧ ಗ್ರಂಥವಾಗಿದೆಯಾದರೂ ಅದರ ಕರ್ತೃ ಮಹಾ ವೈದ್ಯನಾಥ ಐಯರ್ (ಶಿವನ್) ಅಥವಾ ಮಹಾ ವೈದ್ಯನಾಥ ಶಿವನ್ ಅವರ ನಿಷ್ಠುರ ಹಾಗೂ ಕಷ್ಟ ಕಾರ್ಪಣ್ಯಗಳಿಂದ ಕೂಡಿದ ಬದುಕಿನ ಬಗೆಗೆ ಬಹಳಷ್ಟು ಜನರಿಗೆ ಅಷ್ಟಾಗಿ ತಿಳಿದಿರಲಾರದು. ಈ ದೃಷ್ಟಿಯಲ್ಲಿ ಪ್ರೊ॥ ಎಸ್. ಕೆ. ರಾಮಚಂದ್ರ ರಾವ್ ಅವರ ಮುನ್ನುಡಿಯು ಆ ವಿವರಗಳನ್ನು ಹೊಂದಿದ್ದು ಹೊತ್ತಿಗೆಯ ಮೆರುಗನ್ನು ಹೆಚ್ಚಿಸಿದೆ. ತ್ಯಾಗರಾಜರ ನಂತರದ ಕಾಲಾವಧಿಯಲ್ಲಿನ ಸಂಗೀತಗಾರರು ಮತ್ತು ರಚನಕಾರರಲ್ಲಿ ಶಿವನ್ ಅವರಿಗೆ ವಿಶೇಷ ಸ್ಥಾನವಿದೆ ಎಂಬ ಅಂಶದತ್ತ ಪ್ರೊ॥ ಎಸ್. ಕೆ. ಆರ್. ಓದುಗರ ಗಮನ ಸೆಳೆಯುತ್ತಾರೆ. ಶಿವನ್ ಅವರ ಬದುಕಿನಲ್ಲಿ ಜರುಗಿದ ಎರಡು ಪ್ರಮುಖ ಘಟನೆಗಳನ್ನು ಇಲ್ಲಿ ವಿಶೇಷವಾಗಿ ಪ್ರಸ್ತಾಪಿಸುವ ಅಗತ್ಯವಿದೆ. ಮೊದಲನೆಯದು, ಅಂದಿನ ಮದರಾಸಿನಲ್ಲಿ ಆಯೋಜಿಸಿದ್ದ ಕಛೇರಿಯೊಂದರಲ್ಲಿ ಅವರು ಹಾಡುವುದಿತ್ತಂತೆ. ಆ ಕಾಲದ ಸಂಪ್ರದಾಯಕ್ಕೆ ವಿರುದ್ಧವಾಗಿ ಶ್ರೋತೃಗಳಿಗೆ ಟಿಕಿಟ್‌ಗಳನ್ನು ಮಾರಲಾಗಿತ್ತು. ಹಲವಾರು ಆಸಕ್ತರು ಟಿಕಿಟ್ ದೊರಕದೆ ಪೆಚ್ಚುಮೋರೆ ಹಾಕಿಕೊಂಡು ಸಭಾಂಗಣದ ಆವರಣದಿಂದ ಹೊರಗೆ ಬರುತ್ತಿದ್ದರಂತೆ. ಆ ದೃಶ್ಯವನ್ನು ನೋಡಿದ ಶಿವನ್ ಕೆಂಡಾಮಂಡಲವಾಗಿ ಕೂಡಲೇ ಹಾಡಲು ನಿರಾಕರಿಸಿ ಅಂದಿನ ಕಛೇರಿಯನ್ನು ರದ್ದುಗೊಳಿಸಿ ಆ ಸಂಘಟನೆಯ ಕಾರ್ಯದರ್ಶಿಗೆ ಆ ಕ್ಷಣದಲ್ಲೇ ಶ್ರೋತೃಗಳ ಟಿಕಿಟ್ ಹಣವನ್ನು ಹಿಂದುರಿಗಿಸಲು ಹೇಳುತ್ತಾರೆ. ಮರುದಿನವೇ ಪಾರ್ಥಸಾರಥಿ ಸ್ವಾಮಿ ದೇವಸ್ಥಾನದಲ್ಲಿ ತಾವೇ ಹಾಡಲಿದ್ದ ಕಛೇರಿಗೆ ಅವರೆಲ್ಲರನ್ನೂ ಆಹ್ವಾನಿಸುತ್ತಾರೆ. ಒಂದಲ್ಲ, ಎರಡಲ್ಲ, ಮೂರು ದಿನಗಳ ಕಾಲ ಜರುಗಿದ ಆ ಕಛೇರಿಯಲ್ಲಿ ಶಿವನ್ ತಮ್ಮ ಗಾನಸುಧೆಯಿಂದ ಶ್ರೋತೃಗಳನ್ನು ತಣಿಸುತ್ತಾರೆ. ಸಂಗೀತವು ಅತ್ಯಂತ ಶ್ರೇಷ್ಠವಾದ ಕಲೆ ; ಅದು ಎಂದೆಂದಿಗೂ ಮಾರಾಟದ ಸರಕಾಗಬಾರದು ಎಂಬ ಉದಾತ್ತ ಮೌಲ್ಯವನ್ನು ಆ ಮೂಲಕ ಮೆರೆಯುತ್ತಾರೆ ಈ ಮಹಾನ್ ವ್ಯಕ್ತಿ.

ಇನ್ನೊಂದು ಘಟನೆಯೂ ಸ್ವಾರಸ್ಯಕರವಾಗಿದೆ. ಬೈರಾಗಿಯೊಬ್ಬ ಶಿವನ್ ಅವರನ್ನು ಭೇಟಿಯಾಗಲಿಚ್ಛಿಸುತ್ತಾನೆ. ಅವರೇ ಆ ನಿರ್ಗತಿಕ ಬೈರಾಗಿಯಿದ್ದ ಸ್ಥಳಕ್ಕೆ ಭೇಟಿಯಿತ್ತು ಯಾವ ಕೃತಿ ಅಥವಾ ಯಾವ ರಾಗವನ್ನು ಕೇಳ ಬಯಸುತ್ತೀಯೇ ಎಂದು ಅವನಲ್ಲಿ ವಿನಂತಿಸಿಕೊಳ್ಳುತ್ತಾರೆ. ಬೈರಾಗಿ ''ಸರಳೆ ವರಸೆಯನ್ನು ಹಾಡಿ, ನನಗೆ ತಿಳಿದಿರುವುದೇ ಅಷ್ಟು'' ಎನ್ನುತ್ತಾನೆ. ಶಿವನ್ ಹಿಂದೆಮುಂದೆ ನೋಡದೆ ಮಂದ್ರದಿಂದ ತಾರಸ್ಥಾಯಿಯವರೆಗೂ ನಿರರ್ಗಳವಾಗಿ ಸರಳೆ ವರಸೆಗಳನ್ನು ಹಾಡಿ ಅವುಗಳ ಭವ್ಯತೆಯನ್ನು ಮೆರೆಯುತ್ತಾರೆ. ಸರಳೆ ವರಸೆಗಳು, ಜಂಟಿ ವರಸೆಗಳು, ಅಲಂಕಾರಗಳು ಮತ್ತು ಗೀತೆಗಳನ್ನು ಹಾಡುವುದು ತಮ್ಮ ಘನತೆಗೆ ತಕ್ಕುದಲ್ಲ ಎಂದೆಲ್ಲಾ ಭಾವಿಸುವ ಇಂದಿನ ಕಾಲದ ಸಂಗೀತಗಾರರಿಗೆ ಇಂತಹ ಅಪೂರ್ವ ವ್ಯಕ್ತಿಗಳ ಬದುಕಿನಲ್ಲಾದ ಘಟನೆಗಳಿಂದ ಕಲಿಯುವುದು ಬಹಳಷ್ಟಿದೆ.

ಈ ೭೨ ಮೇಳಕರ್ತ ಪಠ್ಯಸೂಚಿಯು ಸಪ್ತಸ್ವರಗಳಲ್ಲಿನ ೨೨ ಶ್ರುತಿಗಳ ಪರಿವರ್ತನೆ ಹಾಗೂ ಸಂಯೋಜನೆಯೇ ಆಗಿದೆ. ಈ ಮೂಲಕ ಆರೋಹಣ ಮತ್ತು ಅವರೋಹಣಗಳನ್ನು ಆಧರಿಸಿ ಎಲ್ಲ ಸಪ್ತಸ್ವರಗಳು ರೂಪುಗೊಳ್ಳುತ್ತವೆ. ಇದು ವೆಂಕಟಮಖಿಯ ಮೂಲ ಕಲ್ಪನೆಯೇನಲ್ಲ. ವಿದ್ಯಾರಣ್ಯರೂ ಈ ಪಠ್ಯಸೂಚಿಯ ಬಗೆಗೆ ಚಿಂತನೆ ನಡೆಸಿದ್ದರೆಂದು ಹೇಳಲಾಗುತ್ತದೆ. ಏಕೋ ಏನೋ ಅವರು ಆ ಘಟ್ಟದಿಂದಾಚೆಗೆ ಮುಂದುವರೆಯಲಿಲ್ಲ. ವೆಂಕಟಮಖಿ ಈ ಪಠ್ಯಸೂಚಿಗೆ ಒಂದು ನಿರ್ದಿಷ್ಟ ರೂಪ ನೀಡಿದರು. ಆದರೆ, ಸುಮಾರು ೪೦ ಮೇಳ ರಾಗಗಳನ್ನು, ಅವು ಬಳಸಲು ಯೋಗ್ಯವಲ್ಲವೆಂದು ಪರಿಗಣಿಸಿ ಮಿಕ್ಕ ರಾಗಗಳತ್ತ ಹೆಚ್ಚು ಗಮನ ಹರಿಸಿದರು. ಅದೇ ಸಂದರ್ಭದಲ್ಲಿ ಅವರು ಕೆಲವು ರಾಗಗಳಿಗೆ ನಿರ್ದಿಷ್ಟ ಹೆಸರುಗಳನ್ನು ನೀಡಲಿಲ್ಲ. ಇದರಿಂದಾಗಿ ಪಠ್ಯಸೂಚಿಯು ಅಪೂರ್ಣವಾಗಿಯೇ ಉಳಿದುಬಿಟ್ಟಿತು. ಕನಕಾಂಬರಿ, ರತ್ನಾಂಬರಿ ಮತ್ತಿತರ ರಾಗದ ಹೆಸರುಗಳು ಅವರ ಮೊಮ್ಮಗ ಮುದ್ದು ವೆಂಕಟಮಖಿಯ ಕೊಡುಗೆಯಾಗಿವೆ. ಆದರೆ ಮುದ್ದು ವೆಂಕಟಮಖಿ ಅನನುಕೂಲಕರವಾದ ಸ್ವರಗಳನ್ನು ತೆಗೆದುಹಾಕಿದರು. ಈ ಹಿನ್ನೆಲೆಯಲ್ಲಿ ಮೇಳಗಳನ್ನು ಅಸಂಪೂರ್ಣ ಮೇಳಗಳೆಂದೇ ಗುರುತಿಸಲಾಗುತ್ತದೆ. ಈತನ ಗೌರವಾರ್ಥವಾಗಿ ಮುತ್ತುಸ್ವಾಮಿ ದೀಕ್ಷಿತರು ಎಲ್ಲ ೭೨ ಅಸಂಪೂರ್ಣ ರಾಗಗಳಲ್ಲಿ ಸಣ್ಣ ಪುಟ್ಟ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅನೇಕವು ಜನಪ್ರಿಯವಾಗಲಿಲ್ಲ. ಮರಾಠ ರಾಜಮನೆತನದ ಆಸ್ಥಾನ ವಿದ್ವಾಂಸರಾಗಿದ್ದ ಗೋವಿಂದಾಚಾರ್ಯ ಎಂಬುವರು ಕನಕಾಂಗಿ, ರತ್ನಾಂಗಿಯಂತಹ ರಾಗದ ಹೆಸರುಗಳನ್ನು ನೀಡಿ ಸಂಪೂರ್ಣ ರಾಗಗಳನ್ನು ಮುಂದುವರೆಸಿಕೊಂಡುಹೋಗುವ ಪರಂಪರೆಯನ್ನು ಹುಟ್ಟುಹಾಕಿದ ಖ್ಯಾತಿಗೆ ಪಾತ್ರರಾಗಿದ್ದಾರೆ.

ಮರಾಠಿ ಕವಿ ಲಾವಣಿ ವೆಂಕಟರಾವ್ ಅವರು ರಾಜಮನೆತನದ ಸದಸ್ಯರೊಬ್ಬರ ಮನವಿಗೆ ಓಗೊಟ್ಟು ಸಂಯೋಜಿಸಿದ ೭೨ ಸಂಪೂರ್ಣ ಮೇಳಗಳಿಗೆ, ಒಂದು ರಾಗಮಾಲಿಕೆಗೆ ಸಂಗೀತವನ್ನು ರಚಿಸಿಕೊಡಲು ಶಿವನ್ ಅವರನ್ನು ವಿನಂತಿಸಿಕೊಂಡರು. ಆ ರಾಗಮಾಲಿಕಾ ನರಸ್ತುತಿ ಕವನವಾಗಿದ್ದರಿಂದ ಆ ಜವಾಬ್ದಾರಿಯನ್ನು ತೆಗೆದುಕೊಳ್ಳಲು ಅಷ್ಟಾಗಿ ಉತ್ಸಾಹ ತೋರದಿದ್ದರೂ ರಾಗ ಸಂಯೋಜನೆಯನ್ನು ಶಿವನ್ ಪೂರ್ಣಗೊಳಿಸಿದರು. ಆದರೆ, ಸ್ವಲ್ಪ ಸಮಯದ ನಂತರ ಸಂಸ್ಕೃತದಲ್ಲಿಯೂ ಅದೇ ರಾಗಮಾಲಿಕೆಯನ್ನು ರಚಿಸಿದರು. ಈ ರಾಗಮಾಲಿಕೆ ಈಗ ಹೆಚ್ಚು ಜನಪ್ರಿಯವಾಗಿದೆ.

ನೂರಾರು ಜನ್ಯರಾಗಗಳ ಅನುಕ್ರಮಣಿಕೆಯನ್ನು ಬಹಳಷ್ಟು ಸರಳೀಕರಣಗೊಳಿಸಿದ್ದರೂ ಮೇಳರಾಗ ಯೋಜನೆಯಲ್ಲಿ ಕೆಲವು ಕುಂದುಕೊರತೆಗಳು ಉಳಿದುಕೊಂಡಿವೆ. ಅವುಗಳಲ್ಲಿ ಎರಡನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಮಾತಂಗ, ಶಾರ್ಙದೇವ ಮತ್ತಿತರರು ಬೆಳಕಿಗೆ ತಂದು ವೃದ್ಧಿಗೊಳಿಸಿದ ನಮ್ಮ ಸಂಗೀತ ವ್ಯವಸ್ಥೆಯನ್ನೇ ಮೇಳರಾಗ ಯೋಜನೆ ಕಡೆಗಣಿಸಿಬಿಟ್ಟಿತು, ಇಲ್ಲವೇ ಅದು ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುವುದಕ್ಕೆ ಕಾರಣವಾಯಿತು. ಪುರಂದರದಾಸರು, ತ್ಯಾಗರಾಜರಂತಹ ಅನೇಕ ವಾಗ್ಗೇಯಕಾರರು ಜನರು ಮೋಕ್ಷ ಅಥವಾ ದೈವತ್ವವನ್ನು ಪಡೆಯಲು ಈ ಜೀವಂತ ಸಂಗೀತ ಪ್ರಕಾರವನ್ನು ಬಳಸಿಕೊಂಡದ್ದು ಇತಿಹಾಸ. ವೆಂಕಟಮಖಿ ಈ ಎಲ್ಲ ತತ್ವಗಳ ಪ್ರಾಮುಖ್ಯತೆಯನ್ನೇ ಅಲ್ಲಗಳೆದರು. ಹಲವಾರು ಶತಮಾನಗಳುದ್ದಕ್ಕೂ ಸಂಗೀತಗಾರರು ಈ ಮೂಲ ಸಂಗತಿಗಳನ್ನು ಮರೆತುಹೋಗಿರುವಂತಿದೆ

# ಮಹಾ ವೈದ್ಯನಾಥ ಶಿವನ್ ಅವರ
# ಮೇಳ ರಾಗಮಾಲಿಕಾ

ಸಂಪಾದಕ : ಆನಂದರಾಮ ಉಡುಪ

ಪುಟ : ೧೨೦ ಬೆಲೆ : ರೂ. ೨೦೦

ಪ್ರಕಾಶಕರು : ಶ್ರುತಿರಂಜನಿ, ಬೆಂಗಳೂರು - ೫೬೦ ೦೯೪



ಮೂಲ ಸ್ವರವನ್ನು ಸ್ಥಳಾಂತರಿಸುವ ಶ್ರುತಿ ಭೇದದ ತಪ್ಪು ಪರಿಕಲ್ಪನೆ ಮತ್ತೊಂದು ದುರಂತವೇ ಆಗಿದೆ. ಈ ತಂತ್ರದಲ್ಲಿ ಮೂಲ ರಾಗದ ಸ್ವರ ಸ್ಥಾನವನ್ನೇ ಬದಲಾಯಿಸಲಾಗಿದೆ. ಎಂದರೆ, ಆರೋಹಣವು ಋಷಭದಿಂದ ಆರಂಭಗೊಂಡರೆ ಮತ್ತು ಅದಕ್ಕೆ ಅನುಗುಣವಾದ ಸ್ವರಗಳನ್ನು ಷಡ್ಜ, ಋಷಭ ಇತ್ಯಾದಿ ಹೆಸರುಗಳಿಂದ ಕರೆದಾಗ ಹಾಡುಗಾರಿಕೆಯಲ್ಲಿ ಹೊಚ್ಚ ಹೊಸ ಸ್ವರಶ್ರೇಣಿಯೊಂದು ಸೃಷ್ಟಿಯಾಗಿ ತನ್ಮೂಲಕ ಹೊಸ ರಾಗಗಳು ರೂಪುಗೊಳ್ಳುತ್ತವೆ. ಆದರೆ ವೆಂಕಟಮಖಿಯವರ ಜೀವಿತಕಾಲದ ನಂತರ ಇಂತಹ ಪ್ರಯತ್ನಗಳನ್ನು ಕೈಬಿಡಲಾಯಿತು. ಉದಾಹರಣೆಗೆ, ಇಂದಿನ ದಿನಗಳಲ್ಲಿ ಮೂಲಸ್ವರವನ್ನು ಕಲ್ಯಾಣಿ ರಾಗದ ಋಷಭಕ್ಕೋ, ಗಾಂಧಾರಕ್ಕೋ ವರ್ಗಾಯಿಸಿ ಆ ಮೂಲಕ ತಮಗೆ ಕಲ್ಯಾಣಿ ರಾಗದಿಂದ ತೋಡಿಯೋ ಹರಿಕಾಂಬೋಧಿಯೋ ಅಥವಾ ಇನ್ನಾವುದೋ ರಾಗವು ಲಭಿಸಿಬಿಟ್ಟಿದೆ ಎಂದು ಸಮರ್ಥಿಸಿಕೊಳ್ಳುವವರೂ ಇಲ್ಲದಿಲ್ಲ. ಇದಕ್ಕಿಂತಲೂ ಅಸಂಬದ್ಧವಾದ ಸಂಗತಿ ಬೇರಾವುದೂ ಇಲ್ಲ ಎನ್ನಲೇಬೇಕು. ಹಾಗೆ ಸಮರ್ಥಿಸಿಕೊಳ್ಳುವವರೆಲ್ಲರೂ ಹಾಡುವ ಸ್ವರಶ್ರೇಣಿಗಳು ನಂತರದ ಕಾಲಾವಧಿಯಲ್ಲಿ ಪರಿಪೂರ್ಣ ರಾಗಗಳಾಗಿ ರೂಪುಗೊಂಡವು ಎಂಬ ಅಂಶ ಗಮನಾರ್ಹವಾದುದು. ಕಲ್ಯಾಣಿಯ ಸ್ವರಗಳನ್ನು ಬಳಸಿ ಖರಹರಪ್ರಿಯ ರಾಗವನ್ನು ಹಾಡುವುದು ಹೇಗೆ ತಾನೆ ಸಾಧ್ಯ ? ಹಾಗೇನಾದರೂ ಹಾಡುವುದು ಸಾಧ್ಯವಾದರೆ ಅದೊಂದು ಕೌತುಕವೇ ಸರಿ ! ಈ ದಿಶೆಯಲ್ಲಿ ಹಿರಿಯ ಸಂಗೀತ ವಿದ್ವಾಂಸರೊಬ್ಬರು ಇಂತಹುದೇ ಪ್ರಯತ್ನದಲ್ಲಿ ನಿರತರಾಗಿ ತಮ್ಮ 'ರಾಗಸುಧೆ'ಯನ್ನು ಹರಿಸುತ್ತಿದ್ದುದನ್ನು ಆಲಿಸಿದ ವಿನೋದಪ್ರಿಯನೊಬ್ಬ ಆ ವಿದ್ವಾಂಸರು ''ಬಹುಶಃ ಮಸಾಲವಡೆ ಹಿಟ್ಟಿನಿಂದ ಬಾದಾಮ್‌ಹಲ್ವ ತಯಾರಿಸಲು ಪ್ರಯತ್ನಿಸುತ್ತಿರಬೇಕು'' ಎಂದು ಚಟಾಕಿ ಹಾರಿಸಿದನಂತೆ.

ಈ ಬಗೆಯ ಕುಂದುಕೊರತೆಗಳು ಮಹಾ ವೈದ್ಯನಾಥ ಶಿವನ್ ಅವರ ರಾಗಮಾಲಿಕಾದಲ್ಲಿಲ್ಲ. ಈ ಅಂಶವನ್ನು ದೃಢಪಡಿಸಿಕೊಳ್ಳಲು ೭೨ ರಾಗಗಳ ಸ್ಥೂಲ ಪರಿಚಯವೇ ಸಾಕು. ಬಹಳ ಪ್ರತಿಭಾವಂತ ಸಂಗೀತ ಶಾಸ್ತ್ರಜ್ಞರ ನೆರವಿನಿಂದ ಮಾತ್ರ ಶಿವನ್ ಅವರ ರಾಗ ರಚನೆ ಅಥವಾ ರಾಗ ಸಂಯೋಜನೆಯನ್ನು ಅರ್ಥೈಸಲು ಸಾಧ್ಯ. ಆದರೂ, ಸಂಗೀತ ಕಲಿಯಲಿಚ್ಛಿಸುವವರು ಈ ರಾಗಮಾಲಿಕೆಯ ಆಳವಾದ ಅಧ್ಯಯನದಿಂದ ನಮ್ಮ ಸಂಗೀತ ಪ್ರಕಾರದ ಭವ್ಯತೆಯನ್ನು ಅರಿತುಕೊಳ್ಳಬಹುದಾಗಿದೆ.

ಶ್ರೀ ಆನಂದರಾಮ ಉಡುಪರು ಈ ಮಹತ್ವದ ಗ್ರಂಥವನ್ನು ಸಂಪಾದಿಸಿ ವಿದ್ವತ್‌ಪೂರ್ಣ ಪ್ರಸ್ತಾವನೆಯನ್ನು ಬರೆದಿದ್ದಾರೆ. ಸುಂದರವಾಗಿ ಮುದ್ರಿತವಾಗಿರುವ **ಮೇಳ ರಾಗಮಾಲಿಕಾ** ಸಂಗೀತಾಸಕ್ತರಿಗೆ ತುಂಬ ಉಪಯುಕ್ತವಾದ ಗ್ರಂಥವಾಗಿದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಶ್ರೀ ಉಡುಪ ಅವರಿಗೆ ಅಭಿನಂದನೆಗಳು.

**ಜಿ. ದ್ವಾರಕನಾಥ**
೧೨೬೦, ೩ ನೇ ಅಡ್ಡರಸ್ತೆ, ಜಯನಗರ, 'ಟಿ' ಬ್ಲಾಕ್
ಬೆಂಗಳೂರು - ೧೧
**ಕನ್ನಡಕ್ಕೆ : ಎಸ್. ಸುರೇಂದ್ರ**

# ಪ್ರಭುವೆ ! ನೀನೊಮ್ಮೆ ಹೆಣ್ಣಾಗು

ಘಮಟುಗಟ್ಟಿದ ಅಡುಗೆ ಕೋಣೆಗಳಿವೆ
ಜಿಡ್ಡುಗಟ್ಟಿದ ಬಾಣಂತಿ ಖೋಲಿಗಳಿವೆ
ಕೋಪಾಗ್ರಹಗಳಾವವೂ ನಮಗಿಲ್ಲ ಪ್ರಭುವೆ !
ಸೂರ್ಯ ಕಿರಣಗಳೇ ಕಾಣದ ನಮ್ಮ
ಕತ್ತಲು ಕೋಣೆ ಗವಿಗೊಮ್ಮೆ
ನೀನು ದಯಮಾಡಿಸಬಾರದೆ ?

*

ಪೇಟೆಗೆ ಹೋದ ಮಗ
ಎನ್‌ಕೌಂಟರ್‌ನಲ್ಲಿ ನಲುಗಿದ
ಯುದ್ಧಕ್ಕೆ ಹೋದ ಪತಿಯ
ರಕ್ತಸಿಕ್ತ ಬಟ್ಟೆಗಳೇ ಹಿಂತಿರುಗಿದವು
ಅತ್ಯಾಚಾರಕ್ಕೊಳಗಾದ ಮಗಳು
ಅಪಮಾನ ಸಹಿಸದೆ ನೇಣಿಗೆ
ಶರಣಾದಳು ಪ್ರಭುವೆ !
ನನ್ನ ನೋವಿನ ಆಳ ಅರಿಯಲು
ನೀನೊಮ್ಮೆ ಹೆಣ್ಣಾಗಿ ಅವತರಿಸಬಾರದೆ ?

*

ತುತ್ತು ಗಳಿಸಲು ಹೊರಗೆ ಬಂದರೆ
ಪರದೆಯ ಹಿಂದೆ ದೂಡುವ
ಧರ್ಮದ ಕಾಣದ ಕೈಗಳು
ಬಂದೂಕು ಗುರಿಯಿಟ್ಟಿದೆ ನನ್ನತ್ತಲೇ
ಸಣ್ಣ ಶಬ್ದಕ್ಕೂ ಬೆಚ್ಚಿಬೀಳುವೆ –
ಬಿಳಿಚಿಕೊಳ್ಳುವೆ – ಉಸಿರುಗಕ್ಕನೆ
ನಿಂತು, ಕರಳು ಬಾಯಿಗೆ ಬರುವದು
ಎಲ್ಲ ಕಳಕೊಂಡಿರುವೆ, ಹೇಗೆ
ಬದುಕಲಿ ಹೇಳು ಪ್ರಭುವೆ ?

*

ನನ್ನ ನೋವಿನ ಪರಿಯ ಅಮಲು
ಶಬ್ದ ಮೀರಿದ ನೋವ ತಿಳಿಯಲು
ಓ ಪ್ರಭುವೆ !
ನೀನೊಮ್ಮೆ ಹೆಣ್ಣಾಗಬಾರದೆ ?

*

ಯುದ್ಧ ಸಾರಿದ್ದಾನೆ ಗಡಿಯಲಿ
ಲೋಕದ ಠೇಕೇದಾರನು
ಹೇಗೆ ವಿವರಿಸಲಿ ನಿನಗೆ
ನೋವಿನ ಪರಿಯನು
ಎದೆಯ ತಲ್ಲಣದ ಕ್ಷಣಗಳನು

**ಕೆ. ಷರೀಫಾ**
[illegible] ಸಿ., ಹರಿಹರ - ೫೭೭ ೬೦೧



**ಭಾ**ರತದ ಉನ್ನತ ಶಿಕ್ಷಣದ ಸಂದಿಗ್ಧತೆ ಎಂದರೆ ಸಮಾಜದ ಅಗತ್ಯ ಮತ್ತು ಪೂರೈಕೆಗಳಿಗೆ ಸ್ಪಂದಿಸದಿರುವುದು. ಒಂದುಕಡೆ ನಿರುದ್ಯೋಗ ಇದ್ದರೆ ಇನ್ನೊಂದೆಡೆ ಎಲ್ಲಾ ಕಾಲೇಜುಗಳು ತುಂಬಿರುತ್ತವೆ. ಇದರ ಮೂಲಭೂತ ಕೊರತೆ ಎಂದರೆ ವಿದ್ಯಾರ್ಥಿಗಳಿಗೆ ತಮ್ಮ ಕೌಶಲಕ್ಕೆ ತಕ್ಕಹಾಗೆ ಶಿಕ್ಷಣವನ್ನು ಪಡೆಯಲು ಆಗದಿರುವುದು. ಹೀಗೆ ಸಮುದಾಯದ ಅಗತ್ಯ, ವಿದ್ಯಾರ್ಥಿಯ ಆಸಕ್ತಿ, ಕಾಲೇಜಿನ ಪಠ್ಯಕ್ರಮ – ಏಕಮುಖವಾಗಿ ಹೋಗದೆ ಶಿಕ್ಷಣ ತನ್ನ ಸಂಪೂರ್ಣ ಆಶಯದಿಂದ ದೂರಹೋಗಿದೆ ಎಂಬುದು ನಾಡಿನ ಶೈಕ್ಷಣಿಕ ತಜ್ಞರ ಅಭಿಮತ.

೧೯೮೬ರ ರಾಷ್ಟ್ರೀಯ ಶಿಕ್ಷಣ ನೀತಿ ಮತ್ತು ಅದರನ್ವಯ ಉದ್ಯೋಗ ಕೇಂದ್ರಿತ ಪಠ್ಯಕ್ರಮ ಮರುಚಿಂತನೆಗಳು ಶುರುವಾದರೂ ಅದು ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗದಿರಲು ಮುಖ್ಯಕಾರಣ ಇವೆಲ್ಲವೂ ನಿರ್ಧರಿತವಾಗಿದ್ದು ದೆಹಲಿಯಲ್ಲೇ. ಈಗ ಜಾಗತಿಕ ಮಾರುಕಟ್ಟೆಯಲ್ಲಿ ಸವಾಲನ್ನು ಎದುರಿಸಬೇಕಾಗಿರುವುದರಿಂದ ಕೌಶಲ ಮತ್ತು ಅಗತ್ಯದ ಪ್ರಶ್ನೆ ಹಿಂದೆಂದಿಗಿಂತಲೂ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿದೆ.

ಕಮ್ಯುನಿಟಿ ಕಾಲೇಜಿನ ಪರಿಕಲ್ಪನೆಯ ಹಿಂದಿನ ಆಶಯಗಳು ಈ ಪ್ರಮುಖ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಮೂಡಿಬಂದಿರುವುದು. ವರ್ತಮಾನದ ಅಗತ್ಯಗಳಿಗೆ ಸಂಬಂಧಪಟ್ಟ ಹಾಗೆ ಸಮುದಾಯದೊಂದಿಗೆ ಚರ್ಚಿಸಿ ಪಠ್ಯಕ್ರಮವನ್ನು ರೂಪಿಸುವುದು, ಸಮಾಜದ ಎಲ್ಲ ಸ್ತರಗಳ ಜನರನ್ನು ಶಿಕ್ಷಣ ಆಂದೋಲನದಲ್ಲಿ ಭಾಗಿಯಾಗಿಸುವುದು, ಸ್ಥಳೀಯ ನಿರುದ್ಯೋಗಕ್ಕೆ ಪರಿಣಾಮಕಾರಿಯಾಗಿ ಶೈಕ್ಷಣಿಕವಾಗಿ ಸ್ಪಂದಿಸಿ ಸ್ಥಳೀಯ ಪ್ರಗತಿಗೆ ಕಾಣ್ಕೆ ನೀಡುವುದು. ವಿದ್ಯಾರ್ಥಿ, ಸಮುದಾಯ, ಧಣಿ – ಇವರ ತಹತಹಗಳಿಗೆ ಸ್ಪಂದಿಸುವುದು, ಮಹಾತ್ಮಾ ಗಾಂಧಿಯವರ ಮೂಲಭೂತ ಶಿಕ್ಷಣ ವ್ಯವಸ್ಥೆಯ ಬಗ್ಗೆ ಪುನರ್‌ಪರಿಶೀಲಿಸಿ ಮಾನವ ಸಂಪನ್ಮೂಲವನ್ನು ಹೆಚ್ಚಿಸುವುದು, ಪಠ್ಯಕ್ರಮದ ಬೋಧನೆಯಲ್ಲಿ ತಜ್ಞತೆಯನ್ನು ಪಡೆದುಕೊಳ್ಳುವುದು, ವೈಯಕ್ತಿಕ ಕೆಲಸಮಾಡುವ ಧಾರ್ಷ್ಟ್ಯತೆ ಮತ್ತು ಉದ್ಯಮಶೀಲ ತರಬೇತಿ, ತಾಂತ್ರಿಕ ಜ್ಞಾನವನ್ನು ಸ್ಥಳೀಯ ಸಮಸ್ಯೆಗಳ ಪರಿಹಾರಕ್ಕೆ ಒದಗಿಸುವುದು, ವಿದ್ಯಾರ್ಥಿಗಳ

# ಕಮ್ಯುನಿಟಿ ಕಾಲೇಜು ಹಾಗೆಂದರೇನು ?

ಶೈಕ್ಷಣಿಕ ವರ್ಷವನ್ನು ಬಿಗಿಯಾಗಿ ನಿಯಮಕ್ಕೆ ಒಳಪಡಿಸದೇ ಉದಾರತನದಿಂದ ನೋಡುವುದು (ವಿದ್ಯಾರ್ಥಿಗಳು ತಮ್ಮ ಅನುಕೂಲಕ್ಕೆ ತಕ್ಕಹಾಗೆ ಸೇರುವ, ಬಿಡುವ ವ್ಯವಸ್ಥೆ), ಕಾರ್ಖಾನೆಗಳೊಂದಿಗೆ ಒಪ್ಪಂದ ವಿನಿಮಯ ಮಾಡಿಕೊಂಡು ಹಣಕಾಸಿನ ವ್ಯವಸ್ಥೆಯನ್ನು ಕಾಲೇಜು ನೋಡಿಕೊಳ್ಳುವುದು (ಸರ್ಕಾರದ ಹಣದ ಮೇಲೆಯೇ ನಿಲ್ಲದೇ), ವಿದ್ಯಾರ್ಥಿಗಳ ಅದಮ್ಯ ಚೇತನವನ್ನು ಪೂರ್ಣ ಉಪಯೋಗಿಸಿಕೊಳ್ಳುವುದು – ಇವು ಕಮ್ಯುನಿಟಿ ಕಾಲೇಜು ಅನುಸರಿಸಬೇಕಾದ ಮೂಲಭೂತ ಅಂಶಗಳು ಮತ್ತು ಗುರಿ.

ಈ ಬಗ್ಗೆ ತಜ್ಞರಾದ ಕೆನಡಾದ ಕಮ್ಯುನಿಟಿ ಕಾಲೇಜಿನ ನಿರ್ದೇಶಕರಾದ ಪ್ರೊ॥ ಗ್ಲೆನ್ ವಿಟ್ಟರ್ ಮತ್ತು ಹ್ಯಾಮಿಲ್ಟನ್ ಕಮ್ಯುನಿಟಿ ಕಾಲೇಜು ತಜ್ಞರಾದ ಪ್ರೊಫೆಸರ್ ಆಲ್‌ಫ್ರೆಡ್ ಫರ್ನಾಂಡೀಸ್ ಅವರ ತಜ್ಞ ಮಾರ್ಗದರ್ಶನದಲ್ಲಿ ಭಾರತದ ಎಂಟು ಶೈಕ್ಷಣಿಕ ತಜ್ಞರೊಂದಿಗೆ ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ (ಯುಜಿಸಿ) ಒಂದು ಸಮಿತಿಯನ್ನು ರಚಿಸಿ ವರದಿಯನ್ನು ಕೇಳಿತು. ಯುಜಿಸಿಯ ಅಧ್ಯಕ್ಷರಾಗಿದ್ದ ಪ್ರೊ॥ ಜಿ. ರಾಮರೆಡ್ಡಿಯವರೂ ಸಮಿತಿಯ ಸದಸ್ಯರಲ್ಲೊಬ್ಬರು! ಈ ಸಮಿತಿಯ ಮುಖ್ಯ ಶಿಫಾರಸುಗಳು :

(ಎ) ೧. ಉತ್ತರ ಅಮೆರಿಕಾದಲ್ಲಿರುವ – ಈಗಾಗಲೇ ಅಸ್ತಿತ್ವದಲ್ಲಿದ್ದು ಕೆಲಸ ಮಾಡುತ್ತಿರುವ ಕಮ್ಯುನಿಟಿ ಕಾಲೇಜಿನ ಥರ ಭಾರತದಲ್ಲಿರದೇ ಇದು ಕೇಂದ್ರ ಮತ್ತು ರಾಜ್ಯ ಸರ್ಕಾರದ ಅಧೀನದಲ್ಲಿ ಇರದೇ ಇಡೀ ಸಮುದಾಯದ ನೆರವಿನಿಂದ, ಅವರ ಆಶಯಕ್ಕೆ ತಕ್ಕವಾಗಿರಬೇಕು.

೨. ಈ ರೀತಿಯ ಕಮ್ಯುನಿಟಿ ಕಾಲೇಜು ಆಂದೋಲನದಲ್ಲಿ ಸಾರ್ವಜನಿಕರು, ಖಾಸಗಿಯವರು ಮತ್ತು ಸ್ವಯಂ ಸೇವಾ ಸಂಸ್ಥೆಗಳು ಭಾಗವಹಿಸುವಂತಿರಬೇಕು.

೩. ಆಯಾ ಸ್ಥಳೀಯ ಕೆಲಸಕ್ಕೆ ಆದ್ಯತೆ ನೀಡಿ ಪಠ್ಯಕ್ರಮದ ಸಿದ್ಧತೆ ಆಗಬೇಕು.

೪. ಪ್ರಸ್ತುತ ಇರುವ ಕಾಲೇಜುಗಳನ್ನು ಇಂಥ ಕಾಲೇಜುಗಳಾಗಿ ಪರಿವರ್ತಿಸಬಹುದು ಅಥವಾ ಬೇರೆ ಹೊಸತು ಕಾಲೇಜುಗಳನ್ನು ಸಾರ್ವಜನಿಕರು, ಖಾಸಗಿಯವರು ಮತ್ತು ಸ್ವಯಂ ಸೇವಾ ಸಂಸ್ಥೆಗಳು ಸ್ಥಾಪಿಸಬಹುದು.

೫. ಯಾವುದೇ ರೀತಿ ಪಠ್ಯಕ್ರಮದ ಮಾದರಿಯನ್ನು ಇಟ್ಟುಕೊಳ್ಳದೆ ಆಯಾ ಸ್ಥಳೀಯ ಸಮುದಾಯದ ಆಸೆ, ಆಕಾಂಕ್ಷೆಗಳಿಗೆ ಸಹ ಸ್ಪಂದಿಸುತ್ತಿರಬೇಕು.

೬. ಸ್ಥಳೀಯ ಸಂಪನ್ಮೂಲಗಳಿಂದಲೇ ಹುಟ್ಟಬೇಕಾಗಿರುವುದರಿಂದ ಇಂಥ ಕಾಲೇಜುಗಳು ಆಯಾ ಸ್ಥಳೀಯ ಆಶಯಕ್ಕೆ ತಕ್ಕದಾಗಿರಬೇಕು.

೭. ಪಟ್ಟಣ, ನಗರ, ಗ್ರಾಮೀಣ ಭಾರತದ ಆದ್ಯತೆಗಳಿಗೆ ಇಂಥ ಕಾಲೇಜು ಪ್ರತಿಸ್ಪಂದಿಸಬೇಕು.

೮. ಇತರ ಕಾಲೇಜುಗಳಂತೆ ಇದು ಸಮಯ ಪಾಲನೆ ಮಾಡಿದರೂ ಆಯಾ ಋತುವಿಗನುಸಾರವಾಗಿ ಬದಲಾವಣೆಯನ್ನು ಮತ್ತು ಮುಕ್ತ (ಅಂಚೆ) ವ್ಯವಸ್ಥೆಯ ಮೂಲಕ ಪಠ್ಯಕ್ರಮ ಬೋಧಿಸಬಹುದು.

**(ಬಿ) ಆಡಳಿತ ವರ್ಗ ಮತ್ತು ಉಪನ್ಯಾಸಕರು**

ಕಮ್ಯುನಿಟಿ ಕಾಲೇಜಿನ ಆಡಳಿತ ಸಮಿತಿಯಲ್ಲಿ ಶೈಕ್ಷಣಿಕ ತಜ್ಞರಿಂದ, ನೀತಿ ನಿರೂಪಿಸುವುದರಿಂದ, ಮಾಲೀಕರು ಮತ್ತು ಸಾರ್ವಜನಿಕರಿಂದ ಮತ್ತು ಧನಸಹಾಯ ನೀಡುವ ಸಂಸ್ಥೆಗಳಿಂದ ತಲಾ ಶೇಕಡ ೨೫ರಷ್ಟು ಪ್ರಾತಿನಿಧ್ಯವಿರಬೇಕು.

ಆ ಕಾಲೇಜಿನ ಪ್ರಿನ್ಸಿಪಾಲರನ್ನು ನಿರ್ದಿಷ್ಟ ಅವಧಿಗೆ ನೇಮಿಸಿಕೊಳ್ಳಬೇಕು. ಪುನಃ ಮೌಲ್ಯ ಮಾಪನವನ್ನು ಮಾಡಿ ನೇಮಿಸಿಕೊಳ್ಳಬಹುದು. ಇಂಥ ಕಾಲೇಜಿನ ಎಲ್ಲಾ ನೌಕರರು, ಉಪನ್ಯಾಸಕರನ್ನು ಒಂದು ಕಾಲಮಿತಿ ಒಪ್ಪಂದದಿಂದ ನೇಮಿಸಿಕೊಳ್ಳಬೇಕು. ಸಾರ್ವಜನಿಕ ಉದ್ಯಮದಿಂದ ಮತ್ತು ಉದ್ಯಮಪತಿಗಳಿಂದ ಕಾಲೇಜು ಸ್ಥಾಪನೆಯಾದರೆ ಇದರ ತರಬೇತಿಗಾಗಿ ಹಿರಿಯ ಆಡಳಿತಗಾರರನ್ನು ನೇಮಕ ಮಾಡಿಕೊಳ್ಳಬೇಕು. ಅವರ ಸಾಮಾಜಿಕ ಬದ್ಧತೆ, ಸಮರ್ಥ ನಾಯಕತ್ವ ಇನ್ನಿತರ ಗುಣಗಳು ಬಹಳ ಮುಖ್ಯವಾಗುತ್ತವೆ. ಕಾಲೇಜಿಗೆ ಸಂಪನ್ಮೂಲವನ್ನು ಕ್ರೋಡೀಕರಿಸುವ ಸಂಕಲ್ಪಶಕ್ತಿ ಇರಬೇಕು. ಸಮಾಜದ ಎಲ್ಲ ವರ್ಗಗಳೊಡನೆ ಸುಮಧುರ ಬಾಂಧವ್ಯ ಇಟ್ಟುಕೊಳ್ಳಬೇಕು, ಕಾಲೇಜಿನ ಬಗ್ಗೆ ಧನಾತ್ಮಕ ಚಿಂತನೆಯನ್ನು ಮಾಡಿಸುವಂತಾಗಿರಬೇಕು.




ಡಾ॥ ಜಯಪ್ರಕಾಶ ಮಾವಿನಕುಳಿ

ಇಂಥ ಕಾಲೇಜಿನಿಂದ ಹೊರಬರುವ ವಿದ್ಯಾರ್ಥಿಗಳು ಕೇವಲ ಪುಸ್ತಕದ ಬದನೆ ಕಾಯಿ ಆಗದೆ ವಾಸ್ತವ ಕೆಲಸವನ್ನು ಬಲ್ಲವರಾಗಿರಬೇಕು. ಇಂಥ ಕಾಲೇಜುಗಳಲ್ಲಿ ಪರೀಕ್ಷೆ ಎಂಬುದು ವಾರ್ಷಿಕದ ಅಂಚಿನಿಂದ ಆಗದೆ ಅವರ ಕೆಲಸದ ಕುಶಲತೆ, ಸಿದ್ಧಾಂತದ ಅರಿವು ಇನ್ನಿತರ ಕೆಲಸದಿಂದ ಆಗಬೇಕು. ಶಿಕ್ಷಕರು ಹೊಸ ಹೊಸ ವಿಷಯಗಳ ಬಗ್ಗೆ ಸಂಶೋಧನಾ ಪ್ರವೃತ್ತಿಯನ್ನು ಬೆಳೆಸಿಕೊಂಡು ಹೊಸ ಹೊಸ ಆವಿಷ್ಕಾರಗಳನ್ನು ಮಾಡಿ ವಿದ್ಯಾರ್ಥಿಗಳನ್ನು ಆಕರ್ಷಿಸುವಂತಾಗಿರಬೇಕು. ಈ ಕಾರಣಕ್ಕಾಗಿ ಬರಿಯ ವಿದ್ಯಾರ್ಥಿಗಳಿಗಲ್ಲದೆ ಶಿಕ್ಷಕರಿಗೂ ನಿರಂತರ ಮೌಲ್ಯಮಾಪನ ವ್ಯವಸ್ಥೆ ಇರಬೇಕು. ಪೂರ್ಣ ಪ್ರಮಾಣದ ಶಿಕ್ಷಕರು ಬರಿಯ ಪಠ್ಯಕ್ರಮವನ್ನು ಬೋಧಿಸದೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ, ಪರಿಹಾರದ ಕ್ರಮ ಇತರೆ ವಿಷಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರಬೇಕು.

**ಸಂಸ್ಥೆಯ ಉತ್ತರದಾಯಿತ್ವ**

ಕಮ್ಯುನಿಟಿ ಕಾಲೇಜು ಎಂಬುದು ಆಯಾ ಪ್ರದೇಶದ ವಿದ್ಯಾರ್ಥಿಗಳ, ಪರಿಸರದ ತಹತಹಗಳಿಗೆ ಸ್ಪಂದಿಸುವಂತಿರಬೇಕು. ಈ ಕಾರಣಕ್ಕಾಗಿ ಸಂಸ್ಥೆಯ ಒಂದು ಗುರಿ, ಆಶಯ, ಧ್ಯೇಯೋದ್ದೇಶಗಳ ಪಟ್ಟಿಯನ್ನು ತಯಾರಿಸಿಕೊಂಡು ಪ್ರತಿವರುಷ ನೋಡಿ ಕೊನೆಗೆ ಐದು ವರುಷಕ್ಕೆ ಒಮ್ಮೆ ಪೂರ್ಣವಾಗಿ ಪರಿಷ್ಕರಿಸಬೇಕು. ಬಯಸಿದ ವಿಷಯ ಗಳನ್ನು ವಿದ್ಯಾರ್ಥಿಗಳಿಗೆ ನೀಡಿದರೂ ತನ್ನ ರಾಷ್ಟ್ರಮಟ್ಟದಲ್ಲಿ ಮೌಲ್ಯಮಾಪನಕ್ಕೆ ಅರ್ಹತೆಯನ್ನೇ ಪಡೆದಿರಬೇಕು. ಇದನ್ನು ನಿಗಾವಹಿಸಲು ವಿಶ್ವವಿದ್ಯಾನಿಲಯ ಸಹಾಯ ಆಯೋಗ ಒಂದು ಮೌಲ್ಯಮಾಪನ ಮಾಡುವ ಸಮಿತಿ (Accreditation Council) ಯನ್ನು ಸ್ವಯಂಸೇವಾ ಸಮಿತಿ ಸದಸ್ಯರು, ಉದ್ಯಮಪತಿಗಳು, ಸಮುದಾಯದವರು, ಕಾಲೇಜಿನ ಪ್ರತಿನಿಧಿಗಳೊಂದಿಗೆ ರಚಿಸಬೇಕು. ಹೀಗೆ ಮಾಡುವುದರ ಮೂಲಕ ಆಯಾ ಕಾಲೇಜಿನ ಪರೀಕ್ಷೆ, ಗುಣಮಟ್ಟವನ್ನು ಕಾಯ್ದಿಟ್ಟು ಕೊಳ್ಳಲು ಅನುಕೂಲವಾಗುತ್ತದೆ. ಉದ್ಯಮಪತಿಗಳೊಂದಿಗೆ ನೇರ ಸಂಬಂಧವನ್ನು ಇಟ್ಟುಕೊಂಡು ಪ್ರತಿವರುಷ ಉದ್ಯೋಗ ಸೃಷ್ಟಿಯಾಗುವಂತೆ ನೋಡಿಕೊಳ್ಳಬೇಕು. ಈ ದೃಷ್ಟಿಯಿಂದ ಒಂದು ಕಾರ್ಯಕ್ರಮ ಮೇಲ್ವಿಚಾರಣಾ ಸಮಿತಿಯನ್ನು ನೇಮಿಸಿಕೊಳ್ಳುವ ಅಗತ್ಯವಿದೆ. ಪಠ್ಯಕ್ರಮವನ್ನು ರೂಪಿಸುವಲ್ಲೂ ಈ ಸಮಿತಿ ಕಾರ್ಯೋನ್ಮುಖವಾಗುತ್ತದೆ.

**ಸಂಸ್ಥೆಯ ಹಣಕಾಸು ಪರಿಸ್ಥಿತಿ**

ಇಂಥ ಕಾಲೇಜುಗಳು ರಾಜ್ಯ ಮತ್ತು ಕೇಂದ್ರ ಸರ್ಕಾರದ ಹಣಕಾಸು ಮರ್ಜಿಯಲ್ಲಿ ಇರಬಾರದು. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗವು ಶೇಕಡ ೫೦ಕ್ಕಿಂತಲೂ ಹೆಚ್ಚು ಹಣವನ್ನು ಇಂಥ ಕಾಲೇಜುಗಳು ಸಾಂಗವಾಗಿ ನೆರವೇರಲು ಕೊಡಬಾರದು. ಉಳಿದ ಹಣವನ್ನು ಉದ್ಯಮಪತಿಗಳಿಂದ, ಬೋಧನಾಶುಲ್ಕದ ಮೂಲಕ, ರಾಜ್ಯ ಸರ್ಕಾರದ ಹಣ ಸಹಾಯದಿಂದ ಪಡೆದುಕೊಂಡು ಕಾರ್ಯವೆಸಗಬೇಕು. ಇಂಥ ಸಂಸ್ಥೆಗಳು ತೆರಿಗೆ ವಿನಾಯ್ತಿಯನ್ನು ಪಡೆದುಕೊಳ್ಳಲು ಅರ್ಹವಾಗಿರುತ್ತವೆ. ಇಂಥ ಸಂಸ್ಥೆಗಳು ತನ್ನ ಶೇಕಡ ೧೦ರಷ್ಟು ಆಯವ್ಯಯದಲ್ಲಿನ ಹಣವನ್ನು ಹೊಸ ವಿಷಯಗಳ ಪರಿಷ್ಕಾರಕರಿಗೆ ಮೀಸಲಿಡಬೇಕು. ಯುಜಿಸಿಯಿಂದ ಬಂದ ಹಣವನ್ನು ತಾಂತ್ರಿಕ ಸಹಾಯ, ಉಪಕರಣಗಳು, ಮಾಹಿತಿ ತಂತ್ರಜ್ಞಾನ ಸೇವೆ – ಇತರೆ ಕೆಲಸಗಳಿಗೆ ಬಳಸಿಕೊಳ್ಳಬೇಕೇ ವಿನಾ ಆಡಳಿತದ ದೈನಂದಿನ ಖರ್ಚಿಗಾಗಿ ಅಲ್ಲ. ವಿದ್ಯಾರ್ಥಿ ಶುಲ್ಕವನ್ನು ಅತ್ಯಂತ ಕಡಿಮೆ ಇಟ್ಟು, ವಿದ್ಯಾರ್ಥಿಗಳಿಗೆ ಸಾಲ ಸೌಲಭ್ಯವು ಸಿಗುವಂತೆ ಪ್ರೇರಣೆ ನೀಡಬೇಕು. ಪ್ರತಿಯೊಂದು ಸಂಸ್ಥೆಯೂ ತನ್ನದೇ ಆದ ಬೋಧನಾ ಶುಲ್ಕವನ್ನು ನಿಗದಿಗೊಳಿಸುವ ಅಧಿಕಾರ ಹೊಂದಿರುತ್ತದೆ. ಅರೆಕಾಲಿಕ ವಿದ್ಯಾರ್ಥಿಗಳೂ ಸಹ ಮುಕ್ತ ಅವಕಾಶ ಹೊಂದಿರುವವರಾಗಿರಬೇಕು.

**ಸಂಸ್ಥೆಯ ಪ್ರಾಮುಖ್ಯತೆ ಮತ್ತು ಮೌಲ್ಯಮಾಪನ**

ಅನೇಕ ವಿಷಯಗಳನ್ನು ಆರಿಸುವ ಪದ್ಧತಿ ಇರುವುದರಿಂದ ಇವಕ್ಕೆಲ್ಲಾ ಮೌಲ್ಯ ಮಾಪನ ಮಾಡಲು ಒಂದು ನಿರ್ದಿಷ್ಟ ಮಾನದಂಡವನ್ನು ನಿರ್ಧರಿಸಿಕೊಳ್ಳಬೇಕು. ಇಂಥ ಕಾಲೇಜುಗಳಲ್ಲಿ ಸರ್ಟಿಫಿಕೇಟ್ ಮತ್ತು ಅಸೋಸಿಯೇಟೆಡ್ ಡಿಗ್ರಿಗಳನ್ನು ನೀಡುವ ಪದ್ಧತಿ ಜಾರಿಗೆ ಬರಬೇಕಾಗಿದೆ. ಇದು ಪದವಿಯನ್ನು ಪಡೆದುಕೊಳ್ಳಲು ಅನುಸರಿಸುವ ಮೊದಲ ಹಂತ. ಇಂಥ ಕಾಲೇಜಿನ ಪಠ್ಯಕ್ರಮಗಳಲ್ಲಿ ಮೂರನೇ ಒಂದು ಭಾಗಕ್ಕಿಂತಲೂ ಹೆಚ್ಚು ಉದ್ಯೋಗಕ್ಕೆ ನೇರವಾಗಿ ಸಂಬಂಧಿಸಿರಬೇಕು. ನಿಧಾನವಾಗಿ ಕಲಿಯುವವರ ಉತ್ತೇಜನಕ್ಕಾಗಿ ಹೆಚ್ಚುವರಿ ವಿಶೇಷ ಪಠ್ಯ ಬೋಧನಾ ವ್ಯವಸ್ಥೆಯನ್ನು ಮಾಡಬೇಕು. ಪದವಿಯ ಕೊನೆಯ ಪರೀಕ್ಷೆಗಳೂ ಸಹ ಆ ವಿದ್ಯಾರ್ಥಿಯ ಮೌಲ್ಯಮಾಪನವನ್ನು ಸಂಪೂರ್ಣ ಮಾಡದೆ ಕೇವಲ ಅವರ ಸಾಧನೆಯನ್ನು ೫೦ಕ್ಕೇ ಸೀಮಿತಗೊಳಿಸಬೇಕು.



## ಕಣ್ಣ ಹನಿಗಳು

ಕ್ಷಣ ಕ್ಷಣವಾಗಿ ಅಣು ಅಣುವಾಗಿ
ಕೊಲ್ಲುವ ನಿಃಶಸ್ತ್ರ ಕಾಲ
ಉಳಿಸು ಅಳುವುದಕ್ಕಾಗಿ
ಕನಿಷ್ಠ ಕಣ್ಣೊಂದನು
ಮತ್ತು ಕಣ್ಣನೊಳಗಿಷ್ಟು
ಕಂಬನಿಯನ್ನೂ
* * *
ಕಂಬನಿ, ಮಾತಿಲ್ಲದವರ
ಭಾಷೆ
ಕನಸಿಲ್ಲದವರ ಆಸೆ
ಗುರುತಿಲ್ಲದವರ ಪರಿಚಯ
ಬದುಕಿಲ್ಲದವರ ಜೀವ
ಮತ್ತು ನನ್ನ ಪ್ರೀತಿ
* * *
ಪ್ರೀತಿಸಿದವರೆಲ್ಲ
ಮಿಡಿಯುತ್ತಾರೆ ಕಂಬನಿಯನ್ನು
ಕಂಬನಿಯನ್ನೇ ನಾನು
ಪ್ರೀತಿಸುವೆನು
* * *
ಬತ್ತಿ ಹೋದರೂ ತೊರೆ ನದಿ
ಆವಿಯಾದರೂ ಶರಧಿ
ಹೊತ್ತಿ ಉರಿದರೂ ಭೂಮಿ
ಉಳಿದರೆ ಸಾಕು ಕಣ್ಣೊಳಗೆ
ಕರುಣೆಯ ಒಂದು ಹನಿ
ಜಗತ್ತು ಉಳಿಯುವುದು !

ಗಣೇಶ ಹೊಸ್ಮನೆ
ಜಾನ್ಮನೆ - ೫೮೧ ೩೧೫, ಶಿರಸಿ,
ಉತ್ತರ ಕನ್ನಡ ಜಿಲ್ಲೆ

**ಸಮುದಾಯದ ಸಂಬಂಧಗಳು**

ಇಂಥ ಸಂಸ್ಥೆಗಳು ಸಮುದಾಯದೊಂದಿಗೆ ಸೌಜನ್ಯಶೀಲ ಸಂಬಂಧವನ್ನು ನಿರಂತರವಾಗಿ ಇಟ್ಟುಕೊಳ್ಳಬೇಕು. ಸ್ಥಳೀಯ ಅಗತ್ಯದ ಮೇಲೆ ಕಾಲೇಜಿನ ಪಠ್ಯಕ್ರಮ ರೂಪುಗೊಳ್ಳುವುದರಿಂದ ವಿದ್ಯಾರ್ಥಿಗಳನ್ನು ಅವರ ಅರ್ಹತೆಗೆ ಅನುಸಾರವಾಗಿ ಕೆಲಸಕ್ಕೆ ಹೊಂದಿಸುವುದೂ ಸಹ ಕಾಲೇಜಿನ ಆದ್ಯ ಕರ್ತವ್ಯವಾಗಿರುತ್ತದೆ. ಹೀಗಾದಾಗ ಮಾತ್ರ ಕಾಲೇಜು ಸಮುದಾಯದ ಅಂತರಂಗವನ್ನು ಅರ್ಥಮಾಡಿಕೊಳ್ಳಲು ಸಾರ್ಥಕ ವಾಗುತ್ತದೆ. ಪಠ್ಯಕ್ರಮಗಳು ಓಬಿರಾಯನ ಕಾಲದ ಕಗ್ಗಂಟಾಗದೆ ಸರಳೀಕೃತವಾಗಿ ಸ್ಪಂದಿಸುವಂತಿರಬೇಕು. ಯಾವುದೇ ಹೊಸ ಪದ್ಧತಿಯನ್ನು, ಪಠ್ಯಕ್ರಮವನ್ನು ರೂಪಿಸಿದಾಗ ಇದಕ್ಕೆ ಪ್ರತಿರೋಧ ಬರುವುದು ಸಹಜ. ಇದಕ್ಕೆ ಮುಖ್ಯ ಕಾರಣ ಜನರಿಗೆ ಈ ಬಗ್ಗೆ ತಿಳುವಳಿಕೆ ಇಲ್ಲದಿರುವುದು. ಆದುದರಿಂದ ಜನರಿಗೆ ಈ ಬಗ್ಗೆ ಅರಿವು ಮೂಡಿಸುವ ಕೆಲಸವನ್ನು ಈ ಕಾಲೇಜುಗಳು ಜವಾಬ್ದಾರಿಯುತವಾಗಿ ನಿರ್ವಹಿಸಬೇಕು.

ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಪೂರ್ಣ ನಂಬಿಕೆ ಇಟ್ಟುಕೊಂಡಿರುವ ಪ್ರಜಾಪ್ರಭುತ್ವ ರಾಷ್ಟ್ರವು ಇಂಥ ಕಮ್ಯುನಿಟಿ ಕಾಲೇಜನ್ನು ಸವಾಲಾಗಿ ಸ್ಥಾಪಿಸಲು ಮುಂದಾಗಬೇಕು. ಆರಂಭದಲ್ಲಿ ೧೦ ಕಮ್ಯುನಿಟಿ ಕಾಲೇಜುಗಳನ್ನು ಸ್ಥಾಪಿಸಲು ಹತ್ತು ಕೋಟಿ ರೂಪಾಯಿಗಳನ್ನು ವಿನಿಯೋಗಿಸಲು ಸರ್ಕಾರ ಮನಸ್ಸು ಮಾಡಬೇಕಾಗಿದೆ.

ಡಾ॥ ಜಯಪ್ರಕಾಶ ಮಾವಿನಕುಳಿ
ಪ್ರೊಫೆಸರ್, ಶ್ರೀ ಮಹಾವೀರ ಕಾಲೇಜು, ಮೂಡುಬಿದಿರೆ - ೫೭೪ ೨೨೭ (ದ.ಕ.)

# ಒಳ-ಹೊರ ಮಾಲಿನ್ಯ

**ನರ ವಿವೇಕವದೇನು ಬರಿಯ ಮಳೆ ನೀರಲ್ಲ।**
**ಕೆರೆಯ ನೀರ್ ಊರ ಮೈ ಸೋಂಕುಗಳ ಬೆರಕೆ ॥**
**ಧರೆಯ ರಸವಾಸನೆಗಳಾಗಸದ ನಿರ್ಮಲದ।**
**ವರವ ಕದಡಾಗಿಪುವು - ಮಂಕುತಿಮ್ಮ॥**

ಮುಕ್ತ ಚಿಂತನೆಯ ಹಂಬಲ ಎಲ್ಲ ವಿಚಾರವಂತರಿಗೂ ಇದ್ದದ್ದೇ. ''ಆಚರಣೆಯ ಬಂಧನವಿಲ್ಲದ ಪೂಜೆ'' ಎಂಬ ವಿಚಾರವನ್ನು ಬರ್ಟ್ರಂಡ್ ರಸೆಲ್ ಮಂಡಿಸಿದ ಹಾಗೆಯೇ 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' – ಎಂದು ಕುವೆಂಪು ಅವರು ಕರೆನೀಡಿದ್ದಾರೆ. ಆದರೆ ಪರಿಶುದ್ಧ ವಿಚಾರಗಳನ್ನು ಪಡೆದುಕೊಳ್ಳುವ ಪರಿ ಹೇಗೆ? ಇದು ಪರಿಹರಿಸಲಾಗದ ಗೋಜಲು.

ಕಶ್ಮಲದ ಸಾಂಕ್ರಾಮಿಕತೆಯು ವಸ್ತುವನ್ನು ಯಾವುದರಲ್ಲಿ ಇರಿಸಲಾಗಿದೆ ಎಂಬುದನ್ನು ಅವಲಂಬಿಸುತ್ತದೆ, ಎಂಬ ಮಾತಿದೆ. ಹೀಗಾಗಿ ಯಾರದೋ ಮುಕ್ತ ಮನಸ್ಸಿನ ವಿಚಾರ ನಮಗೆ ನೇರವಾಗಿ ತಲುಪದೆ ಇನ್ನೊಬ್ಬರ ಮೂಲಕ ತಲಪಿತ್ತೆನ್ನೋಣ. ಆಗ ಅವರು ಆ ಮುಕ್ತ ವಿಚಾರಕ್ಕೆ ತಮ್ಮ ಗ್ರಹಿಕೆಯನ್ನು ಬೆರೆಸುವುದಿಲ್ಲವೆಂಬ ಖಾತರಿಯಾದರೂ ಏನು? ಇಂತಹ ಪ್ರವೃತ್ತಿಯನ್ನು 'ಸೊಲ್ಲಿಗೆ ಶರಣರ ಕತೆಗಳ ಪೇಳುತ ಸಲ್ಲದ ನುಡಿಯನು ನುಡಿಯುವಿರಲ್ಲಾ? ಎಲ್ಲಾ ನಾ ಬಲ್ಲೆನೆನ್ನುವಿರಲ್ಲ; ಅವಗುಣ ಬಿಡಲಿಲ್ಲ' ಎಂದು ಪುರಂದರದಾಸರು ಗೇಲಿಮಾಡಿದ್ದಾರೆ. ಸದಾಶಯದ ಹೇಳಿಕೆಗಳನ್ನು ತಮ್ಮ ಸಂದರ್ಭಕ್ಕೆ ಅನುಸಾರವಾಗಿ ತಿರುಚಿ ಸ್ವಕಾರ್ಯ ಸಾಧನೆ ಮಾಡುವವರಿರುವಾಗ ಮುಕ್ತ ಮನಸ್ಸಿನ ಮುಗ್ಧ ಚಿಂತನೆ ನಮಗೆ ತಲಪುವಾಗ ಯಾವ ಸ್ವರೂಪದ್ದಾಗಿರುತ್ತದೆ?

ಆಗಸದ ನಿರ್ಮಲದ ವರ – ಮಳೆಯ ಶುದ್ಧ ನೀರೇನೋ ಸರಿ. ಆದರೆ ಆ ನೀರು ಧರೆಯ ರಸವಾಸನೆಗಳು ಬೆರೆತು ಕದಡಾಗಿರುವ ಬಗ್ಗೆ ಎಚ್ಚರಿಕೆಯಿಂದಿರುವಂತೆ ಮಂಕುತಿಮ್ಮ ನೆನಪಿಸುವುದೇ ಈ ಪದ್ಯದ ವಿಶೇಷ. ಆದರೆ ಈ ಪದ್ಯ ಎಚ್ಚರಿಕೆ ನೀಡುವುದು ಅನ್ಯರು ಮಾಡುವ ಕೆರೆನೀರು, ಊರ ಮೈಸೋಂಕುಗಳ ಬೆರಕೆಯ ಬಗೆಗೆ ಹೊರಜಗತ್ತು ಸೇರಿಸುವ ಕೊಳೆಯನ್ನು ಕುರಿತ ಕಳಕಳಿ ಇದು.

ಜಗತ್ತಿನ ಆಗುಹೋಗುಗಳ ಬಗೆಗೆ ತಿಳಿಯ ಹೊರಡುವ ನಾವು ಅವಲಂಬಿಸುವುದು ಸುದ್ದಿ ಮಾಧ್ಯಮಗಳನ್ನು ಹಾಗೂ ಆ ಸುದ್ದಿಯನ್ನು ವಿಶ್ಲೇಷಿಸುವ ಲೇಖನಗಳನ್ನು. ಈ ಮಾಧ್ಯಮಗಳು ತಮ್ಮ ಹಿತಾಸಕ್ತಿಗಳನ್ನು ಬೆರೆಸುವುದಿಲ್ಲವೆಂಬ ಖಾತರಿ ಎಲ್ಲಿದೆ? ಸರಕಾರದವರೂ ಈ ಮಾಧ್ಯಮದವರನ್ನು 'ಸುಸ್ಥಿತಿ'ಯಲ್ಲಿ ನೋಡಿಕೊಂಡು ಅವರ 'ಉಪ್ಪಿನ ಋಣ' ತೀರಿಸುವ ಮಾಧ್ಯಮಗಳಲ್ಲಿ ಅದೆಷ್ಟು ಬಾರಿ ವಿರುದ್ಧವೆಂದ ಅಭಿಪ್ರಾಯಗಳು ವಿಶ್ಲೇಷಣೆಗಳು ಮೂಡಿಬಂದಿಲ್ಲ? ಹೀಗಾಗಿ 'ಮಂಕುತಿಮ್ಮ' ಪ್ರಸ್ತಾಪಿಸುವ ಕಲಬೆರಕೆ ವ್ಯಕ್ತಿ ಮಟ್ಟದಲ್ಲಿಯೇ ಅಲ್ಲದೆ ವ್ಯವಸ್ಥಿತ ಸಂಘಟನೆಗಳ ಮಟ್ಟದಲ್ಲಿ ಆಗುವ ಸಾಧ್ಯತೆಯನ್ನು ತಳ್ಳಿಹಾಕಲು ಬರುವುದಿಲ್ಲ. ಈ ಕಲಬೆರಕೆಯನ್ನು ತಪ್ಪಿಸಲು ಸಾಧ್ಯವಿಲ್ಲದಿದ್ದರೂ ಶೋಧಿಸಿ ನೀರು ಕುಡಿಯುವ ಅಂದರೆ ಜಾಗ್ರತರಾಗಿ ಮರುಪರಿಶೀಲಿಸುವ ಸೂಕ್ಷ್ಮ ಬೆಳೆಸಿಕೊಳ್ಳುವುದಲ್ಲದೆ ಬೇರೆ ಯಾವ ದಾರಿ ಇದೆ? ಡಿ.ವಿ.ಜಿ.ಯವರ ಈ ರೂಪಕವನ್ನು ಮುಂದುವರಿಸೋಣ. ಮಳೆನೀರು ಧರೆಯ ರಸ ವಾಸನೆಗಳಿಂದ ಮಾತ್ರ ಕಲುಷಿತವಾಗುತ್ತಿಲ್ಲ. ಕಸ ಆಗಸಕ್ಕೂ ವ್ಯಾಪಿಸಿದೆ. ಆಗಸದಲ್ಲಿನ ಅನಿಲ ಮಾಲಿನ್ಯಗಳು ಮಳೆನೀರಿನೊಂದಿಗೆ ಬೆರೆತು ಆಮ್ಲ ಮಳೆಗೆ ಕಾರಣವಾಗಿದೆ. ಆಗಸ ನೀಡುವ ವರ 'ನಿರ್ಮಲವಾಗಿಲ್ಲ'! ಧರೆಗೆ ಸೇರುವ ವೇಳೆಗೇ ಮಳೆಯ ಸಿಹಿನೀರು ಹುಳಿಯಾಗಿಬಿಡುತ್ತಿದೆ.

ಅಂದರೆ 'ತಿಳಿ' ಮನದ ಜನ ನೀಡುವ ನೇರ 'ತಿಳಿವೂ' ಕೇಳುಗನ ಆಂತರ್ಯದ ಮಾಲಿನ್ಯದಿಂದಾಗಿ ಕೊಳೆಯಾಗಿಯೇ ಗ್ರಹಿಕೆಯಾಗುತ್ತದೆ. ಈಗ ಪ್ರಸ್ತಾಪವಾಗುತ್ತಿರುವ ಮಾಲಿನ್ಯ ಹೊರಜಗತ್ತಿನ ಕೆರೆ, ಊರ ಮೈನ ಮಾಲಿನ್ಯವಲ್ಲ; ಧರೆಯ ರಸ ವಾಸನೆಗಳಲ್ಲ. ನಾವೇ ನಮ್ಮೊಳಗೇ ಬೆಳೆಸಿಕೊಂಡು ಬಂದಿರುವ ಪೂರ್ವಗ್ರಹ. ಪೂರ್ವಗ್ರಹ ಎಂದರೇನು? ಅದಕ್ಕೆ ದೀರ್ಘ ವ್ಯಾಖ್ಯಾನ ಬೇಕಿಲ್ಲ. ಮುಂಚೆ ಕೈಗೊಂಡ ತೀರ್ಮಾನ ಎಂದು ಇದರ ಅರ್ಥ. ಆದರೆ ನೀವು ಯಾರ ಬಳಿಯಾದರೂ 'ಪೂರ್ವಗ್ರಹ' ಎಂಬ ಪದ ಹೇಳಿದರೆ ಅವರು 'ಮುಂಚಿತವಾಗಿ ಬೆಳೆಸಿಕೊಂಡ ತಪ್ಪು ತಿಳಿವು' ಎಂದೇ ಅರ್ಥೈಸಿಕೊಳ್ಳುವರು. 'ಪೂರ್ವಗ್ರಹ' ಎಂಬ ಪದದ ಬಗೆಗೇ ನಮಗೆ 'ಪೂರ್ವಗ್ರಹ'!

ಒಮ್ಮೆ ಮಾಲಿನ್ಯದ ವ್ಯಾಪಕತೆಯನ್ನು ಸ್ಪಷ್ಟಪಡಿಸುವ ಸಲುವಾಗಿ ಭಾಷಣಕಾರರೊಬ್ಬರು ಹೀಗೆ ಹೇಳಿದರು: ''ಗರ್ಭದಿಂದ ಮೊದಲುಗೊಂಡು ಗೋರಿಯವರೆಗೆ ಮಾಲಿನ್ಯದ ವ್ಯಾಪ್ತಿ ಇದೆ.'' ಅವರು ಅದನ್ನು ಇಂಗ್ಲಿಷಿನಲ್ಲಿ ಹೇಳಿದ್ದರು. ಆದರೆ ಅವರಿಗೆ ಇಂಗಿತ ಸ್ಪಷ್ಟವಾಗಿದೆ.

ಕೂಡಲೆ ಸಭಿಕರೊಬ್ಬರು ಎದ್ದು ನಿಂತು ರೋಷಾವೇಶದಿಂದ ಹೀಗೆ ಹೇಳಿದರು: ''ನೀವು ನಿಮ್ಮ ನಾಲಿಗೆಯನ್ನು ಉದ್ದ ಬೆಳೆಸಿದ್ದೀರಿ. ನಿಮ್ಮ ಮಥಿತಾರ್ಥವೇನು? ಗರ್ಭದಲ್ಲಿ ಮಾಲಿನ್ಯವೆಂದರೆ ನಮ್ಮ ತಂದೆ ತಾಯಿಯರು ನಡತೆಗೆಟ್ಟವರೇ ಎಂದು ನಿಮ್ಮ ತೀರ್ಮಾನ? ನಿಮ್ಮ ದೃಷ್ಟಿಯಲ್ಲಿ ನಾವೆಲ್ಲರೂ ವ್ಯಭಿಚಾರದ ಶನಿಸಂತಾನ.''

ಆಗ ಭಾಷಣಕಾರರು ನಿರುದ್ವಿಗ್ನರಾಗಿ ಹೀಗೆ ಹೇಳಿದರು: ''ಸ್ವಾಮಿ, ನಿಮ್ಮ ವಿಚಾರಗಳೂ ಮಲಿನಗೊಂಡಿವೆ. ಅದಕ್ಕೇ ನನ್ನ ಮಾತಿಗೆ ವಿಪರೀತಾರ್ಥ ಹೇಳುತ್ತಾ ಇರುವಿರಿ. ವಾಸ್ತವವೆಂದರೆ ನಾನು ಹೇಳಿದ್ದೇ ಬೇರೆ. ಗರ್ಭಿಣಿ ತಾಯಿಯರು ಕಲಬೆರಕೆ ಆಹಾರ ಸೇವಿಸಿ ಗರ್ಭಸ್ಥ ಶಿಶುವೂ ಕಲಬೆರಕೆಯಾಗಿರುತ್ತದೆ ಎಂಬ ಅರ್ಥದಲ್ಲಿ ನಾನು ಹೇಳಿದೆ. ತಾಯಿ ಕುಡಿಸುವ ಎದೆಹಾಲಿನಲ್ಲಿ ಡಿಡಿಟಿ ಇರುವ ಬಗ್ಗೆ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಬಗ್ಗೆ ಓದಿದ್ದೀರಿ ತಾನೆ?''

ಹೀಗೆ ಹೊರಗೆ ದೊರೆಯುವ ಮಾಹಿತಿಯ ಕಲಬೆರಕೆಯಲ್ಲದೆ ನಮ್ಮೊಳಗೇ ಕುಳಿತು ಕಲಬೆರಕೆ ಮಾಡುವ ಗುಮಾನಿಗಳು, ನಿರೀಕ್ಷೆಗಳು, ಪೂರ್ವಗ್ರಹಿಕೆಗಳು ಆಗಸದ ತಿಳಿನೀರ ವರವನ್ನು ರಾಡಿಗೊಳಿಸುವುದಿಲ್ಲವೆ?

ಪರಿಸರವನ್ನೂ ನಮ್ಮನ್ನೂ ಪರಿಶೋಧಿಸಿ ಮಾಲಿನ್ಯರಹಿತವಲಯವಾಗಿಸುವುದು ತೀರಾ ಅಸಾಧ್ಯ ಎನ್ನುತ್ತೀರಾ? ಹೌದು, ಆ ಬಗ್ಗೆ ನಿರಂತರ ಜಾಗೃತಿ ಉಳಿಸಿಕೊಳ್ಳಬಹುದಲ್ಲವೆ? ಮಾಲಿನ್ಯ ಅನಿವಾರ್ಯ, ವಾಸ್ತವವೆಂದು ಹೊಗೆಯಲ್ಲಿ ನಿಲ್ಲುತ್ತೀರೋ ಪಕ್ಕಕ್ಕೆ ಸರಿಯುತ್ತೀರೋ?

**ಪ್ರೊ॥ ಎಂ. ಆರ್. ನಾಗರಾಜು**
ಎಫ್-೩, ಎಸ್.ಎಫ್.ಎಸ್. ನಿವಾಸಗಳು
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೦೬೪

## ಹಂಗು



ನಿದ್ದೆ ಕೆಡಿಸಿದ ಹೆಣ್ಣಿಗೆಷ್ಟು ವಯಸ್ಸು?
ವಯಸ್ಸಾಗುವುದು ದೇಹಕ್ಕೋ ಮನಸ್ಸಿಗೋ?
ಅದು ವೇದಾಂತದ ಪ್ರಶ್ನೆ;

ಬೀಸುವ ಗಾಳಿಯ ಅಲೆಗೆ
ಕುಡಿವ ನೀರಿನ ಹನಿಗೆ
ಕೇಳುವ ದನಿಯ ಸವಿಗೆ
ತಿನ್ನುವ ಅನ್ನದ ರುಚಿಗೆ
ವಯಸ್ಸಿನ ಹಂಗೆಲ್ಲಿಯದೋ
ಸುಪ್ರೀತೇಶ್ವರಾ!

ಗಣಪತಿ ಬಾಳುಗೋಡು

# ಕೋಪವನ್ನು ಸದುಪಯೋಗಪಡಿಸಿಕೊಳ್ಳಬಹುದು

**ಕಾ**ಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಇವು ಅರಿಷಡ್ವರ್ಗಗಳು. ಇವು ಮಾನವನ ಜೀವನದಲ್ಲಿ ಸೇರಿಕೊಂಡು ಅನೇಕ ಅನಾಹುತಗಳನ್ನೆಸಗುತ್ತವೆ. ಇಂದಿನ ಸಮಾಜದ ಎಲ್ಲ ಅವಘಡಗಳಿಗೆ ಮಾನವನಲ್ಲಿರುವ ಈ ಅರಿಷಡ್ವರ್ಗಗಳೇ ಕಾರಣೀಭೂತವಾಗಿವೆ. ಕೋಪ ಅಥವಾ ಕ್ರೋಧ ಉಂಟಾಗದ ಮಾನವನೇ ಇಲ್ಲವೇನೋ! ತನ್ನಲ್ಲಿ ಉಂಟಾಗುತ್ತಿರುವ ಈ ಕ್ರೋಧವನ್ನು ಸದುಪಯೋಗಪಡಿಸಿಕೊಂಡರೆ ಮಾನವ ಸಮಾಜಕ್ಕೆ, ಆ ಮೂಲಕ ದೇಶಕ್ಕೆ, ಒಳಿತಾಗುವಂಥ ಕಾರ್ಯಗಳನ್ನು ಮಾಡಲು ಸಹಾಯಕವಾಗಬಹುದು ಎಂದೆನಿಸುತ್ತದೆ. ಕ್ರೋಧ ಎನ್ನುವುದು ಮಾನವನ ಮನಸ್ಸಿನ ಆಂತರಿಕ ಉದ್ವೇಗದ ಒಂದು ಮನೋಭಾವನೆಯಾಗಿರುತ್ತದೆ. ಸುಖ, ದುಃಖ, ಭಯ, ಭೀತಿ ಇರುವಂತೆ ಇದೂ ಒಂದು.

ಕೋಪವುಂಟಾಗಲು ಇಂಥದೇ ಕಾರಣಗಳು ಬೇಕೆಂದೇನಿಲ್ಲ. ಕ್ಷುಲ್ಲಕ ಕಾರಣಕ್ಕೂ ಮಾನವ ಕೋಪಾವಿಷ್ಟನಾಗುತ್ತಾನೆ. ಈ ಕೋಪವನ್ನು ಒಳ್ಳೆಯದು ಅಥವಾ ಕೆಟ್ಟದ್ದು ಎನ್ನಲಾಗದು. ಇದು ಮಾನವ ದೇಹದಲ್ಲಿ ಉಂಟಾಗುವ ಒಂದು ಶಕ್ತಿಯಾಗಿರುತ್ತದೆ. ಮಾನವನು ಕೋಪಗೊಂಡಾಗ ಅವನ ದೇಹದಲ್ಲಿರುವ ರಸದೂತಗಳಲ್ಲೊಂದಾದ 'ಅಡ್ರಿನಲಿನ್' ಗ್ರಂಥಿಗಳು ಹೆಚ್ಚು ಸ್ರಾವವನ್ನು ಸ್ರವಿಸುತ್ತವೆ. ಆಗ ನಾವು ಹೆಚ್ಚು ಶಕ್ತಿವಂತರಾದೆವೆಂದು ಭಾವಿಸುತ್ತೇವೆ. ಹಾಗೆ ಉಂಟಾದ ಆ ಶಕ್ತಿಯಿಂದ ನಮ್ಮ ಕೋಪದ ಮೂಲವನ್ನು ನಿವಾರಿಸಿಕೊಳ್ಳಲು ಬಯಸುತ್ತೇವೆ. ಆಗ ಉಂಟಾದ ಉದ್ವೇಗದಲ್ಲಿ ನಮಗೆ ನೋವಿನ ಅನುಭವವಾಗುವುದಿಲ್ಲ. ಅಂಥ ಶಕ್ತಿಯನ್ನು ನಾವು ನಕಾರಾತ್ಮಕವಾಗಿ ಬಳಸಿಕೊಳ್ಳದೇ ಸಕಾರಾತ್ಮಕವಾಗಿ ಬಳಸಿಕೊಳ್ಳಬಹುದು. ಅದರಿಂದ ಒಳ್ಳೆಯ ಪ್ರಯೋಜನವನ್ನು ಪಡೆಯಬಹುದು. ಮೊದಲಿನ ನಿರ್ಧಾರದಿಂದ ಕೆಡುಕಾದರೆ ಎರಡನೆಯ ನಿರ್ಧಾರದಿಂದ ನಮ್ಮ ಜೀವನದಲ್ಲಿ ಬರುವ ಅಡೆತಡೆಗಳನ್ನು, ಸಂಕಷ್ಟಗಳನ್ನು ಎದುರಿಸಲು ಪ್ರಯತ್ನಿಸಬಹುದು. ಉಪಯುಕ್ತವಲ್ಲದ ಕೋಪದಿಂದ ಏನೂ ಸಾಧಿಸಲಾಗದು ಎನ್ನುವುದನ್ನು ಮನಗಾಣಬೇಕು.

ಇಂತಹ ಉಪಯುಕ್ತವಾದ ಕೋಪದಿಂದ ನಾವು ಕ್ರಿಯಾಶೀಲರಾಗುತ್ತೇವೆ. ಅದು ನಮ್ಮ ಸಂಘಟನಾ ಶಕ್ತಿಯನ್ನು ಹೆಚ್ಚಿಸುತ್ತದೆ. ಆದ್ದರಿಂದ ಅಂತಹ ಕೋಪಗಳಿಂದ ಅಸಾಧ್ಯವಾದಂಥ ಕೆಲಸಕಾರ್ಯಗಳು, ಹೊಸ ಹೊಸ ಸಂಶೋಧನೆಗಳು, ಹೊಸ ಹೊಸ ಆವಿಷ್ಕಾರಗಳು ಸಂಭವಿಸಿ ಸಮಾಜದ ಅಭಿವೃದ್ಧಿಗೆ ಸಹಾಯಕವಾಗುತ್ತವೆ. ನಾವು ನಿತ್ಯಜೀವನದಲ್ಲಿ ಸಣ್ಣ ಸಣ್ಣ ಕಾರಣಗಳಿಗೂ ಕೋಪಾವಿಷ್ಟರಾಗುತ್ತೇವೆ. ಮನೆಯಲ್ಲಿ ಅಡುಗೆ ಖಾರವಾಗಿದ್ದರೆ ಕೋಪ, ಬಿಸಿಯಾಗಿದ್ದರೆ ಕೋಪ, ನಿಗದಿತ ಕೆಲಸಗಳಿಗೆ ಸಮಯಕ್ಕೆ ಸರಿಯಾಗಿ ಹೋಗಲಾಗದಿದ್ದರೆ ಕೋಪ, ಸಮಯಕ್ಕೆ ಸರಿಯಾಗಿ ಬಸ್ ಬರದಿದ್ದರೆ ಕೋಪ, ಪರೀಕ್ಷೆಯಲ್ಲಿ ನಪಾಸಾದರೆ, ಸಿನೆಮಾಕ್ಕೆ ಟಿಕೆಟ್ ಸಿಗದಿದ್ದರೆ, ಕೊನೆಗೆ ಮನೆಯಲ್ಲಿ ಮಕ್ಕಳು ಅತ್ತರೆ ಅದಕ್ಕೂ ಕೋಪ. ಹೀಗೆ ಕೋಪವುಂಟಾಗಲು ಕಾರಣಗಳೇ ಬೇಕು ಎಂದೇನಿಲ್ಲ. ಚಿಕ್ಕ ಚಿಕ್ಕ ವಿಷಯಗಳಿಗೂ ಕೋಪ ಬರುತ್ತದೆ.




ಕೋಪ ಎನ್ನುವುದು ಮಾನವನಿಗೆ ಆನುವಂಶಿಕವೋ ಏನೋ ಎಂದೆನಿಸುತ್ತದೆ. ತಂದೆ ಉಗ್ರ ಕೋಪಿಯಾದರೆ, ಮಗನಾದವನು ತನ್ನ ಜೀವನದಲ್ಲಿ ಚಿಕ್ಕಂದಿನಿಂದ ತಂದೆಯ ಕೋಪದ ಪ್ರಭಾವವನ್ನು ನೋಡಿ, ತಾನೂ ಅವನಂತೆ ಆ ಗುಣವನ್ನೇ ಬೆಳೆಸಿಕೊಂಡು ಮುಂದೆ ತನ್ನ ಜೀವನದಲ್ಲಿ ತಂದೆಯಂತಾಗುತ್ತಾನೆ. ಮುಂದೆ ಅವನಿಗೆ ಹುಟ್ಟುವ ಮಕ್ಕಳೂ ಸಹ ಅವರ ತಂದೆಯ ಗುಣವನ್ನೇ ಅಳವಡಿಸಿಕೊಳ್ಳುತ್ತಾರೆ. ಹೀಗೆ ಈ ಕೋಪ ಎನ್ನುವುದು ಆನುವಂಶಿಕವಾಗಿ ಅವರ ಜೀವನದಲ್ಲಿ ಹಾಸುಹೊಕ್ಕಾಗಿರುತ್ತದೆ.

ಕೋಪದಿಂದ ದುರ್ನಡತೆಯನ್ನು, ದುರ್ಜನರನ್ನು ಮಟ್ಟ ಹಾಕಿ ಸಮಾಜಕ್ಕೆ ಒಳ್ಳೆಯದನ್ನು ಮಾಡಬಹುದು. ಇಲ್ಲಿ ಕೋಪ ಎನ್ನುವುದು ಸಮಾಜದ ಒಳಿತಿಗಾಗಿ ಉಪಯೋಗವಾಗಿದೆ ಎಂದೆನಿಸುತ್ತದೆ. ಸಮಾಜದ ವರ್ಗೀಕರಣ, ಧರ್ಮದ ಹೆಸರಿನಲ್ಲಿ ನಡೆಯುವ ವ್ಯಾಪಾರ, ಎಲ್ಲೆಲ್ಲೂ ವ್ಯಾಪಿಸಿರುವ ಭ್ರಷ್ಟಾಚಾರಗಳು, ಲಂಚಕೋರತನ, ನಮ್ಮ ಸರಕಾರದ ರೀತಿನೀತಿಗಳು, ಸಮಾಜದಲ್ಲಿ ನಡೆಯುವ ನ್ಯಾಯ-ಅನ್ಯಾಯಗಳು ಇವೆಲ್ಲವೂ ಮಾನವನ ಕೋಪವನ್ನು ಹೆಚ್ಚಿಸುತ್ತವೆ. ಹೀಗೆ ನಾವು ಚಿಕ್ಕಂದಿನಿಂದಲೇ ಕೋಪೋದ್ರಿಕ್ತ ವಾತಾವರಣದಲ್ಲಿ ಉಸಿರಾಡುವುದರಿಂದ ನಮಗೆ ಕೋಪರಹಿತ ಸಾಮಾನ್ಯಸ್ಥಿತಿಯ ಅರಿವು ಇರಲಾರದು.

ಇಷ್ಟೇ ಅಲ್ಲದೆ, ಇತ್ತೀಚೆಗೆ, ಇಂದಿನ ನಮ್ಮ ತರುಣರಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ಸ್ಪರ್ಧಾತ್ಮಕ ಮನೋಭಾವ ಹೆಚ್ಚಾಗುತ್ತಿದೆ. ತಾನು ಇನ್ನೊಬ್ಬನಿಗಿಂತ ಮೇಲೆ ಬರಬೇಕು ಎನ್ನುವ ತುಡಿತದಲ್ಲಿ ಇರುವಾಗ ತನ್ನ ಹೆಚ್ಚಿನ ಸಮಯವನ್ನು ಮಾನಸಿಕ ಒತ್ತಡದಲ್ಲಿಯೇ ಕಳೆಯುತ್ತಾನೆ. ಆಗ ಅವನಿಗೆ ವಿಶ್ರಾಂತಿಗೆ ಸಮಯವಿರುವುದಿಲ್ಲ. ಸದಾ ಸಿಡಿಮಿಡಿಗೊಳ್ಳುತ್ತಿರುತ್ತಾನೆ. ಈ ಕೋಪ ಮಿತಿಮೀರಿದಾಗಲೆಲ್ಲಾ ಅನ್ಯರಿಗೆ ಕಿರಿಕಿರಿಯನ್ನುಂಟುಮಾಡುತ್ತಾನೆ. ಕೋಪದ ಭರದಲ್ಲಿ ಮಾಡಬಾರದ ಕೆಲಸಗಳನ್ನು ಮಾಡಿ ಅಪರಾಧಿಗಳಾಗುತ್ತಾರೆ. ಕೋಪಾವಿಷ್ಟ ಮಾನವ ತಾನು ಏನೂ ಮಾಡಲು ಹೇಸಲಾರ. ಅತ್ಯಾಚಾರ, ಹತ್ಯೆ, ಒಬ್ಬರ ಸರ್ವನಾಶ, ಹೀಗೆ ಅನೇಕ ಅನಿಷ್ಟಕಾರಕ ಘಟನೆಗಳು ಕೋಪದ ಭರದಲ್ಲಿ ಜರುಗುತ್ತವೆ. ಇಂಥ ಕೋಪವನ್ನು ನಾವು ದುರ್ಬಳಕೆಯಾಗಲು ಅವಕಾಶ ಮಾಡಿಕೊಡದೆ, ಸದ್ಬಳಕೆಯಾಗುವಂತೆ ಉಪಯೋಗಿಸಿಕೊಂಡು ಸಮಾಜದ, ದೇಶದ ಒಳಿತಿಗಾಗಿ ಪ್ರಯತ್ನಿಸಬೇಕು.

ಕೋಪವನ್ನು ತಡೆಯುವುದು ಸುಲಭವಲ್ಲ. ಅದನ್ನು ಆದಷ್ಟು ತ್ಯಜಿಸುವ ಸಂಕಲ್ಪ ಮಾಡಬೇಕು. ಇದು ಬಹಳ ಕಷ್ಟದ ಕೆಲಸ. ಆದರೂ ದೃಢ ಸಂಕಲ್ಪ ಮಾಡಿ ಮನಸ್ಸಿನ ಉದ್ವೇಗವನ್ನು ಕಡಿಮೆ ಮಾಡಿಕೊಂಡು, ನಮ್ಮ ಮನಸ್ಸನ್ನು ಯೋಗ, ಧ್ಯಾನ, ಏಕಾಗ್ರತೆಯಲ್ಲಿ ಅಪಾರ ನಿಷ್ಠೆಯಿಂದ ತೊಡಗಿಸಿಕೊಳ್ಳಬೇಕು. ಸಾಮಾಜಿಕ ಜೀವನದಲ್ಲಿ ಸತ್ಕಾರ್ಯಗಳಿಗಾಗಿ ನಮ್ಮ ಕೋಪವನ್ನು ಉಪಯೋಗಿಸಿಕೊಳ್ಳಬೇಕು. ಬಡವರ ಹಿತಕ್ಕಾಗಿ ಆತ್ಮಸಮರ್ಪಣೆ ಮಾಡಿಕೊಳ್ಳಬೇಕು. ಹಾಗಾದಾಗ ಮಾತ್ರ ಕೋಪದಿಂದ ದುರುಪಯೋಗಗಳಾಗದೆ ಸದುಪಯೋಗಗಳಾಗುವುದು ಸಾಧ್ಯ.


ಎಂ. ಬಿ. ನಾಯ್ಕ
ಮೊದಲನೇ ಮುಖ್ಯ ರಸ್ತೆ, ಎರಡನೇ ಅಡ್ಡ ರಸ್ತೆ, ಶಾಂತಿನಗರ
ಹಾಸನ - ೫೭೩ ೨೦೧

**HOSATHU** Kannada Monthly / March 2007 Rs. 12
Registered CPMG / KA / BGE – 7 / 2006-08. Posted at Bangalore PSO on the 28th of every month
WPP No. 14. Licenced to post without prepayment. RNI Regn. No. KARKAN/1999/614.